# ಶ್ರೀ ಬಬಲೇಶ್ವರ ಶಿವಯೋಗಿಗಳು









"ಶಾಂತವೀರ"

ಶ್ರೀ ಬಬಲೇಶ್ವರ ಶಿವಯೋಗಿಗಳ ಗ್ರಂಥ ಪ್ರಕಟನಾ ಸಮಿತಿ

ಆತ್ಮೀಯರಾದ ಪೂಜ್ಯಶ್ರೀ

ಮಹೇಶ್ವರ ದೇವರು ಬದಾಮಿ

ಇವರಿಗೆ,

ಹಾರ್ದಿಕ ಕೊಡುಗೆ

ತಾ॥ ೧೫-೭-೮೪

ಎಸ್. ಮಹಾದೇವ ಶಿ.

ಷ. ಬ್ರ. ಶ್ರೀ ಮಹಾದೇವ ಶಿವಾಚಾರ್ಯ
ಸ್ವಾಮಿಗಳು ಹಿರೇಮಠ, ಬಬಲೇಶ್ವರ
(ತಾ. ಜಿ. ವಿಜಾಪೂರ,)

## ಶ್ರೀ ರೇಣುಕರಿಂದ ಅಗಸ್ತ್ಯರಿಗೆ ಉಪದೇಶ



ಶ್ರೀ ಜಗದ್ಗುರು ರೇಣುಕರಿಗೆ

**ಕಾಣಿಕೆಯಾಗಿ**

**" ಶ್ರೀ ಬಬಲೇಶ್ವರ ಶಿವಯೋಗಿಗಳು "**

ಸದ್ಗ್ರಂಥದ ಸಮರ್ಪಣ



ಲಿಂ. ಮಲ್ಲಪ್ಪ ದೇಸಾಯರು
ಎಡಹಳ್ಳಿ



ಶ್ರೀಮತಿ ಲಕ್ಷ್ಮೀಬಾಯಿ ದೇಸಾಯರು
ಎಡಹಳ್ಳಿ

ರಾಜ್ಯ ಸಭೆಯ ಸದಸ್ಯರಾದ

**ಶ್ರೀ ಆರ್. ಎಂ. ದೇಸಾಯಿ ಎಡಹಳ್ಳಿ ಅವರು**

ತಮ್ಮ ಪೂಜ್ಯ ಮಾತಾ, ಪಿತೃಗಳ ಸ್ಮರಣಾರ್ಥ

**"ಶ್ರೀ ಬಬಲೇಶ್ವರ ಶಿವಯೋಗಿಗಳು"**

ಗ್ರಂಥ ಪ್ರಕಟಣಾ ಕಾರ್ಯಕ್ಕೆ ನೆರವಾಗಲು

ಆತ್ಮೀಯವಾಗಿ

ಮುಂದೆ ಬಂದುದಕ್ಕಾಗಿ

ನಾವು ತುಂಬಾ ಋಣಿಯಾಗಿದ್ದೇವೆ.

ಶ್ರೀ ದೇಸಾಯಿ ಅವರಿಗೂ, ಅವರ ಪರಿವಾರದವರಿಗೂ

ಶಿವಯೋಗಿ ದ್ವಯರ ನಿರಂತರ ಕೃಪಾಶೀರ್ವಾದವಿರಲೆಂದು ಹಾರೈಸುತ್ತೇವೆ.

—ಪ್ರಕಾಶಕರು.

"Sri Babaleshwara Shivayogigalu" a brief life sketch of His Holiness Sri Sri Gurupapa Shivayogigalu and Sri Sri Sri Shantha veera Shivayogigalu of Babaleshwar. Published by S. C. Mirji, for Babaleshwara Shivayogigalu Grantha Prakashana Samithi, Babaleshwar 1976 Pages 202 + pp. i to xii.

ಮೊದಲನೆಯ ಮುದ್ರಣ ೧೯೭೬



ಬೆಲೆ : ೧೦ ರೂ.





ಸಂಪಾದಕ ಮಂಡಲ :

ಡಾ॥ ಜ. ಚ. ನಿ.
ಗೊ. ರು. ಚನ್ನಬಸವಪ್ಪ
ಸಿ. ಕೆ. ಪರಶುರಾಮಯ್ಯ
ಶ್ರೀ. ಅ. ಶಿರಹಟ್ಟಿ
ಸ. ಚ. ಮಿರ್ಜಿ

ಮುಖಚಿತ್ರ : ಚಿತ್ರಲೇಖಾ ಆರ್ಟ್ಸ್, ಬೆಂಗಳೂರು-೫೩

ಮುದ್ರಕರು :
ಬೃಂದಾವನ್ ಪ್ರಿಂಟರ್ಸ್ ಆಂಡ್ ಪಬ್ಲಿಷರ್ಸ್ (ಪ್ರೈ.) ಲಿ. ಬೆಂಗಳೂರು-೫೬೦ ೦೦೪



VICE-PRESIDENT
INDIA
NEW DELHI

೧೫ - ೩ - ೭೬

## ಮುನ್ನುಡಿ

ವಿಭೂತಿ ಪುರುಷರ ಪುಣ್ಯ ಸ್ಮರಣೆ ಅವರ ಜೀವನಾದರ್ಶಗಳ ಅನುರಸಣೆಗೆ ಚೇತನದಾಯಕ. ನಮ್ಮ ಭರತ ಭೂಮಿ ಮಾನವ ಜನಾಂಗದ ಶ್ರೇಯಸ್ಸಿಗೆ ಅನೇಕ ವಿಭೂತಿ ಪುರುಷರನ್ನು ನೀಡಿದೆ. ಇದರಲ್ಲಿ ಕರ್ನಾಟಕದ ಕಾಣಿಕೆ ಕಡಿಮೆಯಲ್ಲ.

ಸರ್ವಧರ್ಮಗಳ ಸಮನ್ವಯದ ತೂಗುದೊಟ್ಟಿಲಾಗಿ ಕರ್ನಾಟಕದ ನೆಲ, ಶಾಂತಿ, ಸದ್ಧರ್ಮಗಳನ್ನು ರಕ್ಷಿಸಿಕೊಂಡು ಬಂದಿದೆ. ಇದಕ್ಕೆ ಇಲ್ಲಿ ಆಗಿಹೋದ ಮಹಾ ಮಹಾ ದಾರ್ಶನಿಕರು ಮತ್ತು ಶಿವಯೋಗಿಗಳ ತಪಸ್ಸಿನ ರಕ್ಷಾ ಕವಚವಿದೆಯೆಂದು ನಾನು ಭಾವಿಸಿದ್ದೇನೆ.

ಪ್ರಸ್ತುತ ಕೃತಿ ಅಂತಹ ಪುಣ್ಯ ಮೂರ್ತಿಗಳನ್ನು ಕುರಿತುದಾಗಿದೆ. ವಿಜಾಪುರ ಜಿಲ್ಲೆಯ ಪುಣ್ಯ ಕ್ಷೇತ್ರಗಳಲ್ಲೊಂದಾದ ಬಬಲೇಶ್ವರ ಹಿರಿಯ ಮಠಕ್ಕೆ ನೂರಾರು ವರ್ಷಗಳ ಹಿನ್ನೆಲೆಯಿದೆ.

ಈ ಮಠದ ಪರಂಪರೆಯಲ್ಲಿ ಅತ್ಯಂತ ಸ್ಮರಣೀಯರಾಗಿರುವ ಲಿಂ. ಗುರುಪಾದ ಮಹಾ ಶಿವಯೋಗಿಗಳು ಮತ್ತು ಕಳೆದ ತೊಂಬತ್ತು ವರ್ಷಗಳಿಂದ ನಿರಂತರವಾಗಿ ಮಠದ ಬೆಳಕಾಗಿ, ಭಕ್ತರನ್ನು ಆಶೀರ್ವದಿಸುತ್ತಿರುವ ಪರಮ ಪೂಜ್ಯ ಶ್ರೀ ಶಾಂತವೀರ ಮಹಾ ಶಿವಯೋಗಿಗಳನ್ನು ಕನ್ನಡ ನಾಡಿನ ಎಲ್ಲ ಭಾಗದವರಿಗೂ ಪರಿಚಯ ಮಾಡಿ ಕೊಡಲು ಈ ಕೃತಿ ಸಹಾಯಕವಾಗಿದೆ. ಇಂತಹ ಜೀವನ ಚರಿತ್ರೆ ಸಾಹಿತ್ಯವನ್ನು ಪ್ರಕಟಿಸುವ ಸೇವೆ ನಡೆಸಿದವರನ್ನು ನಾನು ಅಭಿನಂದಿಸುತ್ತೇನೆ.

ಪೂಜ್ಯ ಬಬಲೇಶ್ವರ ಶಿವಯೋಗಿಗಳ ಉದಾತ್ತ ಜೀವನದ ನಿತ್ಯ ಸ್ಮರಣೆಗೆ ಈ ಕೃತಿ ನೆರವಾಗಲೆಂದು ಹಾರೈಸುತ್ತೇನೆ. "ಶ್ರೀ ಬಬಲೇಶ್ವರ ಶಿವಯೋಗಿಗಳು" ಕೃತಿ ಧಾರ್ಮಿಕ ಕ್ಷೇತ್ರಕ್ಕೆ ಮಾತ್ರವಲ್ಲದೆ, ಸಾಹಿತ್ಯ ಕ್ಷೇತ್ರಕ್ಕೂ ಒಂದು ಉತ್ತಮ ಕೊಡುಗೆ.

ನವ ಭಾರತ ನಿರ್ಮಾಣದ ಮೌನ ಕ್ರಾಂತಿಯೊಂದು ನಡೆಯುತ್ತಿರುವ ಪರ್ವಕಾಲ ದಲ್ಲಿ ಈ ಕೃತಿ ಪ್ರಕಟವಾಗುತ್ತಿರುವುದೊಂದು ವಿಶೇಷ. ಬದುಕಿನ ನೆಮ್ಮದಿಗೆ ಆಧ್ಯಾತ್ಮಿಕ ಆಧಾರವಿರಬೇಕೆಂಬುದು ಶ್ರೀ ಬಬಲೇಶ್ವರ ಮಹಾ ಶಿವಯೋಗಿಗಳ ಸಂದೇಶ. ಆ ಸಂದೇಶವು ನಮ್ಮೆಲ್ಲರಿಗೂ ದಾರಿದೀಪವಾಗಲಿ.

—ಬ. ದಾ. ಜತ್ತಿ

# ಇದೊಂದು ಬಂಗಾರದ ಗಂಟೆ !

ಇದು ಒಂದು ನೂರಾ ಮೂವತ್ತುನಾಲ್ಕು ವರುಷಗಳ ಹಿಂದಿನ ಮಾತು. ಬಬಲೇಶ್ವರ ಲಿಂ. ಗುರುಪಾದ ಶಿವಯೋಗಿಗಳು ತೊಂಭತ್ತು ನಾಲ್ಕು ವರುಷ ತಮ್ಮ ಬಂಗಾರದ ಜೀವನವನ್ನು ಭೇರಿ ಬಯಲಾದ ಕಾಲ.

ವೀರಶೈವ ಸಿದ್ಧಾಂತವನ್ನು ಅಕ್ಷರಶಃ ಆಚರಿಸಿ ಅದರಲ್ಲಿ ಅಮರತ್ವ ಪಡೆದ ಸಿದ್ಧ ಪುರುಷರು ; ಶಿವಯೋಗ ಸಂಪನ್ನರು ಲಿಂ. ಗುರುಪಾದ ಶಿವಯೋಗಿಗಳು.

ಅವರ ವಿಷಯವಾಗಿ ಆಗ ಗೋಠೆಯ ಸಿದ್ಧಮಲ್ಲಯ್ಯನವರು ಸಾಲಿಮಠ ಇವರ ವಂಶಜರು ಬರೆದ ಪುರಾಣವು ಒಂದು ಕಾವ್ಯರೂಪದಲ್ಲಿದೆ: ಅದು ಅಚ್ಚು ಕೂಡ ಆಗಿಲ್ಲ.

ಇನ್ನು ಇಂದಿನ ಶ್ರೀ ಶಾಂತವೀರ ಶಿವಯೋಗಿಗಳು ಅವರ ಹೆಜ್ಜೆಯಲ್ಲಿ, ಹೆಜ್ಜೆಯಿಟ್ಟು ಸ್ವಾವಲಂಬನದಿಂದ ಸಾಧಿಸಿದ್ದು ಅಪಾರ: ಅದೊಂದು ಅನಿರ್ವಚನೀಯ ಗುಪ್ತ ಜ್ಞಾನ ಗಂಗೆ!

ಈ ಇಬ್ಬರು ಮಹಾಪುರುಷರನ್ನು ಕಣ್ಣಿದ್ದವರು ಕಂಡು ಪುನೀತರಾಗಿದ್ದಾರೆ. ತಮ್ಮ ಒಳ ಹೊರ ಜೀವನದ ಮೇಲ್ಮೆ ಮೈಗೂಡಿಸಿಕೊಂಡಿದ್ದಾರೆ.

ಆ ಶಿವಯೋಗಿದ್ವಯರು ಸ್ವಯಂ ದೊಡ್ಡವರಾಗಿದ್ದರು : ಅವರನ್ನು ದೊಡ್ಡವರನ್ನಾಗಿ ಮಾಡಲು ಕಾರಣವೇ ಇಲ್ಲ. ಅವರಿಗೆ ಅದು ಬೇಡಿಸದ ಹಾದಿ.

ಅವರ ಮೇಲೆ ಅಪಾರ ನಂಬಿಗೆಯನ್ನಿಟ್ಟ ಭಕ್ತ ಸಮುದಾಯಕ್ಕೆ ಜೀವನದ ಕತ್ತಲು ಕದಲಿ, ಬೆಳಕು ಬೀರಲು ಒಂದು ನಂದಾದೀಪದಂತೆ ನೆರವಾಗುವ ಸಾಹಿತ್ಯದ ಅವಶ್ಯ.

ಈ ಸದುದ್ದೇಶದಿಂದ "ಶ್ರೀ ಬಬಲೇಶ್ವರ ಶಿವಯೋಗಿಗಳು" ಎಂಬ ಹೆಸರಿನಲ್ಲಿ ಈ ಹೊಸ ಹೊತ್ತಿಗೆ ಹೊರತರಲು ಹೆಣಗಲಾಯಿತು.

ಈ ಮಹಾಕಾರ್ಯದಲ್ಲಿ ಕೆಲವು ಸಹೃದಯರಾದ ಸಜ್ಜನರು ಸರ್ವ ರೀತಿ ಸಾಹಿತ್ಯದ ಸಹಾಯ ಸಲ್ಲಿಸಿರುವರು, ಪಡಿಯಚ್ಚುಗಳನ್ನು ಒದಗಿಸಿರುವರು, ಮುದ್ರಣ ಕಾರ್ಯದಲ್ಲಿ ನೆರವಾಗಿರುವರು ; ಮತ್ತು ಕೆಲ ಮಹನೀಯರು ಈ ಪ್ರಕಟನಾ ಕೆಲಸಕ್ಕೆ ಸ್ವಯಂ ಪ್ರೇರಣೆಯಿಂದ ಹಣಕಾಸಿನ ನೆರವು ನೀಡಿದ್ದಾರೆ. ಅವರಿಗೆಲ್ಲ ನಾವು ಚಿರಋಣಿ.

ಈ ಗ್ರಂಥ ಪ್ರಚಾರ ಸಾಹಿತ್ಯವಲ್ಲ: ಅದು ನಮಗೆ ಬೇಕಾಗಿಯೂ ಇಲ್ಲ; ಆದರೆ ಅದರ ಸಹಾಯದಿಂದ ತಮ್ಮ ಜೀವನವನ್ನು ಬಂಗಾರದನ್ನಾಗಿ ಮಾಡಿಕೊಳ್ಳಬೇಕೆಂದು ಬಯಸುವವರಿಗೆ ಇದೊಂದು ಬಂಗಾರದ ಗಂಟೆ: ಬೆಲೆಯುಳ್ಳ ಬಹುದಿನ ಬಾಳುವ ಗಂಟೆ!

ಬಬಲೇಶ್ವರದ ಅಷ್ಟೇ ಅಲ್ಲ ಕರ್ನಾಟಕದ ನಾನಾ ಭಾಗದ ಭಕ್ತರಿಗೆ ಸ್ಫೂರ್ತಿಯು ಚೇತನವಾಗಿರುವ ಬಬಲೇಶ್ವರ ಶಿವಯೋಗಿಗಳ ಜೀವನಾದರ್ಶ ನಾವು ನೀವು ಕೈಹಿಡಿದು ನಡೆಸಬೇಕಾಗಿದೆ. ಆ ಕಾರ್ಯಕ್ಕೆ ಈ ಕೃತಿ ಒಂದು ಅಳಿಲು ಸೇವೆಯೆಂದು ನಮ್ಮ ಭಾವನೆ. ಈ ಪ್ರಕಟಣೆಯ ಪ್ರಬಲ ಉದ್ದೇಶವೂ ಅದೇ ಆಗಿದೆ.

ಬಬಲೇಶ್ವರ ಕೇಂದ್ರದ ಪ್ರತಿಯೊಬ್ಬ ಭಕ್ತನು ಈ ಕೃತಿಯ ಪ್ರಯೋಜನ ಪಡೆದು, ಪ್ರಕಾಶಕರ ಆಶಯ ಮೂರ್ತಸ್ವರೂಪ ಬರುವಂತಾಗಲಿ.

ಇನ್ನು ಈ ಗ್ರಂಥವನ್ನು ಬಬಲೇಶ್ವರ ಹಿರೇಮಠದ ಗುರುಪೀಠದ ಮೂಲ ಶ್ರೀ ಜಗದ್ಗುರು ರೇಣುಕರಿಗೆ ಸಮರ್ಪಿಸಿರುವದು ಸದುಪಯುಕ್ತವಾದುದೆಂಬದನ್ನು ಇಲ್ಲಿ ಸ್ಮರಿಸದಿರಲಾರೆವು.

—ಗ್ರಂಥ ಪ್ರಕಟನಾ ಸಮಿತಿ

# ಸಂಪಾದಕರ ಸದಿಚ್ಛೆ

ಇಂದಿನ ಸಂಸಾರದಲ್ಲಿ ಸರ್ವವನ್ನು ಸಮೃದ್ಧಿಪಡಿಸಲು ಸಾಹಿತ್ಯ ಒಂದು ಸಾಧನ. ಸಾರಭೂತ ಹೊಸ ಹೊತ್ತಿಗೆಗಳು ಹೊರಬರಲೆಂದು ನಮ್ಮ ಹಾರೈಕೆ.

"ಶ್ರೀ ಬಬಲೇಶ್ವರ ಶಿವಯೋಗಿ"ಗಳವರ, ಆಚಾರ-ವಿಚಾರ, ನಡೆ-ನುಡಿ, ಒಳ-ಹೊರಗನ್ನು ನಿಕಟವಾಗಿ ಕಂಡುಕೊಂಡಿರುವ ನಮಗೆ ಅವುಗಳ ಪರಿಚಯ ಸಾರ್ವಜನಿಕವಾಗಿ ಸದ್ಭಕ್ತರಿಗೆ ಆಗುವಂತಾಗಲೆಂಬ ಸದಿಚ್ಛೆ. ಅದಕ್ಕಾಗಿ ಈ ಪ್ರಯತ್ನ.

ಸಾಮಾಜಿಕ ಸಮರ ಜೀವನ ಶಾಂತ ಜೀವನವಾಗಬೇಕೆಂಬ ಸದಾಶಯ ಈ ಪ್ರಯತ್ನಕ್ಕೆ ಕಾರಣ.

ಕರಿಯನ್ನು ಕನ್ನಡಿಯಲ್ಲಿ ಪ್ರತಿಬಿಂಬಿಸುವದು ನೋಡುವವರಿಗೆ ಹಗುರಾಗಿ ಕಂಡರೂ ; ಮಾಡುವವರಿಗೆ ಮಹಾ ಕಠಿಣವಾದ ಕಾರ್ಯ.

ಪುಣ್ಯ ಜೀವಿಗಳ ಬದುಕನ್ನು ಪರಿಚಯ ಮಾಡಿಕೊಡುವ ಕಾರ್ಯ ಸಣ್ಣದಲ್ಲ, ಆದರೂ ಭಕ್ತಿಭಾವನೆಯ ಬೆಂಬಲದಿಂದ ಈ ಸಾಹಸಕ್ಕೆ ಕೈಹಾಕಲಾಗಿದೆ. ಇದರಲ್ಲಿ ನಮಗೆ ದೊರೆತ ಯಶಸ್ಸೆಷ್ಟು ಎಂಬುದನ್ನು ನಿರ್ಧರಿಸುವುದು ಮಹಾ ಜನರಿಗೆ ಸೇರಿದೆ.

"ಶಿವಯೋಗಿ"ಗಳವರ ಆಶೀರ್ವಾದ ಬಲದಿಂದ ಹೊಳೆದುದನ್ನು ಹೊತ್ತಿಗೆಯಲ್ಲಿ ಹಿಡಿದಿಡಲು ಹೆಣಗಿದ್ದೇವೆ; ಇದೊಂದೇ ನಮಗೆ ಸಮಾಧಾನ.

ಓದುಗರ ಅಭಿರುಚಿ ವಿಭಿನ್ನ. ಎಲ್ಲ ಅಭಿರುಚಿಗಳಿಗೂ ತಕ್ಕ ಸಾಹಿತ್ಯವನ್ನು ಒಂದು ಕೃತಿಯಲ್ಲಿ ತರುವುದು ಸಾಗದ ಮಾತು. ಈ ಕೃತಿಯಲ್ಲಿ ಪಡೆದಿರುವುದು ಅಭಿರುಚಿಯ ತೃಪ್ತಿಯಲ್ಲ ; ಒಂದು ಮಹಾ ಜೀವನದಲ್ಲಿ ನಮಗಿದ್ದ ಆಸಕ್ತಿಯ ಅಭಿವ್ಯಕ್ತಿ.

ಬಾಯಾರಿಕೆ ಆದವನಿಗೆ ಇಡೀ ಗಂಗೆಯ ಜಲ ಬೇಕಾಗಿಲ್ಲ ; ಅದರ ಒಂದು ಬಟ್ಟಲ ನೀರಾದರೆ ಸಾಕು. ಬಯಸುವವರಿಗೆ ಬಟ್ಟೆ ತೋರಿಸುವ ಈ ಬಲವುಳ್ಳ ಬರಹದ ಬೆಲೆ ಎಷ್ಟೆಂಬುದನ್ನು ಅವರು ಅರಿತು, ಆಚರಣೆಗೆ ಇಳಿಸಿದರೆ ನಮ್ಮ ಈ ದುಡಿಮೆ ಸಾರ್ಥಕ.

"ಶ್ರೀ ಬಬಲೇಶ್ವರ ಶಿವಯೋಗಿಗಳು" ಭಕ್ತಾದಿಗಳಿಗೆಲ್ಲ ಬೆಳಕು ಬೀರಲಿ. ಆ ಬೆಳಕಿನಲ್ಲಿ ಅವರು ಭರದಿಂದ ಮುಂದೆ ಸಾಗಲೆಂಬುದೇ ನಮ್ಮ ಬಯಕೆ.

—ಸಂಪಾದಕ ಮಂಡಲ

# ಲಿಂ. ಮಲ್ಲಪ್ಪ ದೇಸಾಯರು ಎಡಹಳ್ಳಿ

ವಿಜಾಪುರ ಜಿಲ್ಲೆಯಲ್ಲಿ ಎಡಹಳ್ಳಿ ದೇಸಾಯರ ಮನೆತನವೆಂದರೆ ಮನೆಮಾತು. ದೈವಭಕ್ತಿ, ಧರ್ಮಶ್ರದ್ಧೆ, ಜನಸೇವೆ ಈ ಮನೆತನದ ಸತ್ಪರಂಪರೆ.

ಹಿಂದೆ ಕರ್ನಾಟಕದ ಕೆಲವು ಭಾಗ ಪೇಶ್ವೆಯ ಆಡಳಿತಕ್ಕೆ ಒಳಪಟ್ಟ ಕಾಲದಲ್ಲಿ ವಿಜಾಪುರ ಜಿಲ್ಲೆಯ ಗಲಗಲಿ ಪರಗಣೆಗೆ ಸೇರಿದ ಹದಿನಾಲ್ಕು ಹಳ್ಳಿಗಳ ದೇಸಗತಿ ಆಗಿನ ಎಡಹಳ್ಳಿ ದೇಸಾಯರದಾಗಿತ್ತು. ಯಾವುದೋ ಒಂದು ದುರ್ಧರ ಪ್ರಸಂಗದ ಸಂಬಂಧ ಅವರು ಪುಣೆಯಲ್ಲಿ ವಿಚಾರಣೆಗೆ ಒಳಗಾಗಬೇಕಾಯಿತು. ಆ ಸಂದರ್ಭದಲ್ಲಿ ಆಕಸ್ಮಿಕವಾಗಿ ಕಾಶಿ ಸ್ವಾಮಿಗಳೆಂಬ ಸತ್ಪುರುಷರ ದರ್ಶನವಾಯಿತು. ಆ ಸ್ವಾಮಿಗಳ ದರ್ಶನ ಎಷ್ಟು ಅನಿರೀಕ್ಷಿತವೋ ಅಷ್ಟೇ ಅನಿರೀಕ್ಷಿತವಾಗಿ ದೇಸಾಯರ ಕಷ್ಟಗಳು ಪರಿಹಾರವಾದವು.

ದೇಸಾಯರಿಗೆ ಕಾಶಿ ಸ್ವಾಮಿಗಳಲ್ಲಿ ಅಪಾರ ಭಕ್ತಿ ಭಾವ ಬೆಳೆಯಿತು. ತಮ್ಮ ಕಷ್ಟ ನಿವಾರಣೆಗೆ ಆ ಸತ್ಪುರುಷರ ಆಶೀರ್ವಾದವೇ ಕಾರಣವೆಂದು ತಿಳಿದರು. ಅಂತೇ ಸ್ವಾಮಿಗಳನ್ನು ತಮ್ಮ ಜೊತೆಯಲ್ಲಿ ಊರಿಗೆ ಕರೆದುಕೊಂಡು ಬಂದು ಅವರಿಗಾಗಿ ಗಲಗಲಿಯಲ್ಲಿ ಒಂದು ಮಠ ಕಟ್ಟಿಕೊಟ್ಟು ೪೬ ಎಕರೆಯಷ್ಟು ಭೂಮಿಯನ್ನು ಉಂಬಳಿ ಯಾಗಿ ನೀಡಿದರು. ಈಗಲೂ ಗಲಗಲಿಯಲ್ಲಿ ಇರುವ ಮಠಕ್ಕೆ ಕಾಶಿ ಸ್ವಾಮಿಗಳ ಮಠ ವೆಂದೇ ಕರೆಯುತ್ತಾರೆ.

ಗಲಗಲಿಯ ಮಠದ ನಿರ್ಮಾಣದೊಂದಿಗೆ ದೇಸಾಯರ ಮನೆತನದವರಿಗೆ ಸ್ವಾಮಿಗಳ ಸೇವೆಯ ಬಗೆಗೆ ಶ್ರದ್ಧೆ; ಗುರು ಲಿಂಗ ಜಂಗಮರ ಬಗೆಗೆ ಭಕ್ತಿ ಬೆಳೆಯಿತೆಂದು ಹೇಳಬಹುದು. ಆ ಶ್ರದ್ಧೆ-ಭಕ್ತಿಗಳು ಆ ಮನೆತನದಲ್ಲಿ ಇಂದಿಗೂ ಅಚ್ಚಳಿಯದೆ ಉಳಿದುಕೊಂಡು ಬಂದಿವೆ. ಇಂತಹ ಸಾತ್ವಿಕ ಪರಂಪರೆಗೆ ಸೇರಿದವರು ಲಿಂ. ಮಲ್ಲಪ್ಪ ದೇಸಾಯರು ಸಾಧು ಸಜ್ಜನರ ಸೇವೆ, ಗುರು ದೇವತಾ ಕಾರ್ಯವೆಂದರೆ ಮಲ್ಲಪ್ಪ ದೇಸಾಯರು ಯಾವಾಗಲೂ ಮುಂದು.

ಮಲ್ಲಪ್ಪ ದೇಸಾಯರು ಸಾಮಾನ್ಯ ಕುಟುಂಬದಲ್ಲಿ ಹುಟ್ಟಿದರೂ ದೈವೀ ಕರುಣೆ ಯಿಂದ ಏಳೆಂಟು ವಯಸ್ಸಿನಲ್ಲಿದ್ದಾಗಲೇ ಎಡಹಳ್ಳಿ ದೇಸಗತಿ ಗಾದಿಗೆ ಬಂದರು. ಆಗ ಎಡಹಳ್ಳಿ ದೇಸಗತಿಯನ್ನು ಸೋನ್ನದ ಗಂಗಪ್ಪ ದೇಸಾಯರು ನೋಡಿಕೊಳ್ಳುತ್ತಿದ್ದರು. ಬಾಲ್ಯದಿಂದಲೇ ದೈವೀಭಕ್ತಿ, ಸಜ್ಜನಿಕೆಗಳನ್ನು ಮೈಗೂಡಿಸಿಕೊಂಡು ಬಂದಿದ್ದ ಮಲ್ಲಪ್ಪ ದೇಸಾಯರಿಗೆ ಗಂಗಪ್ಪ ದೇಸಾಯರು ತಮ್ಮ ಮೊದಲ ಮಗಳು ಚಿನ್ನಾಬಾಯಿ ಅವರನ್ನು ಕೊಟ್ಟು ಮದುವೆ ಮಾಡಿದರು. ಚಿನ್ನಾಬಾಯಿ ಅವರು ಅಕಾಲ ಮರಣಕ್ಕೆ ತುತ್ತಾದುದ ರಿಂದ ಅವರ ತಂಗಿ ಲಕ್ಷ್ಮೀಬಾಯಿ ಅವರೊಂದಿಗೆ ಮಲ್ಲಪ್ಪ ದೇಸಾಯರ ಎರಡನೆ ವಿವಾಹ ನಡೆಯಿತು.

ಮಲ್ಲಪ್ಪ ದೇಸಾಯರಿಗೆ ಐದು ಮಕ್ಕಳಾದರೂ ಈಗಿರುವವರು ಶ್ರೀ ರಾಚಪ್ಪ ದೇಸಾಯರು ಮತ್ತು ಸೌ. ಸಿದ್ದಲಿಂಗಮ್ಮ ಸರನಾಯಿಕ ಹಲಗಲಿ ಇವರಿಬ್ಬರು ಮಾತ್ರ. ಇವರು ಉಳಿದು ಬೆಳೆಯಲಿಕ್ಕೆ ಬಬಲೇಶ್ವರದ ಶಿವಯೋಗಿಗಳ ಆಶೀರ್ವಾದವೇ ಕಾರಣ ವೆಂಬುದು ಮಲ್ಲಪ್ಪ ದೇಸಾಯರ ಕುಟುಂಬದ ದೃಢ ನಂಬಿಗೆ.

ಶ್ರೀಮತಿ ಲಕ್ಷ್ಮೀಬಾಯಿ ದೇಸಾಯಿ ಅವರಿಗೆ ಈಗ ೭೨ ವರ್ಷ. ಆದರೂ ಪತಿಯ ಪರಂಪರೆಯನ್ನು ಕಾಯ್ದುಕೊಂಡು ಬಂದಿದ್ದಾರೆ. ಅವರು ತಮ್ಮ ಮಕ್ಕಳಿಗೆ ಮಾತ್ರವಲ್ಲ; ಊರಿಗೆಲ್ಲ ತಾಯಿ. ಇಂದಿಗೂ ಎಲ್ಲರೂ ಅವರಿಗೆ "ಅವ್ವಾ" ಎಂದು ಕರೆಯುತ್ತಿರುವುದೇ ಅದಕ್ಕೆ ಸಾಕ್ಷಿ.

ತಂದೆ–ತಾಯಿಗಳ ಸುಸಂಸ್ಕೃತ ಬದುಕು ಅವರ ಮಕ್ಕಳಲ್ಲೂ ಹರಿದುಬಂದಿದೆ. ಬಬಲೇಶ್ವರದ ಗುರುಪಾದ ಶಿವಯೋಗಿಗಳ ಗದ್ದುಗೆಯಲ್ಲಿ ಅವರಿಗಿರುವ ಶ್ರದ್ಧೆ ಅಪಾರ. ಪೂಜ್ಯ ಶಾಂತವೀರ ಮಹಾಸ್ವಾಮಿಗಳಲ್ಲಿರುವ ಭಕ್ತಿ ಅನಂತ.

ಮಲ್ಲಪ್ಪ ದೇಸಾಯರು ಶ್ರೀಮಂತರಾದರೂ ಶರಣ ಮಾರ್ಗವನ್ನು ಅನುಸರಿಸಿದವರು. ಲಿಂಗಪೂಜಾ ನಿಷ್ಠರು; ಕ್ರಿಯಾಶೀಲರು. ಅವರ ನಡೆ, ನುಡಿ ಶುದ್ಧ. ಸ್ವಭಾವ ಸಾತ್ವಿಕ. ದೀನದಲಿತರ ಬಗ್ಗೆ ಅಪಾರ ಅನುಕಂಪ. ಸಂಸಾರಿ ಗಳಾಗಿದ್ದರೂ ಯೋಗಿಗಳಂತೆ ನಿರ್ಲಿಪ್ತ ಜೀವನ ನಡೆಸಿದ ಆದರ್ಶ ಅವರದು. ದಾನ ಧರ್ಮದಲ್ಲಿ ಅವರ ಕೈ ಬಹಳ ಧಾರಾಳ. ಶಿವಯೋಗ ಮಂದಿರ ಸ್ಥಾಪ ನೆಯ ಕಾಲಕ್ಕೆ ದೇಸಾಯರು ತಮ್ಮ ಭಕ್ತಿಯ ಕಾಣಿಕೆ ಸಲ್ಲಿಸಿದ್ದಾರೆ.

ಬಬಲೇಶ್ವರ ಶ್ರೀ ಶಾಂತವೀರ ಸ್ವಾಮಿಗಳಿಂದ ಲಿಂಗದೀಕ್ಷೆ ಹೊಂದಿದ ಮಲ್ಲಪ್ಪ ದೇಸಾಯರು ಲಿಂಗೈಕ್ಯರಾಗುವವರೆಗೂ ತಮ್ಮ ಗುರುಭಕ್ತಿಗೆ ಎಳ್ಳಷ್ಟು ಕುಂದು ಬರದಂತೆ ನಡೆದುಕೊಂಡು ಬಂದರು.

ದೇಸಾಯರು ಸಂಗೀತ ಪ್ರಿಯರಾಗಿದ್ದರು. ಬಬಲೇಶ್ವರದ ರುದ್ರಯ್ಯ ಪುರಾಣಿಕಮಠ ಎಂಬ ಗವಾಯಿಗಳನ್ನು ತಮ್ಮಲ್ಲಿಟ್ಟುಕೊಂಡು ಅವರಿಗೆ ಫಲವತ್ತಾದ ಭೂಮಿಯನ್ನು ಉಂಬಳಿಯಾಗಿ ನೀಡಿದ್ದಾರೆ. ಗವಾಯಿ ರುದ್ರಯ್ಯನವರು ಲಿಂಗೈಕ್ಯವಾದುದು ಎಡಹಳ್ಳಿಯಲ್ಲೇ. ದೇಸಾಯರು ತಬಲವಾದನದಲ್ಲಿ ತೀರ ನಿಪುಣರಾಗಿದ್ದರು. ತಮ್ಮ ವಾಡೆಯಲ್ಲಿ ನಿತ್ಯ ನಡೆಯುತ್ತಿದ್ದ ಭಜನೆ–ಗಾಯನ ಕಾರ್ಯಕ್ರಮಗಳಲ್ಲಿ ಸ್ವತಃ ಪಾಲುಗೊಳ್ಳುತ್ತಿದ್ದರು.

ಮಲ್ಲಪ್ಪ ದೇಸಾಯರು ಲಿಂ. ಬಿದರಿ ಕುಮಾರಸ್ವಾಮಿಗಳು, ಲಿಂ. ಅಥಣಿ ಮುರು ಗೇಂದ್ರ ಸ್ವಾಮಿಗಳು, ಲಿಂ. ಹಾವೇರಿ ಶಿವಬಸವ ಸ್ವಾಮಿಗಳು, ಲಿಂ. ಹಾನಗಲ್ಲ

ಕುಮಾರಸ್ವಾಮಿಗಳು ಮೊದಲಾಗಿ ಹಿರಿಯ ಗುರುವರ್ಗದವರ ಕರುಣೆಗೆ ಪಾತ್ರರಾಗಿ
ದ್ದರು. ಬಬಲೇಶ್ವರ ಶಾಂತವೀರ ಸ್ವಾಮಿಗಳಂತೂ ಅವರಿಗೆ ಆತ್ಮಗುರು.

ಮಲ್ಲಪ್ಪ ದೇಸಾಯರು ಲಿಂಗೈಕ್ಯರಾದುದು ದಿ. ೧೬-೬-೧೯೩೧ನೇ ಇಸವಿ
ಯುಗಾದಿಯ ಅಮಾವಾಸ್ಯೆಯ ದಿನ. ಅವರಿಗೆ ಆಗ ೪೨ ವಯಸ್ಸಾಗಿತ್ತು.
ಶಿವನು ತನಗೆ ಬೇಕೆಂದೆತ್ತಿಕೊಂಡ ಹಣ್ಣು ಲಿಂ. ಮಲ್ಲಪ್ಪ ದೇಸಾಯರು. ಅವರ
ಸಮಾಧಿ ಕೃಷ್ಣಾನದಿ ದಡದಲ್ಲಿ ತಮ್ಮನ ತಡಿ ಎಂಬ ರಮ್ಯ ಸ್ಥಳದಲ್ಲಿ ರಚಿತವಾಗಿದೆ.
ಈಗ ಅದೊಂದು ಪವಿತ್ರ ಸ್ಥಾನವಾಗಿದೆ.

ಲಿಂ. ಮಲ್ಲಪ್ಪ ದೇಸಾಯರ ನಂತರ ಅವರ ಮಕ್ಕಳಾದ ಶ್ರೀ ರಾಚಪ್ಪ
ದೇಸಾಯರು ತಮ್ಮ ಹನ್ನೊಂದನೆಯ ವಯಸ್ಸಿನಲ್ಲಿ ದೇಸಗತಿಯ ಒಡೆತನ ವಹಿಸಿ
ಕೊಂಡರು. ತಂದೆಯಿಂದ ಬಂದ ಸಂಸ್ಕಾರ ಶ್ರೀ ರಾಚಪ್ಪನವರಿಗೆ ಇಂದು ಸಮಾಜ
ದಲ್ಲಿ ಗೌರವಯುತ ಸ್ಥಾನಮಾನ ತಂದುಕೊಟ್ಟಿದೆ. ಶ್ರೀ ರಾಚಪ್ಪ ದೇಸಾಯರು ಬಿ.ಎ.
ಪದವೀಧರರು. ಇವರ ಧರ್ಮಪತ್ನಿ ತಲ್ಲೂರ ದೇಸಾಯರ ಸುಪುತ್ರಿ ಸೌ. ಶಾಂತಾ
ದೇವಿ. ಡಾ. ಮಲ್ಲಣ್ಣ, ಶ್ರೀ ಬಸವರಾಜ ಮತ್ತು ಸೌ. ಚಿನ್ನಕ್ಕ ಇವರು ರಾಚಪ್ಪ
ದೇಸಾಯರ ಮಕ್ಕಳು.

ಶ್ರೀ ರಾಚಪ್ಪ ಮಲ್ಲಪ್ಪ ದೇಸಾಯರು ತಂದೆಯವರಂತೆಯೇ ಜನಸೇವೆಯಲ್ಲಿ
ಪೂರ್ಣ ಆಸಕ್ತಿ ತಾಳಿದವರು. ಕರ್ನಾಟಕ ರಾಜ್ಯದ ವಿಧಾನ ಸಭಾ ಸದಸ್ಯರಾಗಿ,
ಸಾರಿಗೆ ಮಂಡಳಿ ಅಧ್ಯಕ್ಷರಾಗಿ ಸೇವೆ ಸಲ್ಲಿಸಿ ಜನ ಮೆಚ್ಚುಗೆ ಗಳಿಸಿರುವ ಶ್ರೀ ಆರ್. ಎಂ.
ದೇಸಾಯರು ಈಗ ರಾಜ್ಯ ಸಭೆಯ ಸದಸ್ಯರಾಗಿದ್ದಾರೆ. ಕೈಗೊಂಡ ಹೊಣೆಯನ್ನು
ಸಮರ್ಥವಾಗಿ ನಿರ್ವಹಿಸುವ ಶಕ್ತಿ ಅವರಿಗೆ ಮೈಗೂಡಿಕೊಂಡಿದೆ. ಅವರ ಜನಪ್ರಿಯ
ತೆಗೆ ಅದೇ ಆಧಾರವಾಗಿದೆ.

ದೇಸಾಯರ ಭಗಿನಿ ಸೌ. ಸಿದಲಿಂಗಮ್ಮ ಅವರ ವಿವಾಹ ಹಲಗಲಿಯ ಶ್ರೀ
ಶರಶ್ಚಂದ್ರ ಸರನಾಯಕರೊಂದಿಗೆ ಆಗಿದೆ. ಅವರೂ ಸಹ ಅಷ್ಟೇ ಧಾರ್ಮಿಕ ಆಚಾರ
ವಿಚಾರಗಳಲ್ಲಿ ನಿಷ್ಠರು. ಅವರಿಗೆ ರಜತ ಕುಮಾರ, ಗೀತಾ, ಸುಜ್ಞಾನಿ ಮತ್ತು ರೇಖಾ
ಎಂಬ ನಾಲ್ವರು ಮಕ್ಕಳಿದ್ದಾರೆ.

ಶ್ರೀ ಆರ್. ಎಂ. ದೇಸಾಯರು ಇಂದಿನ ರಾಜಕೀಯ ಮತ್ತು ಸಾಮಾಜಿಕ
ಕ್ಷೇತ್ರದಲ್ಲಿ ತಮ್ಮದೇ ಆದ ಘನತೆ ಗೌರವಗಳನ್ನು ಪಡೆದಿದ್ದಾರೆ. ಶ್ರೀಮಂತ ಮನೆತನ
ದವರಾದರೂ ಜನಸಾಮಾನ್ಯರ ಬದುಕಿನ ಸುಧಾರಣೆಗೆ ಪಣತೊಟ್ಟವರು. ಸಾಮಾ
ಜಿಕ ಅಥವಾ ರಾಜಕೀಯ ಯಾವುದೇ ಇರಲಿ ಅದು ಧರ್ಮಬದ್ಧವಾಗಿರಬೇಕೆಂಬುದರಲ್ಲಿ
ಶ್ರದ್ಧೆ ಇಟ್ಟುಕೊಂಡವರು. ಅವರು ಜನತೆಯಲ್ಲಿ ಇಟ್ಟಿರುವ ವಿಶ್ವಾಸ ಬಹಳ.
ಜನತೆಯೂ ಅವರನ್ನು ಅಷ್ಟೇ ಆತ್ಮೀಯವಾಗಿ ಕಂಡಿದೆ.

ಎಡಹಳ್ಳಿ ದೇಸಾಯರ ಮನೆತನದ ಕ್ಷೇಮಕ್ಕೆ ಬಬಲೇಶ್ವರ ಶಿವಯೋಗಿಗಳ
ಆಶೀರ್ವಾದ ರಕ್ಷೆ ಸದಾ ಇದೆ.

# ಪರಿವಿಡಿ

ಪುಟ ಸಂಖ್ಯೆ

ಅನುಬಂಧ



ಭಾವ ಚಿತ್ರಗಳು

೧೯. ಲಿಂ. ಗುರುಪಾದ ಶಿವಯೋಗಿಗಳು
೨೦. ಮಠದ ಗದ್ದಿಗೆಯಲ್ಲಿಯ ಶಿವಲಿಂಗ
೨೧. ಲಿಂ. ಗುರುಪಾದ ಸ್ವಾಮಿಗಳ ಯೋಗ ದಂಡ ಲೋಡು
೨೨. ಗುರುಪಾದ ಸ್ವಾಮಿಗಳ ಹುಟ್ಟಿದ ಮನೆ
೨೩. ಮಠದ ಆವರಣದಲ್ಲಿಯ ಪುರಾತನ ದೇಗುಲ
೨೪. ಶಿವಾನುಭವ ಮಂಟಪ
೨೫. ಶ್ರೀ ಶಾಂತವೀರ ಶಿವಯೋಗಿಗಳು
೨೬. ಶ್ರೀ ಶಾಂತವೀರ ಸ್ವಾಮಿಗಳ ಹಸ್ತಾಕ್ಷರ
೨೭. ಗುರುಪೀಠದ ಬಿಲ್ಲೆ
೨೮. ಗುರುಪೀಠದ ಬಾಗಿಲು
೨೯. ಶ್ರೀ ಮಹಾದೇವ ಸ್ವಾಮಿಗಳು
೩೦. ಹರಳೇಶ್ವರ ಕ್ಷೇತ್ರದ ದೃಶ್ಯ
೩೧. ಹಿಂದಿನ ಹರಳೇಶ್ವರ ತೀರ್ಥ
೩೨. ಹರಳೇಶ್ವರ ಕುಮಾರ ತೀರ್ಥ
೩೩. ಹರಳೇಶ್ವರ ದೇವಸ್ಥಾನದ ಮಂಟಪ
೩೪. ಶ್ರೀ ಶಾಂತವೀರ ಸ್ವಾಮಿಗಳು ಅನುಷ್ಠಾನ ಮಾಡಿದ ಸ್ಥಳ

# ಶಿವಯೋಗಿದ್ವಯರ ಬದುಕಿನ ದಾರಿಯಲ್ಲಿ

## ಲಿಂ. ಗುರುಪಾದ ಶಿವಯೋಗಿಗಳು

| | | |
|---|---|---|
| ೧. ಜನನ | ಶಕೆ | ೧೬೭೦ |
| ೨. ಲಿಂಗೈಕ್ಯ | ಕಾ. ಶು. ೧ ಶಕೆ | ೧೭೬೪ |

## ಶ್ರೀ ಶಾಂತವೀರ ಶಿವಯೋಗಿಗಳು

| | ಇಸ್ವಿ |
|---|---|
| ೧. ಜನನ | ದಿ. ೨೭-೪-೧೮೮೭ |
| ೨. ಪಟ್ಟಾಭಿಷೇಕ | ೧೯೦೫ |
| ೩. ಸಂಸ್ಕೃತ ಪಾಠಶಾಲೆ | ೧೯೦೫ |
| ೪. ಗುರು ಅನುಗ್ರಹ | ೧೯೦೭ |
| ೫. ವೀರನಗೌಡರ ನಿಧನ | ೧೯೧೪ |
| ೬. ಅಥಣಿ ಮಂಟಪ ಪೂಜೆ | ೧೯೧೬ |
| ೭. ಹರಳೇಶ್ವರ ಕ್ಷೇತ್ರ ಮೊದಲನೆ ಸಲ | ೧೯೧೮ |
| ೮. ಮರಳಿ ಮಠಕ್ಕೆ ಬಂದುದು | ೧೯೧೮ |
| ೯. ಮಠದ ವ್ಯಾಜ್ಯ | ೧೯೨೭ |
| ೧೦. ಹೊರಗಿನ ಮಠದಲ್ಲಿ ವಾಸ | ೧೯೨೨-೧೯೫೨ |
| ೧೧. ಓದು ನಿಂತುದು | ೧೯೫೨ |
| ೧೨. ಗದ್ದಿಗೆ ಜೀರ್ಣೋದ್ಧಾರ | ೧೯೫೪ |
| ೧೩. ಅಮರ ಗಣಂಗಳ ಪೂಜೆ (ವಿಜಾಪುರ) | ೧೯೫೪ |
| ೧೪. ಬಸನಗೌಡರ ಶಿವಾಧೀನ | ೧೯೫೫ |
| ೧೫. ಹರಳೇಶ್ವರ ಕ್ಷೇತ್ರ ಎರಡನೆ ಸಲ | ೧೯೫೯ |
| ೧೬. ಏಳುನೂರಾ ಎಪ್ಪತ್ತು ಲಿಂಗಸ್ಥಾಪನೆ | ೧೯೬೧ |
| ೧೭. ಅಷ್ಟಗ್ರಹ ಶಾಂತಿ | ೧೯೬೧ |
| ೧೮. ಕಾಲೇಜಕ್ಕೆ ಆಸ್ತಿ ಕೊಡುಗೆ | ೧೯೬೧ |
| ೧೯. ಉಗ್ರಾಣ ನಿರ್ಮಾಣ | ೧೯೬೮ |
| ೨೦. ಮಠದಲ್ಲಿ ವಾಸ | ೧೯೬೮ |
| ೨೧. ಸ್ಮಾರಕ ಮಂಟಪ ರಚನೆ | ೧೯೭೩ |
| ೨೨. ಶಿವಾನುಭವ ಮಂಟಪ ರಚನೆ | ೧೯೭೪ |
| ೨೩. ಮಹದೇವಸ್ವಾಮಿಗಳ ಪಟ್ಟಾಭಿಷೇಕ | ೧೯೭೪ |



ಬಬಲೇಶ್ವರ ದೂರಿನಿಂದ ಕಾಣುವ ದೃಶ್ಯ



ಮಠದ ಗದ್ದಿಗೆಯ ಮುಂದಿನ ಮಂಟಪ



ಶ್ರೀ ಸಿದ್ದೇಶ್ವರ ಶಿವಲಿಂಗ



ಶ್ರೀ ವೀರಭದ್ರ ಮೂರ್ತಿ



ಶಿವನ ಗುಡಿಯ ಮೂರ್ತಿ





ಹನುಮಂತನ ಗುಡಿ



ಶ್ರೀ ಸಿದ್ಧೇಶ್ವರ ದೇವಸ್ಥಾನ



ಮಾಳಿಂಗರಾಯನ ದೀಪಸ್ಥಂಬ





ಅಂಬಲಿಸಿದ್ಧನ ಗುಡಿ



ಬಬಲೇಶ್ವರ ಗೌಡರವಾಡೆ



ಲಿಂ. ವೀರನಗೌಡರು ಪಾಟೀಲ



ಲಿಂ. ಬಸವನಗೌಡರು ಕಡಿಮನೆ





ಹಾಯಸ್ಕೂಲ ಕಟ್ಟಡ

# ಕ್ಷೇತ್ರ ಪ್ರವೇಶ

## ಬಬಲೇಶ್ವರ

೧

Bableshwar (Bijapur Taluk), is a large village, 15 miles south-west of Bijapur. The temple of Siddheshwara in the middle of the village was built in 1780. The temple has a front hall with a sculptured spire. On the shrine lintel is a figure of Virabhadra. Outside the village is a temple of Ambali Muttaippa built like a mosque and with no images. The place is noted for a Veerashaiva monastery, known as Shantaveera Matha. It has a high school and a primary health unit.

(*Mysore State Gazetteer, Bijapur District, 1966*)

೨

ಬಬಲೇಶ್ವರ (ವಿಜಾಪುರ ತಾಲೂಕು) ವು ವಿಜಾಪುರದಿಂದ ದಕ್ಷಿಣ ಪಶ್ಚಿಮ (ಈಶಾನ್ಯ) ದಲ್ಲಿ ೧೫ ಮೈಲಿನ ಮೇಲೆ ಇರುವ ಒಂದು ದೊಡ್ಡ ಹಳ್ಳಿ. ಊರಿನ ಮಧ್ಯದಲ್ಲಿ ಕ್ರಿ.ಶ. ೧೭೮೦ರಲ್ಲಿ ಕಟ್ಟಿದ ಸಿದ್ಧೇಶ್ವರ ದೇವಾಲಯವಿದೆ. ಗುಡಿಯ ಮೊಗಸಾಲೆಯ ಮೇಲೆ ಕೆತ್ತನೆಯ ಗೋಪುರವಿರುವುದು. ಗರ್ಭಗುಡಿಯ ಬಾಗಿಲಿನ ಹಾಸುಗಲ್ಲಿನ ಮೇಲೆ ವೀರಭದ್ರನ ಆಕೃತಿಯಿರುವುದು. ಊರ ಹೊರಗೆ ಯಾವ ಮೂರ್ತಿ ವಿಗ್ರಹಗಳೂ ಇಲ್ಲದ, ಮಸೀದಿಯಾಕಾರದಲ್ಲಿ ಕಟ್ಟಿರುವ ಅಂಬಲಿ ಮುತ್ತ್ಯಪ್ಪನ ಗುಡಿ ಇದೆ. ಇಲ್ಲಿರುವ ಶಾಂತವೀರ ಮಠ ಎಂಬ ಹೆಸರಿನ ವೀರಶೈವ ಮಠದಿಂದ ಈ ಊರು ಪ್ರಸಿದ್ಧಿಗೆ ಬಂದಿದೆ. ಊರಲ್ಲಿ ಒಂದು ಹೈಸ್ಕೂಲು ಮತ್ತು ಒಂದು ಪ್ರಾಥಮಿಕ ಆರೋಗ್ಯ ಕೇಂದ್ರ ಇವೆ.

(ಮೈಸೂರು ಸ್ಟೇಟ್ ಗೆಜೆಟಿಯರ್, ವಿಜಾಪುರ ಡಿಸ್ಟ್ರಿಕ್ಟ್, ೧೯೬೬)

**ಹಿನ್ನೆಲೆ :**

ಬಬಲೇಶ್ವರದ ಸಚ್ಚಾರಿತ್ರಕ್ಕೆ ಭಾವಪೂರ್ಣ ಬೆಡಗಿನ ಹಿನ್ನೆಲೆಗೆ ಕನ್ನಡನಾಡು ಕಾರಣ. ಅದಕ್ಕಿಂತ ಹೆಚ್ಚಾಗಿ ಹತ್ತಿರದ ಕಾರಣ ವಿಜಾಪುರ ಜಿಲ್ಲೆ. ಈ ಜಿಲ್ಲೆ

ಸುಮಾರು ೮ನೆಯ ಶತಮಾನದಿಂದ ಶೈಕ್ಷಣಿಕದಲ್ಲಿ ಸತ್ ಸಾಂಸ್ಕಾರಿಕದಲ್ಲಿ ಸತ್ಕೀರಿಯನ್ನು ಪಡೆದಿದೆ. ಈ ಜಿಲ್ಲೆಯ ಸಾಲೋಟಗಿಯ ಇತಿಹಾಸ ವಿಶಿಷ್ಟ ರೀತಿಯದಾಗಿದೆ. ಉತ್ತರ ಭಾರತದ ನಲಂದಾ ತಕ್ಷಶಿಲಾಗಳ ಹಾಗೆ ಇಲ್ಲಿ ಒಂದು ದೊಡ್ಡ ವಿದ್ಯಾ ಕೇಂದ್ರವಿದ್ದಿತು. ವಿಶ್ವವಿದ್ಯಾಲಯವೆಂದು ಖ್ಯಾತಿವೆತ್ತಿತ್ತು. 'ದಕ್ಷಿಣದ ತಕ್ಷಶಿಲಾ' ಎಂದು ಹೆಸರಾಗಿದ್ದಿತು. ಅಲ್ಲಿ ಐಯ್ದುನೂರು ಜನ ಶಿಕ್ಷಕರಿದ್ದರೆಂದು ಅವರಿಗೆಲ್ಲ ಪ್ರಧಾನ ಶಿಕ್ಷಕರಾಗಿ ಪ್ರಾಚಾರ್ಯರಾಗಿ ಶಿವಯೋಗಿ ಶಿವಾಚಾರ್ಯರು ಇದ್ದಂತೆಯೂ ವೀರಶೈವ ಷಟ್‌ಸ್ಥಲ ತತ್ತ್ವಕ್ಕೆ ಮೊತ್ತ ಮೊದಲು ಸಮನ್ವಯದ ಜೀವಕಳೆಯನ್ನು ತಂದ, ಶಿವಾಗಮಗಳ ಸಾರವಾಗಿ ಹೊರಹೊಮ್ಮಿದ 'ಸಿದ್ಧಾಂತ ಶಿಖಾಮಣಿ' ಸ್ರಸ್ಟಾರರೂ ಆಗಿ ಮೆರೆದಿದ್ದಾರೆ. ಈ ಭಾಗ್ಯ ವಿಜಾಪುರ ಜಿಲ್ಲೆಗೆ ಸಂದದ್ದು.

ಅಲ್ಲಿಂದೀಚೆಗೆ ಹನ್ನೊಂದನೆಯ ಶತಮಾನದ ಪ್ರಸಿದ್ಧ ವಚನಕಾರನಾದ ಬಸವಣ್ಣನವರಿಗೂ ಆದರ್ಶನೂ ಆದರಣೀಯನೂ ಆದ ದೇವರ ದಾಸಮಯ್ಯನ ಮುದನೂರಿನ "ಅನುಭವ ಗೋಷ್ಠಿ"ಯ ಪ್ರಭಾವ ಈ ಜಿಲ್ಲೆಯ ಮೇಲೆ ಸಾಕಷ್ಟಾಗಿದೆ.

ಹನ್ನೊಂದನೆಯ ಶತಮಾನದ ಮಧ್ಯಭಾಗದಿಂದ ಅಂತ್ಯದವರೆಗೆ ಇದ್ದ ಶ್ರೀ ಜಗದ್ಗುರು ರೇವಣಸಿದ್ಧ ಶಿವಾಚಾರ್ಯರು ಇಂಗಳೇಶ್ವರದಲ್ಲಿ ಒಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸಿದ್ದ ಇತಿಹಾಸವನ್ನು ಮರೆಯುವಂತಿಲ್ಲ. ಅಲ್ಲದೆ ಕಲ್ಯಾಣದಲ್ಲಿ 'ಚಂಗಣಿಗಲ ಮಂಟಪ' ವೊಂದನ್ನು ರಚಿಸಿ ಹನ್ನೊಂದನೆಯ ಶತಮಾನದ ಬಸವಣ್ಣನ 'ಅನುಭವ ಮಂಟಪ' ರಚನೆಗೆ 'ಮಂಟಪ' ಎಂಬ ಹೆಸರಿಗೆ ಪ್ರೇರಣೆಯ ನಾಂದಿಯನ್ನು ಹಾಡಿದೆ. ಶ್ರೀ ರೇವಣಸಿದ್ಧ ಗುರು ಸಾರ್ವಭೌಮರ ಸ್ವಯಾನುಷ್ಠಾನದ ಕಾಯಕತತ್ತ್ವ ವಚನರಚನಾಸತ್ವ ಬಸವಣ್ಣನವರ ಅನುಭವ ಮಂಟಪಕ್ಕೂ ಹರಿದು ಬಂದು ದೋಹದವನ್ನುಂಟುಮಾಡಿದೆ. ಸುಮಾರು ೬೫–೭೦ ಸಾವಿರ ವಚನಗಳನ್ನು ಬರೆದ ಶ್ರೀ ಜ. ಮರುಳಸಿದ್ಧ ಶಿವಾಚಾರ್ಯರು, ಮಹಾದೇವಿಯಕ್ಕಗಳಂತೆ ಅತ್ಯಂತ ಪ್ರತಿಭಾನ್ವಿತಳಾದ ಶಾಂಭವಿಯು ಆ ರೇವಣಸಿದ್ಧ ಶಿವಾಚಾರ್ಯರ 'ಚಂಗಣಿಗಲ ಮಂಟಪ'ದಲ್ಲಿ ತಯಾರಾದವರು.

೧೨ನೆಯ ಶತಮಾನದಲ್ಲಿ ನಡೆದ ಕಲ್ಯಾಣದ ಕ್ರಾಂತಿಗೆ ಕಾರಣಿಕ ಪುರುಷನಾದ ಬಸವಣ್ಣನನ್ನು ಒದಗಿಸಿಕೊಟ್ಟ ಭಾಗ್ಯ ವಿಜಾಪುರ ಜಿಲ್ಲೆಗೆ ಇದೆ. ಈ ಜಿಲ್ಲೆಯ ಜ್ಯೋತಿರ್ಮಯ ಗರ್ಭದಲ್ಲಿ ಇಂಗಳೇಶ್ವರ, ಬಾಗೇವಾಡಿ, ಕೂಡಲ ಸಂಗಮ ಕ್ಷೇತ್ರಗಳಿರುತ್ತವೆ. ಈ ಮೂರರ ಸನ್ನಿಹಿತ ಸಂಬಂಧ ಭಕ್ತಜನಭಾಗ್ಯನೂ ಶುಭೋದಯನೂ, ಆಧುನಿಕ ವೀರಶೈವ ನಿರ್ಣಯ ಪರಮಾವತಾರಿಯೂ ಆದ ಬಸವಣ್ಣನಿಗಿದೆ. ಇಂಗಳೇಶ್ವರ ಬಾಗೇವಾಡಿಗಳಲ್ಲಿ ಹುಟ್ಟಿ ಕೂಡಲಸಂಗಮದಲ್ಲಿ ಶ್ರೀ ಜಾತವೇದಮುನಿ ಗುರುಗಳ ಸಂಸ್ಕಾರ–ಶಿಕ್ಷಣಗಳಲ್ಲಿ ಬೆಳೆದ ಫಲವಾಗಿ ಭಕ್ತಿ ಭಾಂಡಾರಿಯೆಂದು,

ದ್ವಿತೀಯ ಶಂಭುವೆಂದು ಹೆಸರಾಂತನು. ಕಲ್ಯಾಣದ ಸರ್ವತೋಮುಖವಾಗಿ ಅಭೂತ ಪೂರ್ವವಾದ ಉತ್ಕ್ರಾಂತಿಗೆ ಕಾರಣನಾದನು.

ಈ ಉತ್ಕ್ರಾಂತಿಯಲ್ಲಿ ಭಾಗವಹಿಸಿದ ಪ್ರಮುಖ ಪ್ರಮಥರಲ್ಲಿ ಮಡಿವಾಳ ಮಾಚಿತಂದೆಯೂ ಒಬ್ಬರು. ಒಬ್ಬರು ಮಾತ್ರವಲ್ಲ ವಿಶಿಷ್ಟರು. ಅಲ್ಲಮಾ ಪ್ರಭುವಿಗೆ ಬಸವಣ್ಣ ಬಲಗೈಯಾದರೆ ಮಾಚಿತಂದೆ ಎಡಗೈ ಎಂದು ಹೇಳಿಕೊಂಡ ಗೌರವ ಮಾಚಿ ತಂದೆಯದು. ಈತನ ಹುಟ್ಟೂರು ವಿಜಾಪುರ ಜಿಲ್ಲೆಯ ದೇವರ ಹಿಪ್ಪರಗಿ. ಇದರ ಹೆಸರೇ ಇದರ ಅಗ್ಗಳಿಕೆಗೆ ಸಂಕೇತವಾಗಿದೆ.

ಈ ಜಿಲ್ಲೆಗೆ ಸೇರಿದ ಇನ್ನೊಂದು ಪ್ರಸಿದ್ಧವಾದ ಕ್ಷೇತ್ರವಿದೆ ; ಅದು ತೇರದಾಳ. ಕಲ್ಯಾಣದ ಕ್ರಾಂತಿಗೆ ಕಾಂತಿಯನ್ನು ತಂದ ಶೂನ್ಯಸಿಂಹಾಸನಾರೂಢ ಸಮರ್ಥನಾದ ಪ್ರಭುದೇವನ ವಾಸಸ್ಥಳ; ಪ್ರಾಸಾದಿಕನೆಲೆ. ಅಲ್ಲದೆ ಕರಿನಾಡ ಬಸವನೆಂದು ಕೀರ್ತಿವೆತ್ತ ಶ್ರೀಶೈಲ ಜಗದ್ಗುರು ನಿಡುಮಾಮಿಡಿ ಕರಿಬಸವೇಂದ್ರರ ಗದ್ದುಗೆಯೂ ಇಲ್ಲಿದೆ. ಇವರು ಪ್ರಭುದೇವರಿಗೆ ತುಂಬಾ ಅಚ್ಚುಮೆಚ್ಚಿನವರು. ಕನ್ನಡ ನಾಡನ್ನೆಲ್ಲ ಸುತ್ತಿ ಸುಳಿದು ಕನ್ನಡಿಗರನ್ನು ಉದ್ಧರಿಸಿದ ಉದಾತ್ತರು.

ಈ ಜಿಲ್ಲೆಯಲ್ಲಿ ಪುರಾಣ ಪ್ರಸಿದ್ಧವಾದ ಪುರಾತನವಾದ ಮಹಾಕೋಟೇಶ್ವರವಿದೆ. ಇದು ವೀರ ಪುಲಕೇಶಿಯಿಂದ ಇತಿಹಾಸ ಪ್ರಸಿದ್ಧವಾದ ಬಾದಾಮಿ (ವಾತಾಪಿಪುರ) ಯ ಬಳಿಯಿದೆ. ಇಲ್ಲಿ ವಾತಾಪಿ ಇಲ್ವಲರು ಇರುತ್ತಿದ್ದರು. ಇವರನ್ನು ಆದಿ ಜಗದ್ಗುರು ರೇಣುಕ ಶಿವಾಚಾರ್ಯರ ಶಿಷ್ಯನಾದ ಅಗಸ್ತ್ಯ ಮುನಿಯು ಸಂಹರಿಸಿದಂತೆ ಇತಿಹಾಸವಿದೆ. ಇಲ್ಲಿ ಕೋಟಿಲಿಂಗ ಸ್ಥಾಪನವಾದಂತೆ ತಿಳಿದುಬರುತ್ತದೆ. ಇದು ದಕ್ಷಿಣ ಕಾಶಿಯೆಂದು ಹೆಸರಾಂತಿದೆ.

ಬಾದಾಮಿಯ ಬಳಿ 'ಬನಶಂಕರಿ' ದೇವಸ್ಥಾನವಿದೆ. ಭಾರತದ ೧೮ ಶಕ್ತಿ ದೇವತೆಗಳಲ್ಲಿ ಬನಶಂಕರಿಯೂ ಒಬ್ಬಳು. ವರುಷಕ್ಕೊಮ್ಮೆ ದೊಡ್ಡ ಜಾತ್ರೆಯಾಗುತ್ತದೆ. ನಾಡಿನ ಪುಣ್ಯ ದೇವತೆ. ಇದರ ಬಳಿ ಈ ಶತಮಾನದಲ್ಲಿ ಸ್ಥಾಪಿತವಾದ ಶಿವಯೋಗ ಮಂದಿರ ಕ್ಷೇತ್ರವಿದೆ. ಇಲ್ಲಿ ವೀರಶೈವ ಮಠಾಧಿಪತಿಗಳಾಗಲಿರುವವರು ಸಾಂಸ್ಕೃತಿಕ ಶಿಕ್ಷಣವನ್ನು ಪಡೆಯುತ್ತಾರೆ. ಇದೂ ಪುರಾತನ ಕ್ಷೇತ್ರವಾಗಿದೆ. ಇಲ್ಲಿ ಕೊಟ್ಟೂರು ಬಸವೇಶ್ವರರ ಗದ್ದುಗೆಯಿದೆ. ಋಷ್ಯಾಶ್ರಮಗಳ ನೆಲೆಗಳಿವೆ.

ಇದರ ಪಕ್ಕದಲ್ಲಿ ಪಟ್ಟದಕಲ್ಲು, ಐಹೊಳೆಗಳಿವೆ. ಪಟ್ಟದಕಲ್ಲು ಅನಿಮಿಷರಾಜನು ಪಟ್ಟಕ್ಕೆ ಬಂದ ಸ್ಥಳ. ಐಹೊಳೆ ಪ್ರಸಿದ್ಧ ವಿದ್ಯಾಕೇಂದ್ರವಿದ್ದ ಸ್ಥಳ. ಐಪುರೀಶ್ವರ ಸೋಮನಾಥನಿರುವ ಸ್ಥಳ. ಆಚಾರದಲ್ಲಿ ವಿಚಾರ ಕ್ರಾಂತಿಯ ಮಾಡಿದ ಮೊಗ್ಗೆಯ

ಮಾಯಿದೇವ ಶಿವಾಚಾರ್ಯರ ಊರು ಎನ್ನುವುದರಿಂದ ಅದರ ಹಿರಿಮೆಗೆ ಬೇರೆ ಮಾತು ಬೇಕಿಲ್ಲ.

ಇನ್ನೊಬ್ಬ ಶಿವಶರಣೆ ದಾನಮ್ಮನ ಊರಾದ ಗುಡ್ಡಾಪುರ ಈ ಜಿಲ್ಲೆಯ ಗಡಿ ಪ್ರದೇಶ. ಪವಿತ್ರ ಸ್ಥಳ. ಅಂತೆಯೆ ನಾಲತವಾಡವೂ ಈಗ ಸೊನ್ನಲಿಗೆಯಲ್ಲಿರುವ ವೀರೇಶ್ವರ ಶಿವಶರಣರ ಮಗಳು ಶ್ರೀ ರುದ್ರಮ್ಮ ಶರಣೆಯ ಜನ್ಮಸ್ಥಳವಾಗಿದೆ.

**ಪರಿಸರ :**

ಬಬಲೇಶ್ವರದ ಸನಿಹದಲ್ಲಿಯೆ ಸುಕ್ಷೇತ್ರ ಹರಳೇಶ್ವರವಿದೆ. ಚನ್ನಬಸವಣ್ಣನವರು ಉಳಿವೆಗೆ ಹೋಗುವ ಹಾದಿಯಲ್ಲಿ ಇಲ್ಲಿ ಒಂದು ದಿನ ತಂಗಿ ಲಿಂಗಾರ್ಚನ ಮಾಡಿ ಹೋದ ಸ್ಥಳ. ಆ ಪ್ರಭಾವ ಇಂದಿಗೂ ಅಲ್ಲಿ ಅಚ್ಚಳಿಯದಿದೆ. ಇಂದಿನ ಬಬಲೇಶ್ವರ ಶ್ರೀಶಾಂತವೀರ ಶಿವಾಚಾರ್ಯರ ಮೇಲೆಯೂ ತನ್ನ ಪ್ರಭಾವವನ್ನು ಬೀರಿದೆ. ಅಲ್ಲಿದ್ದು ಹನ್ನೆರಡುವರುಷ ನಿಡುಗಾಲ ತಪಸ್ಸನ್ನು ಮಾಡಿದ್ದಾರೆ. ಕ್ಷೇತ್ರಾಭಿವೃದ್ಧಿಯನ್ನೆಸಗಿದ್ದಾರೆ. ಮತ್ತಷ್ಟು ಪ್ರಭಾವವನ್ನು ತಂದಿದ್ದಾರೆ.

ಬಬಲೇಶ್ವರದ ಬಳಿಯಿರುವ 'ಗೋಠೆ' ಎಂಬ ಊರು ಹೆಸರಾಂತ ಚಿದಂಬರೇಶ್ವರ ಎಂಬವರ ಊರು. ಇವರು ಕರ್ನಾಟಕ ಮಹಾರಾಷ್ಟ್ರ ಪ್ರಾಂತ ಗಳೆರಡರಲ್ಲಿ ಪ್ರಸಿದ್ಧರು.

ತೊರವೆ ರಾಮಾಯಣ ಬರೆದ ತೊರವೆ ಊರು ತನ್ನ ನುಡಿಬೆಳಗನ್ನು ಈ ಪರಿಸರಕ್ಕೆ ಪಸರಿಸಿದೆ.

ಸಿದ್ಧಪುರುಷರಾದ ಸದಾಶಿವ ಸ್ವಾಮಿಗಳವರ ಊರು ಬಬಲಾದಿ. ಇವರ ಮಹಿಮೆಯು ಅಲ್ಲಿನ ಪರಿಸರದಲ್ಲಿ ಹಬ್ಬಿಕೊಂಡಿದೆ.

ಮತ್ತೊಂದು ಹತ್ತಿರದ ಊರು ಸಾರವಾಡ. ಅಲ್ಲಿದ್ದರು ಚಿಕ್ಕಪ್ಪಯ್ಯ ಎಂಬವರು. ಅವರು ಚಂದ್ರನಂತೆ ಜನಮನಕ್ಕೆ ತಂಬೆಳಗನಿತ್ತವರು. ಬಬಲಾದಿ ಶಾಖಾಮಠದವರು.

ಕಾಖಂಡಿಕೆಯ ಹೆಸರನ್ನು ಹೇಳದೆ ಬಿಡುವಂತಿಲ್ಲ. ಅಲ್ಲಿ ಮಲ್ಲ ಮಹಿಪತ ಸ್ವಾಮಿಗಳ ಬೃಂದಾವನವಿದೆ. ಅವರು ಆದಿಲಶಾಹಿ ಬಾದಶಹನ ಕಾಲದಲ್ಲಿ ಮಂತ್ರಿಯಾಗಿದ್ದರಂತೆ!

ಇದಲ್ಲದೆ ಕಲಾದಗಿ ಶ್ರೀ ಗುರುಲಿಂಗ ಸ್ವಾಮಿಗಳು, ಇಂಚಗೇರಿ ಉಮದಿ ಮಹಾರಾಜರು, ನಿಂಬರಗಿ ಗುರುಲಿಂಗ ಜಂಗಮ ಮಹಾರಾಜರು, ಶ್ರೀ ಘನಮಠಾರ್ಯರು, ಬಾಗಿಲುಕೋಟೆಯ ಮಲ್ಲಣಾರ್ಯರು, ಚಿತ್ತರಗಿ ಮಹಾಂತ ಸ್ವಾಮಿಗಳವರು, ತಾಳಿಕೋಟೆ ಖಾಸ್ಗತ್ ಸ್ವಾಮಿಗಳವರು, ಮಹಾಲಿಂಗ

ಪುರದ ಮಹಾಲಿಂಗೇಶ್ವರ ಸ್ವಾಮಿಗಳವರು, ಬಿದರಿ ಶ್ರೀ ಕುಮಾರ ಸ್ವಾಮಿಗಳವರು, ಅಥಣಿ ಶ್ರೀ ಮುರಘೇಂದ್ರ ಸ್ವಾಮಿಗಳವರು, ಹಾನಗಲ್ ಶ್ರೀ ಕುಮಾರ ಸ್ವಾಮಿಗಳವರು, ಬಂಥನಾಳ ಶ್ರೀ ಶಿವಯೋಗಿಗಳು, ಪ್ರೊ. ಆರ್. ಡಿ. ರಾನಡೆಯವರು, ವಚನ ಪಿತಾಮಹರೆಂಬ ಹೆಸರುಗಳಿಸಿದ ಫ. ಗು. ಹಳಕಟ್ಟಿಯವರು, ಮತ್ತು ಶ್ರೀ ಸಜ್ಜಲಗುಡ್ಡದ ಶ್ರೀ ಶರಣಮ್ಮನವರು ಆ ಪರಿಸರಕ್ಕೆ ತಮ್ಮ ತಮ್ಮ ತಪಸ್ಸಿನ ಪ್ರಭಾವವನ್ನು ಚೆಲ್ಲಿದ್ದಾರೆ.

**ಬಬಲೇಶ್ವರ :**

> ಊರ ಒಳ್ಳೇದ ನನ್ನ ಜಾಣ ಬಬಲೇಸೂರ
> ದೇವರೊಳ್ಳ್ಯಾಂವ ಶಿದರಾಯನ ಮುಂದಿರುವ
> ಬಾಳೇ ಒಳ್ಳ್ಯಾಂವ ಬಸವಣ್ಣ.
>
> —ಜನಪದಗೀತೆ.

ಈ ಹೆಸರನ್ನು ಕೇಳುತ್ತಿದ್ದಂತೆ ಅವರ್ಣನೀಯ ಅನುಭವವಾಗುತ್ತದೆ. ಈ ಅನುಭವಕ್ಕೆ ಕಾರಣ 'ಬಬಲೇಶ್ವರ'ಕ್ಕಿರುವ ಮಹಿಮಾಪೂರ್ಣ ಹಿನ್ನೆಲೆ. ಕನ್ನಡ ನಾಡಿನ ಸಹಸ್ರಾರು ಗ್ರಾಮಗಳಲ್ಲಿ ಬಬಲೇಶ್ವರವೂ ಒಂದಿರಬಹುದು, ಆದರೆ ಈ ಗ್ರಾಮಕ್ಕಿರುವ ಹಿನ್ನೆಲೆ ಸ್ಮರಣೀಯ.

ಜನಪದ ನೆನಪಿನ ಸುಳಿಯಲ್ಲಿ ಬಬಲೇಶ್ವರದ ಆರಂಭದ ಘಟನೆಗಳು ಅಚ್ಚಳಿಯದೆ ಉಳಿದಿವೆ. ಆತ್ಮಗೌರವ ಮತ್ತು ಸ್ವಾಭಿಮಾನದ ಸುಂದರ ನೆಲಗಟ್ಟಿನಮೇಲೆ ಬೆಳೆದು ಬಂದಿದೆ ಬಬಲೇಶ್ವರ. ಇಲ್ಲಿಯ ಮಣ್ಣಿನಲ್ಲಿ ಧರ್ಮದ ಸುಗಂಧವಿದೆ, ಗಾಳಿಯಲ್ಲಿ ಸಾಹಸದ ಸುವಾಸನೆಯಿದೆ, ನೀರಿನಲ್ಲಿ ಕಾಯಕ ಪ್ರಜ್ಞೆಯ ಧಾರೆಯಿದೆ. ಇದೆಲ್ಲಕ್ಕೂ ರಕ್ಷೆಯಾಗಿ ಪರಮ ಸಾತ್ವಿಕ ಪರಂಪರೆಯಿದೆ.

"ಬಬಲೇಶ್ವರ"ದ ಜನನದ ಬಗ್ಗೆ ಜನಪದವೇ ಆಧಾರ. ಅದು ಸುಮಾರು ನಾಲ್ಕು ಶತಮಾನಗಳ ಹಿಂದಿನ ಮಾತಿರಬಹುದು. ಈ ಭಾಗವೆಲ್ಲ ಬರೀ ಕಾಡಾಗಿತ್ತು. ಬಬ್ಬಲೀ ಗಿಡಗಳಿಂದ ತುಂಬಿದ ಬೀಡಾಗಿತ್ತು, 'ಬಬ್ಬುಲಿ' ಎಂದರೆ ಜಾಲಿ ಎಂದರ್ಥವಿದೆ. ಆ ಪದ ಕ್ರಮೇಣ 'ಬಬಲಿ' ಆಗಿದೆ. ಈ ಬಬಲೀ ಗಿಡಗಳ ಮಧ್ಯ ಮರೆಯಾಗಿದ್ದ ಶಿವಲಿಂಗವೊಂದನ್ನು ಸ್ಥಳೀಯರಾದ ಜಂಗಮ ಶೆಟ್ಟಿ ಮರಲಿಂಗಪ್ಪ ಎನ್ನುವವರೊಬ್ಬರು ಕಂಡು ಅದನ್ನು ಜನರ ಗಮನಕ್ಕೆ ತಂದು ಪೂಜಾದಿಗಳಿಗೆ ಅನುಕೂಲವಾಗುವಂತೆ ಪ್ರತಿಷ್ಠಾಪಿಸಿದರು. 'ಬಬಲಿ'ಯ ಮಧ್ಯೆ ದೊರೆತ ಈಶ್ವರ 'ಬಬಲೇಶ್ವರ'ನಾದ; ಸ್ಥಳ 'ಬಬಲೇಶ್ವರ'ವಾಯಿತು. ಅಂದಿನ ಈ ಗ್ರಾಮದ ಸರ್ವಜನಕ್ಕೆ 'ಬಬಲೇಶ್ವರ'ನೇ ಆರಾಧ್ಯದೈವ. ಅವನನ್ನೇ ಜನರು ಮುಂದೆ ಸಿದ್ಧೇಶ್ವರ ಎಂದು ಕರೆಯಹತ್ತಿದರು. ಅವರು ಇಂದಿಗೂ ತಮ್ಮ ಬದುಕಿನ ಏಳು ಬೀಳು

ಗಳನ್ನು ಈ 'ಸಿದ್ಧೇಶ್ವರ'ನ ಸನ್ನಿಧಿಗೆ ಸಮರ್ಪಿಸಿಕೊಂಡು ಬರುತ್ತಿದ್ದಾರೆ. ಗ್ರಾಮ ಮಧ್ಯದಲ್ಲಿರುವ ದೇವಾಲಯವೇ ಈ 'ಸಿದ್ಧೇಶ್ವರ'ನ ದೇವಾಲಯವಾಗಿದೆ.

> ಅಂಬಲಿ ಮುತ್ತಪ್ಪ ಹಳದಾಗ ನೆಲದಾನ
> ಹಳ್ಳೊತ್ತಿ ಸಣ್ಣ ಮಳಲೊತ್ತಿ, ಅಂಬಲಿ ಸಿದ್ಧಗ
> ಮಗ್ಗೊತ್ತಿ ಮಾರಿ ಪಾಡ್ಯಾವ.
>
> —ಜನಪದಗೀತೆ.

ಇನ್ನೊಂದು ಘಟನೆ ಈ ರೀತಿ ಇದೆ. 'ಬಬಲೇಶ್ವರ'ದ ಹಿಂದಿನ ಕಟ್ಟಡವಿಯಲ್ಲಿ ವೃದ್ಧ ಕಾವಿಧಾರಿಯೊಬ್ಬ ವಾಸವಾಗಿದ್ದರು. ಒಂದು ಗುಡಿಸಲ ಅವರ ನಿವಾಸವಾಗಿತ್ತು.

ಆ ಕಾಲದಲ್ಲಿ ವಿಜಾಪುರದಲ್ಲಿ ಆದಿಲಷಾಹಿ ಆಳುತ್ತಿದ್ದ. ಆತನ ಸರದಾರನೊಬ್ಬ ಸೈನ್ಯ ಸಮೇತವಾಗಿ ಬಬಲೇಶ್ವರ ಮಾರ್ಗವಾಗಿ ಸಾಗಿದ್ದ. ಭೀಕರ ಬಿಸಿಲಿನ ಒಂದು ಮಧ್ಯಾಹ್ನ. ಬಾಯಾರಿಕೆಯಿಂದ ಬಳಲಿದ್ದ. ಆ ಕಾಡಿನಲ್ಲಿ ನೀರನ್ನು ಹುಡುಕುತ್ತ ಹೊರಟಾಗ ಗುಡಿಸಲ ಮುಂದೆ ಶಾಂತಚಿತ್ತದಿಂದ ವೃದ್ಧ ವ್ಯಕ್ತಿಯ ಗೋಚರ ವಾಯಿತು.

ಯಾವ ಜಂಜಾಟವೂ ಇಲ್ಲದೆ ನೆಲದಮೇಲೆ ನಿರ್ಲಿಪ್ತವಾಗಿ ದೈವ ಚಿಂತನದಲ್ಲಿ ಕುಳಿತುದುದನ್ನು ಕಂಡು ಸರದಾರ ಮಾರುಹೋದ. ಹತ್ತಿರ ಹೋಗಿ, ತನ್ನ ಬಾಯಾರಿಕೆಗೆ ಇಷ್ಟು ನೀರು ಬೇಕೆಂದು ಕೇಳಿದ.

ಆಗ ಆ ಸಾಧು ಹಸನ್ಮುಖದಿಂದ "ಸರದಾರರೇ ಕೇವಲ ನೀರೇ ಏಕೇ, ನಿಮಗಷ್ಟೇ ಅಲ್ಲ ನಿಮ್ಮ ಸೈನಿಕರಿಗೆಲ್ಲ ಅಂಬಲಿ, ನೀರು ಎರಡನ್ನೂ ಒದಗಿಸುವೆನು. ಈಗಾಗಲೇ ಮಧ್ಯಾಹ್ನವಾಗಿದೆ" ಎಂದು ಹೇಳಿದರು.

ಈ ಮಾತು ಕೇಳಿ ಸರದಾರನಿಗೆ ಸೋಜಿಗವಾಯಿತು. "ನಮ್ಮ ಸೈನಿಕರು ನೂರಾರು ಜನ ಅವರೆಲ್ಲರಿಗೂ ಆಹಾರ, ನೀರು ಒದಗಿಸುವದು ಹೇಗೆ ಸಾಧ್ಯವಾದೀತು" ಎಂದು ಪ್ರಶ್ನಿಸಿದ. ಕಾವಿಧಾರಿ "ಸಾಧ್ಯ" ಎಂದಷ್ಟೇ ಹೇಳಿದರು.

ಆತ್ಮ ತೇಜಸ್ಸಿದ್ದವರಿಗೆ ಯಾವುದೂ ಸಾಧ್ಯವಾಗಬಹುದು. ಆ ಯೋಗಿಯ ತೇಜಃಪುಂಜ ಮುಖ, ಮಿತನುಡಿಗಳು ಸರದಾರನನ್ನು ಮಂತ್ರಮುಗ್ಧನನ್ನಾಗಿಸಿದವು. ಮತ್ತೆ ಮಾತನಾಡಲಾಗದೆ ತನ್ನ ಸೈನಿಕರನ್ನೆಲ್ಲ ಅಲ್ಲಿಗೆ ಸೇರಿಸಿದ. ಆ ಸೈನಿಕರಿಗೆಲ್ಲ ಆ ಸತ್ಪುರುಷರು ತಮ್ಮ ಕೈಯೊಳಗಿನ ಕಮಂಡಲದಿಂದ ಅಂಬಲಿ, ನೀರು ನೀಡಿ ತೃಪ್ತಿ ಪಡಿಸಿದರು.

ಈ ಸುದ್ದಿ ಊರ ಜನರಿಗೆಲ್ಲ ಮುಟ್ಟಿತು. ಅಂದಿನಿಂದ ಜನರಿಗೆ ಆ ಯೋಗಿಯಲ್ಲಿ ಭಕ್ತಿ ಭಾವನೆ ಬೆಳೆಯ ತೊಡಗಿತು. ಆ ಸತ್ಪುರುಷರಿಗೆ 'ಅಂಬಲಿಸಿದ್ಧ' ಅನ್ನ ಹತ್ತಿದ್ದರು. ಕೆಲವು ವರ್ಷಗಳ ನಂತರ ಯೋಗಿಯ ಕಾಯ ಹಣ್ಣಾಯಿತು. ಭಕ್ತರೆಲ್ಲ ಸೇರಿ ಊರ ಹೊರವಲಯದಲ್ಲಿದ್ದ ಒಂದು ಪುರಾತನ ದೇಗುಲದಲ್ಲಿ ಅವರ ಸಮಾಧಿಮಾಡಿ, ಲಿಂಗ ಸ್ಥಾಪನೆಗೈದರು. ಬಬಲೇಶ್ವರ ಜನ ಇಂದಿಗೂ ಸಹ ಅಂಬಲಿ ಸಿದ್ಧನ ಬಗ್ಗೆ ಭಕ್ತಿ ಭಾವದಿಂದ ನಡೆದುಕೊಳ್ಳುತ್ತಾರೆ. ಅಂಬಲಿಸಿದ್ಧ ಶಿವೈಕ್ಯವಾದ ಸ್ಥಳವೇ ಈಗ ಅಂಬಲಿ ಮುತ್ಯಾನ ದೇವಸ್ಥಾನ ಆಗಿದೆ.

'ಬಬಲೇಶ್ವರ' ಹೆಸರಿನಲ್ಲಿ ಮತ್ತೊಂದು ಮಹತ್ವಪೂರ್ಣ ಅರ್ಥವಿದೆ. ಬಬಲಿ–ಎಂದರೆ ಜಾಲಿ, ಸ್ವಾಭಾವಿಕವಾಗಿ ಮುಳ್ಳು. ಅದರ ಮಧ್ಯೆ ಈಶ್ವರ ಲಿಂಗ. ಕಠಿಣವಾದ ಮುಳ್ಳಿನ ವನದ ಗರ್ಭದಲ್ಲಿ ಕಾರುಣ್ಯದ ಲಿಂಗ ಮೂರ್ತಿ! ಜಾಲಿಯನ್ನು ತರಿದು ಬಯಲು ಮಾಡಿದಾಗ ಲಿಂಗದ ದರ್ಶನ. ಮಾನವನ ಬದುಕಿಗೆ ಈ ಹಿನ್ನೆಲೆಯೇ ಒಂದು ಪಾಠ. ನಮ್ಮ ಜೀವನಾಂತರಂಗವನ್ನೂ ಅರಿಷಡ್ವರ್ಗಗಳ ಜಾಲಿ ಆವರಿಸುವುದುಂಟು. ಅದರ ಬೆಳೆ ಬಹು ದಟ್ಟ. ರವಿ ರಶ್ಮಿಗೂ ಅಲ್ಲಿ ಪ್ರವೇಶಿಸುವುದು ಕಷ್ಟ. ಅಂತಹ ದಟ್ಟಡವಿಯಲ್ಲಿ ನಾವು ಕಂಗೆಡುವುದು ಸಹಜ. ಆಗ ಜಾಗೃತಿ ಎಂಬ ಜಂಗಮ ಶೆಟ್ಟಿ ಬೇಕಾಗುತ್ತದೆ. ಜಾಲಿಯನ್ನು ಬಯಲು ಮಾಡಿ ಅಂತರಂಗದ ಜ್ಯೋತಿಯನ್ನು ದರ್ಶನ ಮಾಡಿಸಬೇಕಾಗುತ್ತದೆ. ಈ ಅರ್ಥದಲ್ಲಿ 'ಬಬಲೇಶ್ವರ' ಹೆಸರು ಭಕ್ತರ ಬಾಳಿನ ಹಾದಿಗೆ ಒಂದು ಬೆಳಕು.

ದೈವೀ ಸಂಬಂಧದ ಹಿನ್ನೆಲೆ ಹೀಗಿದ್ದರೆ ಐತಿಹಾಸಿಕ ಸಂಬಂಧದ ಇನ್ನೊಂದು ಘಟನೆಯನ್ನು ಇಲ್ಲಿ ಸ್ಮರಿಸಬಹುದು.

ವಿಜಾಪುರ ಜಿಲ್ಲೆಯ ಬದಾಮಿ ತಾಲೂಕಿನಲ್ಲಿ ನಂದಿಕೇಶ್ವರ ಎಂಬ ಗ್ರಾಮವಿದೆ. ಇಂದಿನ ಶಿವಯೋಗ ಮಂದಿರಕ್ಕೆ ಕೇವಲ ಮೂರು ಮೈಲು ದೂರ. ಈ ಗ್ರಾಮದ ಗೌಡರು ನಂದಿಕೇಶ್ವರ ಗೌಡರೆಂದೇ ಪ್ರಸಿದ್ಧರಾಗಿದ್ದರು. ಸಿರಿವಂತರಾದ ಗೌಡರು ವೀರಶೈವರಾಗಿದ್ದರೂ ದೇವೀ ಆರಾಧಕರು. ತಮ್ಮ ಗ್ರಾಮಕ್ಕೆ ಸ್ವಲ್ಪ ದೂರದಲ್ಲಿ ಅವರ ಕುಲದೇವತೆಯಾದ ಬನಶಂಕರೀ ದೇವಾಲಯವಿದೆ. ಅಲ್ಲಿ ಸರಿಯಾದ ವ್ಯವಸ್ಥೆಯಿಲ್ಲದೆ ಕ್ರಮವಾಗಿ ಪೂಜೆ ಪುನಸ್ಕಾರಗಳು ನಡೆಯುತ್ತಿರಲಿಲ್ಲ. ಇದನ್ನು ಗಮನಿಸಿದ ಗೌಡರು ತಾವೇ ಒಬ್ಬ ಬ್ರಾಹ್ಮಣ ಪೂಜಾರಿಯನ್ನು ನೇಮಿಸಿ ನಿತ್ಯ ಪೂಜಾದಿ ಕಾರ್ಯಗಳಿಗೆ ಸೂಕ್ತ ವ್ಯವಸ್ಥೆ ಮಾಡಿದರು. ದೇವಾಲಯದ ವಾತಾವರಣ ಸುಧಾರಿಸಿದಂತೆ ಭಕ್ತರ ಸಂಖ್ಯೆ ಹೆಚ್ಚಾಯಿತು. ಕಾಣಿಕೆಯ ಮೂಲಕ ದೇವಸ್ಥಾನದ ಆದಾಯವೂ ಬೆಳೆಯಿತು. ಆದಾಯ ಹೆಚ್ಚಾದಂತೆ ಪೂಜಾರಿಯ ದೇಹವೂ ಉಬ್ಬತೊಡಗಿತು, ಕೊಬ್ಬತೊಡಗಿತು. ದಿನದಿನಕ್ಕೆ ಹೆಚ್ಚುತ್ತಿದ್ದ ಭಕ್ತರ ಸಂಖ್ಯೆಯನ್ನು ನೋಡಿ ಆ ಪೂಜಾರಿ ತನ್ನ ಪರಿವಾರವನ್ನು ಹೆಚ್ಚಿಸಿಕೊಂಡ. 'ಆರತಿ-ಕಾಣಿಕೆ' ವ್ಯವಸ್ಥೆಗಾಗಿ

ತನ್ನದೇ ಆದ 'ಕೋಟೆ' ಕಟ್ಟಿಕೊಂಡ. ಧನ ಬಲ ಮತ್ತು ಪರಿವಾರದ ಬಲದಿಂದ ಪೂಜಾರಿಗೆ ಅಹಂಕಾರ ಮೈದುಂಬಿಕೊಂಡಿತು. ಆ ಅಮಲಿನಲ್ಲಿ ವರ್ಣದ್ವೇಷದ ಬೀಜ ಬಿತ್ತಿದ ; ತನ್ನ ಜಾತಿಯವರಲ್ಲದೆ ಅನ್ಯ ಜಾತಿಯವರು ಗರ್ಭ ಗುಡಿ ಪ್ರವೇಶಿಸು ವುದನ್ನು ನಿಷೇಧಿಸಿದ. ಅವನ ಜಾತ್ಯಾಂಧತೆ ಎಲ್ಲೆ ಮೀರಿತು. ಅವನಿಗೆ ಆಶ್ರಯ ಕೊಟ್ಟು ಅನ್ನಕ್ಕೆ ಅವಕಾಶ ಮಾಡಿಕೊಟ್ಟ ನಂದಿಕೇಶ್ವರ ಗೌಡರಿಗೇ ಈ ಬಿಸಿ ತಟ್ಟಿತು.

ಒಂದು ದಿನ ಗೌಡರ ಮನೆಯವರು ತಮ್ಮ ಸಂಬಂಧಿಗಳೊಡನೆ ಎಂದಿನಂತೆ ದೇವಿಯ ದರ್ಶನಕ್ಕೆ ಬಂದಾಗ ಪೂಜಾರಿ ಅವರನ್ನು ಅತ್ಯಂತ ಕನಿಷ್ಠವಾಗಿ ಕಂಡ. ಗರ್ಭಗುಡಿಗೆ ಪ್ರವೇಶಿಸಲು ಅವಕಾಶವಿಲ್ಲೆಂದು ನಿರಾಕರಿಸಿದ. ನೆರೆದ ಜನರೆದುರಿಗೆ ಅವಮಾನಗೊಂಡ ಗೌಡರ ಮನೆಯವರು ಮನೆಗೆ ಹಿಂದಿರುಗಿ ನಡೆದ ಘಟನೆಯನ್ನು ಗೌಡರಿಗೆ ತಿಳಿಸಿದರು. ಸುದ್ದಿ ಕೇಳುತ್ತಿದ್ದಂತೆ ಗೌಡರು ಕೋಪೋದ್ರಿಕ್ತರಾದರು. ಪೂಜಾರಿಗೆ ತಕ್ಕ ಪಾಠ ಕಲಿಸಬೇಕೆಂದು ನಿಶ್ಚಯಿಸಿ ತಮ್ಮ ಮಕ್ಕಳಾದ ವೀರನಗೌಡ, ಮತ್ತು ಲಿಂಗನಗೌಡ ಎಂಬ ತರುಣ ವೀರರನ್ನು ಕರೆಸಿ ಪೂಜಾರಿಯ ಸೊಕ್ಕು ಮುರಿದು ಬರಬೇಕೆಂದು ಹೇಳಿದರು.

ಪ್ರತಾಪಶಾಲಿಗಳಾದ ಈ ಯುವ ಸೋದರರು ಪ್ರಗತಿಪರ ವಿಚಾರಧಾರೆಯವರು. ಬನಶಂಕರೀ ದೇವಾಲಯದಿಂದ ಪೂಜಾರಿಗಳನ್ನು ಓಡಿಸಲು ಅವರಿಗೆ ಅಪಾರ ಜನ ಬೆಂಬಲ ದೊರೆಯಿತು. ದೈವೀ ಆರಾಧನೆಗೆ ಈ ಪೂಜಾರಿಯ ದಳ್ಳಾಳಿ ಒಂದು ಅಡ್ಡಗೋಡೆಯೆಂದು ಅವರು ಭಾವಿಸಿದರು. ದೇವರ ಪೂಜೆಯ ಹೆಸರಿನಲ್ಲಿ ವರ್ಣ ದ್ವೇಷದ ಬೆಳೆ ಬೆಳೆಸಲು ಅವಕಾಶ ಕೊಡಬಾರದೆಂದು ಹಠ ತೊಟ್ಟರು. ಉಂಡ ಮನೆಗೆ ದ್ರೋಹ ಬಗೆದ 'ಪೂಜಾರಿ ಧರ್ಮ'ವನ್ನು ನಾಮಾವಶೇಷಮಾಡಬೇಕೆಂಬ ದೀಕ್ಷೆ ವಹಿಸಿದರು. ವೀರನಗೌಡ ಮತ್ತು ಲಿಂಗನಗೌಡರ ಈ ಹೋರಾಟ ದುಷ್ಟ ಸಂಪ್ರದಾ ಯದ ವಿರುದ್ಧ ಸಿಡಿದೆದ್ದ ದಿಟ್ಟ ಹೋರಾಟವಾಗಿತ್ತು.

ಸಮಷ್ಟಿ ಹಿತದ ದೃಷ್ಟಿಯಿಂದ ನಡೆಸುವ ಯಾವುದೇ ಹೋರಾಟಕ್ಕೆ ಜನ ಬೆಂಬಲ ಇದ್ದೇ ಇರುತ್ತದೆ. ಅಂತೇ ನಂದಿಕೇಶ್ವರ ಯುವ ಸೋದರರ ದಿಟ್ಟ ಹೋರಾಟಕ್ಕೆ ಜಯವಾಯಿತು. ಬನಶಂಕರೀ ದೇವಾಲಯದ ಪೂಜಾರಿಗಳು ಪಲಾಯನ ಮಾಡಿದರು. ನಂದಿಕೇಶ್ವರ ಗೌಡರ ಮಕ್ಕಳ ಹೆಸರು ಜನಜನಿತವಾಯಿತು. ಆ ಸುದ್ದಿ ಆಗಿನ ವಿಜಾಪುರದ ಆದಿಲಷಾಹಿಯ ಕಿವಿಗೂ ಮುಟ್ಟಿತು.

ಈ ಮಧ್ಯ ಸೋತು ಅವಮಾನಗೊಂಡ ಪೂಜಾರಿಗಳು ಮತ್ತು ಅವರ ಕಡೆಯ ಜನ ಸುಮ್ಮನಿರಲಿಲ್ಲ. ಸೇಡು ತೀರಿಸಿಕೊಳ್ಳಲು ಮಾರ್ಗ ಹುಡುಕುತ್ತಿದ್ದರು. ಪೂಜಾರಿ ಗಳೆಲ್ಲ ಸೇರಿಕೊಂಡು ಆದಿಲ್‌ಷಾಹಿಯಲ್ಲಿ ನಿಯೋಗ ಹೋಗಿ 'ನಂದಿಕೇಶ್ವರದ ಗೌಡರ ಮಕ್ಕಳು ಭಾರಿ ಪುಂಡಾಟಿಕೆ ನಡೆಸುತ್ತಿದ್ದಾರೆಂದೂ, ಜನಸಾಮಾನ್ಯರು ಅವರ ಕಾಟದಲ್ಲಿ

ಬದುಕುವುದೇ ಕಷ್ಟವಾಗಿದೆಯೆಂದೂ, ಗೌಡರ ಮಕ್ಕಳ ಮೇಲೆ ಉಗ್ರಕ್ರಮ ಕೈಗೊಂಡು ತಮ್ಮಂತಹ ದುರ್ಬಲರಿಗೆ ರಕ್ಷಣೆ ನೀಡಬೇಕೆಂದೂ' ಬಿನ್ನವಿಸಿಕೊಂಡರು. ಆ ಯುವ ಸೋದರರನ್ನು ಕೂಡಲೇ ಬಂಧಿಸಿ ತರಬೇಕೆಂದು ಆದಿಲ್ ಷಾಹಿಯ ಅಪ್ಪಣೆ ಯಾಯಿತು. ಅದಕ್ಕಾಗಿ ಚಿಕ್ಕದೊಂದು ಫೌಜನ್ನೇ ಕಳುಹಿಸಲಾಯಿತು.

ಸುದ್ದಿಯ ಸುಳಿವು ಸಿಕ್ಕಿದ ನಂದಿಕೇಶ್ವರದ ಪಾಟೀಲ ಸೋದರರು ಯೋಚನೆ ಗೀಡಾದರು. "ತಾವೀಗ ಬಂಧನಕ್ಕೆ ಒಳಗಾದರೆ ತಮ್ಮನ್ನು ನಂಬಿದ ಅಪಾರ ಸಂಖ್ಯೆಯ ಜನರಿಗೆ ತೊಂದರೆಯಾಗಬಹುದು. ಇದೊಂದು ಸಂದರ್ಭವಲ್ಲಿ ತಲೆ ಮರೆಸಿಕೊಂಡಿದ್ದು ಮತ್ತೆ ಜನಸೇವೆಗೆ ಸಿದ್ಧರಾಗಬೇಕು" ಎಂದು ಆಲೋಚಿಸಿದರು. ಅಂತೇ ಊರನ್ನು ಬಿಟ್ಟು ಯಾರಿಗೂ ಕಾಣದಂತೆ ವಿಜಾಪುರ ತಾಲೂಕಿನ ಬಬಲೇಶ್ವರ ಗ್ರಾಮದ ಬಳಿಗೆ ಬಂದರು. ಬಬಲೇಶ್ವರ ಗ್ರಾಮದ ಪರಿಸರಕ್ಕೆ ಬಂದಾಗ ಅವರಿಗೆ ಆವುದೋ ರೀತಿಯ ಒಂದು ರಕ್ಷೆ ದೊರೆತಂತೆ ಭಾಸವಾಯಿತು. ಕೆಲವು ಕಾಲ ಆ ಕಾಡಿನ ಮಧ್ಯ ಬೀಡು ಬಿಡಲು ನಿಶ್ಚಯಿಸಿ ಅಲ್ಲೇ ಉಳಿದರು. ಜನರ ರಕ್ಷಣೆಗಾಗಿ ಆ ಅಜ್ಞಾತವಾಸ ಅನಿವಾರ್ಯವಾಗಿತ್ತು,

ಆದರೆ ವಿಧಿಯ ಲೀಲೆಯೇ ಬೇರೆಯಾಗಿತ್ತು. ಇವರು ಬೀಡು ಬಿಟ್ಟ ನೆಲೆ ಆದಿಲ್ ಷಾಹಿಯ ಫೌಜಿಗೆ ತಿಳಿಯಿತು. ಮತ್ತಷ್ಟು ಜನ ಸಶಸ್ತ್ರ ಸೈನಿಕರ ಜೊತೆಗೂಡಿ ಆ ನೆಲೆಗೆ ಮುತ್ತಿಗೆ ಹಾಕಿದರು. ನಂದಿಕೇಶ್ವರದ ಸೋದರರಿಬ್ಬರೂ ಶಕ್ತಿಮೀರಿ ಹೋರಾಡಿದರು. ಆದರೆ ಬಹುಸಂಖ್ಯಾತ ಸೈನ್ಯದೆದುರಿಗೆ ಇವರ ಹೋರಾಟ ನಡೆಯಲಿಲ್ಲ. ಅಂತಿಮವಾಗಿ ಶತ್ರುಗಳ ಕೈವಶವಾಗಬೇಕಾಯಿತು.

ಸೋತರೂ ಶರಣಾಗದ ಸ್ವಾಭಿಮಾನಿಗಳು ವೀರನಗೌಡ ಮತ್ತು ಲಿಂಗನಗೌಡ. ಆದಿಲ್ ಷಾಹಿಯ ದರ್ಬಾರಿನಲ್ಲಿ ವಿಚಾರಣೆ ನಡೆಯಿತು. ಕೊಲೆ ಮತ್ತು ಸುಲಿಗೆಗಳ ಸುಳ್ಳು ಆರೋಪ ಹೊರಿಸಿ ಅವರಿಗೆ ಫಾಶಿ ಶಿಕ್ಷೆ ಘೋಷಿಸಲಾಯಿತು. ಮರಣ ದಂಡನೆಯ ತೀರ್ಪು ಕೇಳಿದಾಗಲೂ ಸೋದರರು ವಿಚಲಿತರಾಗಲಿಲ್ಲ. ಅವರ ಮುಖದಲ್ಲಿ ಸ್ವಾಭಿಮಾನ ಮತ್ತು ಆತ್ಮಗೌರವದ ಹೊಂಬೆಳಗು ಮಿಂಚುತ್ತಿತ್ತು.

ಮಾರನೆಯ ದಿನವೇ ಅಪರಾಧಿಗಳಿಗೆ ಫಾಶಿಶಿಕ್ಷೆ. ಫಾಸಿ ಕಂಬದ ಬಳಿಗೆ ಇಬ್ಬರನ್ನು ಕರೆದೊಯ್ಯುತ್ತಿದ್ದರು. ಇನ್ನೇನು ಫಾಶಿಕಂಬ ಹತ್ತಿರದಲ್ಲಿದೆ. ವೇಳೆಯು ಸ್ವಲ್ಪ ಮಾತ್ರ ಉಳಿದಿದೆ. ಅಷ್ಟರಲ್ಲಿ ಅಣ್ಣ ವೀರನಗೌಡನಿಗೆ ಏನೋ ವಿಚಾರ ಹೊಳೆಯಿತು. ಆರೋಪಿಗಳಾಗಿ ಫಾಶಿಗೊಳಗಾಗುವುದಕ್ಕಿಂತ ಹೋರಾಡಿ ಪ್ರಾಣ ಬಿಡಬೇಕೆನಿಸಿತು. ಅದಕ್ಕೆ ಉಪಾಯವೊಂದು ಹೊಳೆಯಿತು. ಅಂತೇ ತಮ್ಮನಿಗೆ ಕಣ್ಸನ್ನೆಮಾಡಿದ. ಇಬ್ಬರೂ ತಮ್ಮನ್ನು ಕಟ್ಟಿ ಹಿಡಿದಿದ್ದ ಹಗ್ಗಗಳನ್ನು ಕಿತ್ತು ಓಡಿಹೋಗಿ ಬಾದಷಹನ ಮುಂದೆ ನಿಂತರು. ಬಾದಷಹನಿಗೆ ಸೋಜಿಗವಾಯಿತು! ಆಗ

ಸೋದರರಿಬ್ಬರೂ "ಖಾವಂದ್, ನಮ್ಮ ವಿನಂತಿಯೊಂದನ್ನು ತಾವು ಮನ್ನಿಸಬೇಕು. ನಾವೀಗ ತಮ್ಮಲ್ಲಿ ಪ್ರಾಣ ಭಿಕ್ಷೆ ಬೇಡುತ್ತಿಲ್ಲ. ಆದರೆ ಒಂದು ಮಾತು. ನಮ್ಮನ್ನು ಹೇಗೂ ಮರಣ ದಂಡನೆಗೆ ಗುರಿಮಾಡಿದ್ದೀರಿ. ನಮ್ಮ ಸಾವೇ ಅಪರಾಧಕ್ಕೆ ಶಿಕ್ಷೆಯಾಗುವುದಾದರೆ ನಮ್ಮನ್ನು ಯುದ್ಧಕ್ಕೆ ಕಳುಹಿಸಿ. ಅಲ್ಲಿ ಸತ್ತರೆ ನಿಮ್ಮ ತೀರ್ಪು ಕಾರ್ಯಗತವಾದಂತಾಗುತ್ತದೆ. ಗೆದ್ದರೆ ನಿಮ್ಮ ಸಾಮ್ರಾಜ್ಯ ವಿಸ್ತಾರವಾಗುತ್ತದೆ. ನಿಮಗೆ ಸಮಸ್ಯೆಯಾಗಿರುವ ಬೆಳಗಾವಿ ಖಿಲ್ಲೆ ನಿಮ್ಮ ವಶವಾಗುತ್ತದೆ. ಹೋರಾಡುತ್ತಲೇ ಸಾಯಲು ನಮಗೆ ಅವಕಾಶಕೊಡಿರಿ" ಎಂದು ದಿಟ್ಟತನದಿಂದಲೇ ನುಡಿದರು. ಬಾದಷಹನಿಗೆ ಆ ಯುವ ಸೋದರರ ಮಾತು ಹಿಡಿಸಿತು. ಅವರ ಪರಾಕ್ರಮದ ಅರಿವು ಅವನಿಗಿತ್ತು. ಬೆಳಗಾವಿ ಖಿಲ್ಲೆ ಕೈವಶವಾಗುವ ನಿಶ್ಚಯ ಮನದಲ್ಲಿ ಮೂಡಿತು. ಇಬ್ಬರನ್ನು ಬಂಧನದಿಂದ ಬಿಡಿಸಿದ. ಮಾರನೆಯ ದಿನವೇ ಯುದ್ಧಕ್ಕೆ ಕಳುಹಿಸಿದ. ಪಾಟೀಲ ಸೋದರರ ಕೆಚ್ಚಿನ ಹೋರಾಟದಿಂದ ಆದಿಲ್‌ಷಾಹಿಯ ಕಡೆಯವರಿಗೆ ಜಯವಾಯಿತು. ಬೆಳಗಾವಿ ಖಿಲ್ಲೆ ಕೈವಶವಾಯಿತು. ಗೆದ್ದು ಬಂದ ವೀರ ಸೋದರರಿಗೆ ಪಾರಿತೋಷಕ, ಬಂಗಾರ ಮೊದಲಾದ ಉಡುಗೊರೆಗಳನ್ನು ಕೊಡಲು ಬಾದಶಹನ ಅಪ್ಪಣೆಯಾಯಿತು. ಆದರೆ ಅವಾವುವನ್ನು ನಂದಿಕೇಶ್ವರದ ಸೋದರರು ಸ್ವೀಕರಿಸದೆ, "ಬಾದಷಹ, ನಮ್ಮ ಕೆಚ್ಚಿನ ಬಗ್ಗೆ ನಿಮಗೆ ಮೆಚ್ಚಿಗೆಯಾಗಿದ್ದರೆ, ನೀವು ನಮ್ಮನ್ನು ಎಲ್ಲಿ ಬಂಧಿಸಿದಿರೋ ಅಲ್ಲಿಗೇ ಬಿಟ್ಟರೆ ಅದೇ ದೊಡ್ಡ ಪಾರಿತೋಷಕವಾಗುತ್ತದೆ" ಎಂದರು.

ಬೆಳಗಾವಿ ಖಿಲ್ಲೆಯನ್ನು ದೊರಕಿಸಿಕೊಟ್ಟ ವೀರರ ಈ ಅಪೇಕ್ಷೆ ಬಾದಷಹನಿಗೆ ದೊಡ್ಡದೇನಲ್ಲವೆಂದೆನಿಸಿತು. ಅಂತೇ ಅದಕ್ಕೆ ಸಮ್ಮತಿಸಿ ಬಬಲೇಶ್ವರ ಗ್ರಾಮದ ಎರಡು ಸಾವಿರ ಎಕರೆ ಭೂಮಿಯನ್ನು ಪಾಟೀಲ ಸೋದರರಿಗೆ ಉಂಬಳಿಯಾಗಿ ನೀಡಿದನು. ಈ ಉಂಬಳಿ ದೊರೆತಮೇಲೆ ಈ ಪಾಟೀಲ ಸೋದರರೇ ಬಬಲೇಶ್ವರದ ಗೌಡರಾದರು. ಅನಿವಾರ್ಯದ ಅಜ್ಞಾತವಾಸದಲ್ಲಿದ್ದು ಅತ್ಯಂತ ಕಷ್ಟಕ್ಕೊಳಗಾಗಿ ಕೊನೆಗೂ ಜನಸೇವೆ ಸಲ್ಲಿಸುವ ಪುಣ್ಯ ಅವರದಾಯಿತು. ಬಬಲೇಶ್ವರದಲ್ಲಿ ಅಂದಿನಿಂದ ಈ ಪಾಟೀಲ ಮನೆತನ ಅನೇಕ ಸಾಮಾಜಿಕ ಹಾಗೂ ಧಾರ್ಮಿಕ ಸೇವೆಗಳನ್ನು ನಡೆಸುತ್ತ ಬಂದಿದೆ. ಆ ಸೇವೆ ಇಂದಿಗೂ ಸಲ್ಲುತ್ತಿದೆ.

ಇಂತಹ ವಿಶಿಷ್ಟ ಹಿನ್ನೆಲೆಯುನ್ನು ಪಡೆದಿರುವ ಬಬಲೇಶ್ವರ ಹಿಂದೆ ಕಲಾದಗಿ ಜಿಲ್ಲೆಗೆ ಸೇರಿದ ಒಂದು ಚಿಕ್ಕ ಹಳ್ಳಿ ಆಗಿದ್ದರೆ, ಇಂದು ವಿಜಾಪುರ ಜಿಲ್ಲೆಯ ಒಂದು ದೊಡ್ಡ ಗ್ರಾಮವಾಗಿ ಬೆಳೆದಿದೆ. ಇಲ್ಲಿಯ ಜನರ ದೈವೀಭಕ್ತಿಗೆ ಸಾಕ್ಷಿಯಾಗಿ ಅನೇಕ ಗುಡಿಗುಂಡಾರಗಳಿವೆ. ಚಾಲುಕ್ಯ ಮಾದರಿಯ ಎರಡು ದೇವಾಲಯಗಳನ್ನು ಸಂಗಮೇಶ್ವರ – ಕಲ್ಮೇಶ್ವರ ಎಂಬ ಹೆಸರಿನಿಂದ ಇಲ್ಲಿ ಕಾಣಬಹುದು. ಗ್ರಾಮದ ಪೂರ್ವ ದಿಕ್ಕಿಗೆ ಹನುಮಂತ, ವೀರಭದ್ರ, ಅಂಬಲಿ ಮುತ್ಯಾ ದೇವಸ್ಥಾನ; ಪಶ್ಚಿಮಕ್ಕೆ ವಾಡೆದ

ಬಸವಣ್ಣ ದೇವರಗುಡಿ, ದಕ್ಷಿಣಕ್ಕೆ ಕಂತೇಶ್ವ- ಗುಡಿ, ಕೂಸಪ್ಪಯ್ಯನಮಠ, ಉತ್ತರಕ್ಕೆ ಮಾಳಿಂಗರಾಮ ಮತ್ತು ಬೀರಪ್ಪನ ಗುಡಿಗಳು. ಊರ ಮಧ್ಯದಲ್ಲಿ ಶ್ರೀ ಸಿದ್ಧೇಶ್ವರ ಗುಡಿ ಹಾಗೂ ಶ್ರೀ ಗಿರಿಮಲ್ಲಯ್ಯನ ಗುಡಿ; ಅದಕ್ಕೆ ಶಿವನ ಗುಡಿ ಎಂಬ ಹೆಸರು. ಅಲ್ಲಿಯ ಮೂರ್ತಿಗಳು ಸುಂದರ ಕಲಾಕೃತಿಗಳು. ಎಲ್ಲ ದಿಕ್ಕಿಗೂ ಈ ದೇವಾಲಯಗಳೇ ಬಬಲೇಶ್ವರಕ್ಕೆ ಭದ್ರರಕ್ಷೆ!

ಅಂಬಲಿ ಮುತ್ಯಾ, ಸಿದ್ಧೇಶ್ವರ, ವೀರಭದ್ರ ಮತ್ತು ಕೂಸಪ್ಪಯ್ಯನ ಜಾತ್ರೆಗಳು ಪ್ರತಿ ವರ್ಷ ನಡೆಯುತ್ತಿವೆ. ವರ್ಷಕ್ಕೊಮ್ಮೆ ಗ್ರಾಮದ ಕುರುಬ ಜನಾಂಗದವರು ಮಾಳಿಂಗರಾಯ ಮತ್ತು ಬೀರಪ್ಪನ 'ಮಹಾಕಾಂಡ'ವನ್ನು ನಡಿಸುತ್ತಾರೆ. ಅಲ್ಲದೆ ಹಿರೇ ಮಠದಲ್ಲಿ ಪ್ರತಿ ಶ್ರಾವಣಮಾಸದ ಪುರಾಣ ಸಮಾಪ್ತಿಯ ಕಾಲಕ್ಕೆ ಭಾದ್ರಪದ ಮೊದಲನೇ ಸೋಮವಾರ ಸುಪ್ರಸಿದ್ಧವಾದ 'ಮಹಾಗಣಾರಾಧನೆ' ತಪ್ಪದೆ ಜರುಗುವದು.

ಮಾಳಿಂಗರಾಯನ ಗುಡಿ ಮುಂದಿರುವ 'ಮಹಲುಗಂಭ' ಅತ್ಯಂತ ಕಲಾತ್ಮಕವಾಗಿದೆ. ವಿಶೇಷ ಸಂದರ್ಭಗಳಲ್ಲಿ ಈ ಕಂಭದ ಮೇಲೆ ದೀಪಹಚ್ಚುತ್ತಾರೆ. ಈ ದೀಪದ ಬೆಳಕು ಸುತ್ತ ಮುತ್ತ ಮೈಲಗಟ್ಟಲೆ ದೂರಕ್ಕೂ ಕಾಣಿಸುತ್ತದೆ. ಅದು ಒಂದು ರೀತಿಯಲ್ಲಿ ಅಧುನಿಕ 'ಸರ್ಚ್ ಲೈಟ್' ಇದ್ದಂತೆ ಎಂದು ಹೇಳಬಹುದು. ಇದರ ಹೊರತಾಗಿ ಊರಲ್ಲಿ ಎತ್ತರದ ಮೂರು ಹಳೆ ಕಲ್ಲಿನ ದೀಪ ಸ್ತಂಭಗಳು ಬೇರೆ ಇವೆ.

ಈಗ ಊರ ಮಧ್ಯದಲ್ಲಿರುವ ಶ್ರೀ ಸಿದ್ಧೇಶ್ವರ (ಜಾಲಿಯಲ್ಲಿ ದೊರೆತ ಲಿಂಗ) ದೇವಾಲಯದಲ್ಲಿ ವಿಶಾಲವಾದ ಅಂಗಣವಿದೆ. ಹಳೆಯ ಕಟ್ಟಿಗೆಯ ಥಾವಣಿಗೆ ಬದಲಾಗಿ ಈಗ ಸಿಮೆಂಟ್ ಥಾವಣಿ ಹಾಕಲಾಗಿದೆ. ದೇವಸ್ಥಾನದ ಮುಂಭಾಗವೇ ಬಜಾರ. ಅಲ್ಲಿಯ ಆ ಬಯಲೇ ಬಬಲೇಶ್ವರದ ಗ್ರಾಮ ಕಲೆ ಮತ್ತಿತರ ಸಾಂಸ್ಕೃತಿಕ ಪ್ರದರ್ಶನ ಸ್ಥಳ.

ಇಷ್ಟೆಲ್ಲ ದೇಗುಲಗಳ ಮಧ್ಯೆ ಬಬಲೇಶ್ವರದ ಹೃದಯ ದೇಗುಲವೊಂದಿದೆ. ಅದೇ ಭಕ್ತಕೋಟಿಯ ಶಾಂತಿಧಾಮ, ಶ್ರೀ ಹಿರೇಮಠ. ಇದು ದೇಗುಲಗಳ ದೇಗುಲ. ಎಲ್ಲ ಜಾತಿ ಮತಗಳ ಜನರಿಗೂ ಪುಣ್ಯಕ್ಷೇತ್ರ. ಭಕ್ತರಲ್ಲಿ ಪರಮಾತ್ಮ ಪ್ರಜ್ಞೆ ಉಂಟಾಗಬೇಕಾದರೆ ಗುರು ಮುಖದಿಂದಲೇ ಆಗಬೇಕು. ಹಿರೇಮಠದ ಗುರುಗದ್ದಿಗೆ ಅಂತಹ ದಿವ್ಯ ಮಾರ್ಗದರ್ಶನ ನೀಡುತ್ತಿದೆ. ವ್ಯಕ್ತಿಯ ಅಂತರಂಗದ ವಿಕಾಸಕ್ಕೆ ಸಮಾಜದ ಸಂಸ್ಕೃತಿಯ ಸಂವೃದ್ಧಿಗೆ ಹಿರೇಮಠದ ಕೊಡುಗೆ ಅನನ್ಯವಾದುದು. ಅಲ್ಲದೆ ವಿರಕ್ತಮಠ, ಗಚ್ಚಿನ ಮಠ, ಪುರಾಣಿಕ ಮಠ, ಸಾಲಿ ಮಠ, ತಿಗಣಿ ಬಿದರಿ ಮಠ, ಕರಿ ಅಯ್ಯಗಳ ಮಠ, ಶಾಂತಲಿಂಗಯ್ಯನ ಮಠ, ಬೂದಿಹಾಳ ಮಠ, ಮೊದಲಾದ ೧೨ ಮಠಗಳಿವೆ. ಜೊತೆಗೆ ಕೂಸಪ್ಪಯ್ಯನ ಕ್ಷತ್ರಿಯ ಮಠವೊಂದಿದೆ.

ಹಿಂದೆ ಚಿಕ್ಕ, ಚಿಕ್ಕವಾಗಿದ್ದ ಏಳು ಹಳ್ಳಿಗಳು ಕೂಡಿದ್ದು ಇಂದಿನ ಬಬಲೇಶ್ವರ. ಜನಸಂಖ್ಯೆ ಈಗ ಹತ್ತುಸಾವಿರ ದಾಟಿದೆ. ಅಡವಿ ಸಂಗಾಪುರ ಬಬಲೇಶ್ವರದ ಉಪಗ್ರಾಮ. ಬಬಲೇಶ್ವರದ ನೆಲ ಫಲವತ್ತಿನ ನೆಲ. ಜನರಿಗೆ ಒಕ್ಕಲುತನವೇ ಬಲ. ಎರೆ ಮಣ್ಣೇ ಹೆಚ್ಚು. ದೂರದಲ್ಲಿ ದೋಣಿ ಹೊಳೆ (ಉಪ್ಪು ನೀರು) ಹರಿದಿದೆ. ಅದರ ಹತ್ತಿರದ ಭೂಮಿಯಲ್ಲಿ ಒಂದು ಕಲ್ಲು ಕೂಡ ಸಿಕ್ಕುವುದು ಅಪರೂಪ. 'ಎರೆನಾಡೋ ದೊರೆನಾಡೋ' ಎಂಬ ಹಳ್ಳಿಯ ಗಾದೆಗೆ ತಕ್ಕಂತೆ ಬಬಲೇಶ್ವರದ ಮಣ್ಣು ಕಷ್ಟಪಟ್ಟು ದುಡಿಯುವವರಿಗೆ ದೊರೆ ಸುಖ ಕೊಡುವ ಸಂಪತ್ತು ನೀಡಬಲ್ಲದು.

ಈ ಬಬಲೇಶ್ವರ ಬೇಸಾಯದಲ್ಲಿ ಬೆಳಕು ಪಡೆದದ್ದು. ಒಣ ಬೇಸಾಯದ ಭೂಮಿ ಹೆಚ್ಚು; ಆದರೆ ತೋಟ ಪಟ್ಟಿ, ಮಾವಿನ ಬನ ವಿಪುಲ. ಬಾವಿಕಟ್ಟಿ ಎಂಬ ಮನೆತನದಲ್ಲಿ ನೂರಾರು ಹೂಡುವ ಎತ್ತು, ಹಲವಾರು ಹಾಲು, ಹೈನ ಮೊದಲಾದ ದನಕರುಗಳು ಇದ್ದು ಮೂರು ಊರುಗಳಲ್ಲಿ ಬೇಸಾಯ ಕೆಲಸ ಹಿಂದೆ ನಡೆಯುತ್ತಿತ್ತು.

ಕಡೆಮನೆ, ಯಾದವಾಡ, ಜಂಗಮಶೆಟ್ಟಿ, ಬೂದಿಹಾಳ, ಕೋಟಿಹಾಳ, ಖೋಕರೆ ಹಾಗೂ ಕುಲಕರ್ಣಿಯವರ ಮನೆತನಗಳು ಕೂಡ ದೊಡ್ಡ ರೈತರೆಂಬ ಹೆಸರುವಾಸಿಗಳಾಗಿದ್ದಾರೆ. ಇನ್ನು ಉಪಗ್ರಾಮವಾದ ಸಂಗಾಪುರದ ಕೋಟಿಹಾಳ ಎಂಬ ಮನೆತನದವರು ಕೂಡ ಅಷ್ಟೇ.

ಒಕ್ಕಲಿಗರಿಗೆ ತೀರ ಮಹತ್ವದ್ದು ಕಾರ ಹುಣ್ಣಿಮೆ. ಆ ದಿನ ಎತ್ತುಗಳನ್ನು ಓಡಿಸಿ ಕರಿಹರಿಯುವ ಹಿರಿ ಸಾಂಪ್ರದಾಯ. ಈಗಲೂ ಕೂಡ ಅದು ತಪ್ಪದೆ ನಡೆಯುತ್ತಿದೆ.

ಬಹಳ ವರ್ಷಗಳ ಹಿಂದೆ ಹಲಗಲಿಯ ಶೂರ ಬೇಡನೊಬ್ಬನು ಕಾರಹುಣ್ಣಿಮೆಯ ಒಂದೇ ದಿನದಲ್ಲಿ ತೀರದೂರದ ಬಬಲೇಶ್ವರ, ಕಾಖಂಡಿಕಿ, ಕಾರಜೋಳ, ನಿಡೋಣಿ ಮೊದಲಾದ ಏಳು ಊರುಗಳ ಕರಿಹರಿದುಕೊಂಡು ಹೋದುದರಿಂದ ಕಾರಹುಣ್ಣಿಮೆ ಆದ ಏಳು ದಿನಗಳ ನಂತರ ಈ ಊರುಗಳಲ್ಲಿ ಕರಿಹರಿಯಲಾಗುತ್ತಿತ್ತು. ಆದರೆ ಇತ್ತೀಚೆಗೆ ಅದನ್ನು ಹುಣ್ಣಿಮೆಯ ದಿನವೇ ಹರಿಯಲು ಪ್ರಾರಂಭಿಸಿರುವರು.

ಈ ಊರ ಸ್ಥಳಿಕರಲ್ಲಿ ಶಿರಮಗೊಂಡ, ಮಾಳಗೊಂಡ, ಸಂಕೊಂಡ, ಪಾಯಗೊಂಡ, ಹ್ಯಾವಗೊಂಡ ಮುಖ್ಯ. ಇನ್ನು ಸೆಟ್ಟರಲ್ಲಿ ಜಂಗಮ ಶೆಟ್ಟಿ, ಸುಕಾಲ ಶೆಟ್ಟಿ, ನೂರಂದ ಶೆಟ್ಟಿ, ಪಟ್ಟಣ ಶೆಟ್ಟಿ, ಮಾದನ ಶೆಟ್ಟಿ ಎಂಬವು ಪ್ರಾಮುಖ್ಯವಾದವುಗಳು.

ಇಲ್ಲಿ ವೀರಶೈವರು ಹೆಚ್ಚು. ಆದರೂ ಬ್ರಾಹ್ಮಣರು, ಕುರುಬರು, ಹರಿಜನರು ಮತ್ತು ಮಹಮ್ಮದಿಯರೆಲ್ಲ ನೆಮ್ಮದಿಯಿಂದಿರುವರು.

ಹಿಂದಕ್ಕೆ ವಿಜಾಪುರ ಬಾದಶಹನ ಸರದಾರನೊಬ್ಬ ಇಲ್ಲಿಗೆ ಆಗಮಿಸಿದಾಗ ಊಟಮಾಡಿಕೊಂಡು ಹೋಗುವ ಸಂದರ್ಭ ಒದಗಿತು. ಆ ಸಮಯದಲ್ಲಿ ಮಾಡಿದ ಸಾರ (ಆಂಬರ) ತೀರ ರುಚಿಯಾದುದರಿಂದ ಆತನು ಮೆಚ್ಚಿ ಒಂದು ಭೂಮಿಯನ್ನೇ ಉಂಬಳಿಯಾಗಿ ನೀಡಿಹೋದ. ಆ ಭೂಮಿಗೆ ಈಗಲೂಕೂಡ ಆಂಬರಪಟ್ಟಿ ಎಂಬ ಹೆಸರಿರುವದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಆಧುನಿಕ ಕೃಷಿ ಪದ್ಧತಿ ಅಲ್ಲಿ ಜನಪ್ರಿಯವಾಗಿದೆ. ಕೆಂಪು ಮಣ್ಣಿನ ಭೂಮಿ ಊರ ಸುತ್ತಲೂ ಕಾಣುತ್ತದೆ. ಸಾಕಷ್ಟು ನೀರಾವರಿ ಬಾವಿಗಳು, ಪಂಪು ಸೆಟ್ಟುಗಳೂ ಇವೆ. ಕಬ್ಬು, ಬಾಳೆ, ಹತ್ತಿ, ಜೋಳ, ಗೋಧಿ, ಸೇಂಗಾ ಇಲ್ಲಿನ ಮುಖ್ಯ ಬೆಳೆಗಳು. 'ಜೋಣಿ ಬೆಳೆದರೆ ಓಣೆಲ್ಲಕಾಳು' ಎಂಬ ಗಾದಿ ಮಾತು ಈ ಭಾಗದಲ್ಲಿ ಈಗಲೂ ಜೀವಂತವಾಗಿ ಉಳಿದಿದೆ.

ಇಂದಿನ ಬಬಲೇಶ್ವರ ಆಧುನಿಕ ಜೀವನ ಸೌಲಭ್ಯಗಳನ್ನೆಲ್ಲ ಪಡೆದಿದೆ. ಸಂರಕ್ಷಿತ ಕುಡಿಯುವ ನೀರಿನ ವ್ಯವಸ್ಥೆಯಿದೆ. ವಿದ್ಯುಚ್ಛಕ್ತಿಯ ಸೌಲಭ್ಯವಿದೆ. ಜನರ ಆರೋಗ್ಯ, ಹೆರಿಗೆ ಮತ್ತು ಕುಟುಂಬ ಯೋಜನಾ ಸೇವೆಗೆ ಸರಕಾರಿ ಆರೋಗ್ಯ ಕೇಂದ್ರವಿದೆ. ಪಶುವೈದ್ಯ ಸೇವೆಗೂ ಅವಕಾಶ ಕಲ್ಪಿಸಲಾಗಿದೆ. ಒಕ್ಕಲುತನದ ಹುಟ್ಟುವಳಿಗೆ ರಕ್ಷಣೆಯಾಗಿ ದೊಡ್ಡ ಪ್ರಮಾಣದ ಹತ್ತಿನ ಸಹಕಾರ ಸಂಘ ಮತ್ತು ಗುದಾಮಗಳಿವೆ. ವಿದ್ಯುಚ್ಛಕ್ತಿ ಮಂಡಳಿ ಕಛೇರಿ, ವಿಜಯಾ ಬ್ಯಾಂಕ್ ಹಾಗೂ ಜಿಲ್ಲಾ ಸಹಕಾರಿ ಬ್ಯಾಂಕಿನ ಶಾಖೆ, ಅಂಚೆ ಮತ್ತು ತಂತಿ ಕಾರ್ಯಾಲಯ, ಪೋಲೀಸ ಠಾಣೆ, ಖಾದಿ ಭಂಡಾರ, ಮಹಿಳಾ ಮಂಡಳ, ಯುವಕ ಸಂಘ, ಶಿಶುವಿಹಾರ, ಶಿವಾನುಭವ ಸಂಸ್ಥೆ, ಅಕ್ಕನ ಬಳಗ, ಸಮಾಜ ಕಲ್ಯಾಣ ಕೇಂದ್ರ, ಭಜನಾ ಮಂಡಳಿಗಳು, ಖಾಸಗಿ ದವಾಖಾನೆಗಳು, ಕುರಿಗಳ ಕೇಂದ್ರ, ಜ್ಯೂನಿಯರ್ ಕಾಲೇಜು, ಉಚಿತ ಪ್ರಸಾದ ನಿಲಯ, ಬಾಲಕ, ಬಾಲಕಿಯರ ಪ್ರಾಥಮಿಕ ಶಾಲೆ, ಉರ್ದು ಸ್ಕೂಲ, ಜೀವನಾವಶ್ಯಕ ವಸ್ತುಗಳ ಅಂಗಡಿಗಳು, ಹತ್ತಿ ಅಭಿವೃದ್ಧಿ ಉಪಕೇಂದ್ರ, ಗ್ರಾಮ ಸೇವಕ ವಲಯ, ಅನಾಥಾಲಯ, ಹಾಲಿನ ಡೇರಿ ಫಾರ್ಮ, ಭೂ ಸುಧಾರಣೆ ಕೇಂದ್ರ, ಕೆರೆರಚನೆ, ಅರಣ್ಯ ಅಭಿವೃದ್ಧಿ ಶಾಖೆ, ಇವೇ ಮೊದಲಾದ ಅನೇಕ ಸುಧಾರಣೆಗಳು ಬಬಲೇಶ್ವರದ ಆರ್ಥಿಕ, ಶೈಕ್ಷಣಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಮುನ್ನಡೆಯ ಸಂಕೇತವಾಗಿವೆ. ಪ್ರತಿ ಶುಕ್ರವಾರ ಇಲ್ಲಿ ದೊಡ್ಡ ಪ್ರಮಾಣದ ಸಂತೆ ನಡೆಯುತ್ತದೆ. ರಾಜ್ಯದ ಹೆದ್ದಾರಿಯಲ್ಲಿರುವುದರಿಂದ ಇಲ್ಲಿಗೆ ಅನೇಕ ಸಾರಿಗೆ ಬಸ್ಸುಗಳು ಬಂದು ಹೋಗುತ್ತವೆ. ರಾಜ್ಯ ಸಾರಿಗೆ ಸಂಸ್ಥೆಯ ಒಂದು ಬಸ್ ನಿಲ್ದಾಣವೂ ಇದೆ. ಇಲ್ಲಿಂದ ವಿಜಾಪುರ, ಧಾರವಾಡ, ಬೆಳಗಾವಿ, ಬಳ್ಳಾರಿ, ಗುಲಬರ್ಗಾ, ಸೊಲ್ಲಾಪುರ, ಕೊಲ್ಲಾಪುರ ಮೊದಲಾದ ಜಿಲ್ಲಾ ಕೇಂದ್ರಗಳಿಗೆ ಹೋಗಿ ಬರುವ ನೇರ ಸಾರಿಗೆ ಸೌಕರ್ಯವಿದೆ.

ಗ್ರಾಮದ ಸಮಗ್ರ ಆಡಳಿತ ವ್ಯವಸ್ಥೆಗಾಗಿ, ಬಬಲೇಶ್ವರ ಪಟ್ಟಣ ಪಂಚಾಯತಿ ಇದೆ. ವಿಜಾಪುರ ತಾಲೂಕಿನಲ್ಲೇ ದೊಡ್ಡ ಗ್ರಾಮವಾಗಿರುವ ಬಬಲೇಶ್ವರವನ್ನು ಒಂದು ತಾಲೂಕು ಕೇಂದ್ರವನ್ನಾಗಿ ಮಾಡಬೇಕೆಂದು ಜಿಲ್ಲಾ ಹಾಗೂ ತಾಲೂಕಗಳ ಪುನರ್ವಿಂಗಡಣಾ ಸಮಿತಿಗೆ ಮನವಿ ಮಾಡಿಕೊಳ್ಳಲಾಗಿದೆ.

ಒಂದು ಕಾಲದಲ್ಲಿ ಕೇವಲ ಬಬಲಿಗಿಡಗಳಿಂದ ತುಂಬ ಕಾಡಾಗಿದ್ದ ಬಬಲೇಶ್ವರ ಇಂದು ಜನನಿಬಿಡ ಬದುಕಿನ ಬೀಡಾಗಿದೆ. ಕೃಷಿ ಮತ್ತು ಗೃಹ ಕೈಗಾರಿಕೆಗಳ ಮೂಲಕ ಜನ ತಮ್ಮ ಜೀವನವನ್ನು ಸುಧಾರಿಸಿಕೊಳ್ಳುತ್ತಿದ್ದಾರೆ. ಪಟ್ಟಣ ಪಂಚಾಯತಿ ಎಲ್ಲ ಪೌರ ಸೌಲಭ್ಯಗಳನ್ನು ಒದಗಿಸುತ್ತದೆ. ಬಬಲೇಶ್ವರದವರೇ ಆದ ಅನೇಕ ವಿದ್ಯಾವಂತರು ರಾಜಕೀಯ, ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯ, ಕಲೆ, ಹಾಗೂ ಉದ್ಯಮ ಕ್ಷೇತ್ರಗಳಲ್ಲಿ ಹಿರಿಯ ಸ್ಥಾನಮಾನ ಗಳಿಸಿದ್ದಾರೆ.

ಸ್ವಾತಂತ್ರ್ಯ ಹೋರಾಟದ ಕಾಲದಲ್ಲೂ ಬಬಲೇಶ್ವರ ತನ್ನದೇ ಆದ ಅಳಿಲು ಸೇವೆ ಸಲ್ಲಿಸಿದೆ. ಇಲ್ಲಿಯ ಶ್ರೀ ಸ. ಚ. ಮಿರ್ಜಿ, ಅವರ ಪತ್ನಿಯರಾದ ಶ್ರೀಮತಿ ಸಾವಿತ್ರಿಬಾಯಿ ಮಿರ್ಜಿ, ಶ್ರೀ ಎಲ್. ಜಿ. ಕುಲಕರ್ಣಿ ಮತ್ತು ಶ್ರೀ ಬಸಪ್ಪ ರಾಚಪ್ಪ ಮಂಗಳವೇಢೆ ಇವರು ಪ್ರಮುಖ ಪಾತ್ರ ವಹಿಸಿರುವರು. ವಿಜಾಪುರ ಜೇಲಿನಲ್ಲಿರುವಾಗಲೇ ಶ್ರೀ ಮಿರ್ಜಿ ದಂಪತಿಗಳ ಚನ್ನಪ್ರಭು ಎಂಬ ಚಿಕ್ಕಬಾಲಕನು ಜೇಲಿನಲ್ಲಿ ಮೃತಿಹೊಂದಿದನೆಂಬ ಮಾತನ್ನು ಇಲ್ಲಿ ಸ್ಮರಿಸಬಹುದಾಗಿದೆ.

೧೯೩೦ ರಿಂದ ಈ ವರೆಗೆ "ಉದಯ" ದಿನ ಪತ್ರಿಕೆಯನ್ನು ವಿಜಾಪುರದಿಂದಲೂ ಇತ್ತೀಚಿಗೆ ಗುಲಬರ್ಗಾದಿಂದಲೂ ನಡೆಯಿಸಿಕೊಂಡು ಬರುತ್ತಿರುವ ಶ್ರೀ ಸ.ಚ. ಮಿರ್ಜಿ ಅವರು ನಾಡಿನ ಅನೇಕ ಪ್ರಮುಖರಿಗೆ ಚಿರಪರಿಚಿತರಾಗಿದ್ದಾರೆ.

ಇನ್ನು ಬಬಲೇಶ್ವರದ ವಿದ್ಯಾವಂತರಲ್ಲಿ ಶ್ರೀ ಎಂ. ಸಿ. ಅಂಟಿನ, ನಿವೃತ್ತ ಚೀಫ ಎಂಜನಿಯರ, ಡಾ. ಸಿ. ಬಿ. ಪುರಾಣಿಕ, ಪ್ರಾಧ್ಯಾಪಕ, ಆಯುರ್ವೇದ ಕಾಲೇಜ, ಆಸಿಸ್ಟಂಟ ಕಮಿಷನರ ಶ್ರೀ ಸಿ. ಎಸ್. ಜಗದಾಳ, ಪ್ರಿನ್ಸಿಪಾಲ ಶ್ರೀ ಎಸ್. ಎಸ್. ಕಬ್ಬಿನ, ಪ್ರಿನ್ಸಿಪಾಲ ಡಾ. ಜಿ. ಎನ್. ಬಿರಾದಾರ, ಡಾ. ಎಂ. ಜಿ. ಬಿರಾದಾರ, ಪಿ. ಎಚ್. ಡಿ., ಎಗ್ಸಿಕ್ಯೂಟಿವ್ ಇಂಜಿನಿಯರ, ಶ್ರೀ ಎಸ್. ಟಿ. ತೊನಶಾಳ ಮತ್ತು ಪ್ರಾಧ್ಯಾಪಿಕೆ ಶ್ರೀಮತಿ ಲಕ್ಷ್ಮಿಬಾಯಿ ಶಾಂತರಸ ಇವರೇ ಮೊದಲಾದವರನ್ನು ಇಲ್ಲಿ ನೆನೆಯಬಹುದು.

ಉದ್ಯಮ ಕ್ಷೇತ್ರದಲ್ಲಿ ಶ್ರೀ ಶಿವಲಿಂಗಪ್ಪ ಬಸಪ್ಪ ಮಂಗಳವೇಢೆ ಅವರು ತೀರ ಮುಂದುವರಿದಿರುವರೆಂಬ ಮಾತನ್ನು ಇಲ್ಲಿ ಗಮನಿಸಬೇಕಾಗಿದೆ.

ಇಂದು ಆಧುನಿಕ ಪರಿಸರ ರೂಪುಗೊಂಡಿದ್ದರೂ ಬಬಲೇಶ್ವರದ ಜನ ತಮ್ಮ ಧಾರ್ಮಿಕ ಸಂಸ್ಕೃತಿಯನ್ನು ದೂರಮಾಡಿಲ್ಲ. ದೇವರು ಮತ್ತು ಗುರು – ಹಿರಿಯರಲ್ಲಿ ಭಕ್ತಿ ಇಲ್ಲಿನ ಜನಜೀವನಕ್ಕೆ ಸೂತ್ರವಾಗಿದೆ.

---



# ಲಿಂ. ಗುರುಪಾದ ಶಿವಯೋಗಿಗಳು

## (ಪೂರ್ವಾರ್ಧ)



ಮಠದ ಗದ್ದಿಗೆಯಲ್ಲಿಯ ಶಿವಲಿಂಗ



ಮಠದ ಮಹಾದ್ವಾರ



ಲಿಂ. ಗುರುಪಾದಸ್ವಾಮಿಗಳ ಯೋಗದಂಡ, ಲೋಟು



ಮಠದ ತೋಟದಬಾವಿ



ಲಿಂ. ಗುರುಪಾದ ಸ್ವಾಮಿಗಳು ಜನಿಸಿದ ಮನೆ.



ಮಠದ ಆವರಣದಲ್ಲಿಯ ಪುರಾತನ ದೇಗುಲ





ಶಿವಾನುಭವ ಮಂಟಪ

# ಲಿಂ. ಗುರುಪಾದ ಶಿವಯೋಗಿಗಳು

## ೧. ಸಂಸ್ಕಾರ - ಸ್ವಾಮಿತ್ವ

ಹಾಂಸಗಲ್ಲಿನ ಮ್ಯಾಲ ಹಾವ ಹೋದವರ್‍ಯಾರ
ಪಾದಮೂಡ್ಯಾವ ಪರಿ ಪರಿ ಗುರುಪಾದೇಶ್ವರ
ಹಾವ ಹೋಗ್ಯಾರ ಜಳಕಕ.

—ಜನಪದಗೀತೆ.

ಮಹಾ ಶೂನ್ಯ ಚಿದಂಬರ ದೇವನಲ್ಲಿ ಕಾರ್ಯ—ಕಾರಣಭಾವ, ಶೇಷ—ಶೇಷಿ ಭಾವ, ಅಂಶ—ಅಂಶಿ ಭಾವ. ಬಿಂಬ—ಪ್ರತಿಬಿಂಬ ಭಾವ, ಗುಣ—ಗುಣಿ ಭಾವ ಮೊದಲಾದ ಯಾವ ಭಾವಗಳೂ ಇಲ್ಲ. ಅವನು ಅದ್ವಿತೀಯ ಪರಶಿವ! ಪರಿಪೂರ್ಣ ಸಚ್ಚಿದಾನಂದ ಘನ!! ಆ ಘನದಲ್ಲಿ ಒಂದಾದ ಶಿವಯೋಗಿಯು ಜ್ಞಾನ ಶೂನ್ಯಸ್ಥಲಿ. ಅವನು ಭೇದ ಭಾವಗಳಿಲ್ಲದ ಬರಿ ಬಯಲು!!!

—ಸಿದ್ಧಾಂತ ಶಿಖಾಮಣಿ

ಕಂಡುದೆಲ್ಲಾ ಪಾವನ, ಕೇಳುವುದೆಲ್ಲಾ ಪರಮ ಬೋಧೆ
ಮುಟ್ಟಿತೆಲ್ಲಾ ಪರುಷದ ಸೋಂಕು,
ಒಡನೆ ನುಡಿದವರೆಲ್ಲರೂ ಸದ್ಯೋನ್ಮುಕ್ತರು
ಸುಳಿದ ಸುಳುಹೆಲ್ಲಾ ಜಗತ್ಪಾವನ
ಮುಟ್ಟಿದ ಧರೆಯೆಲ್ಲವೂ ಅವಿಮುಕ್ತಿ ಕ್ಷೇತ್ರ
ಸೋಂಕಿದ ಜಗವೆಲ್ಲವೂ ಪುಣ್ಯ ತೀರ್ಥಂಗಳು
ಶರಣೆಂದು ಭಕ್ತಿ ಮಾಡಿದವರೆಲ್ಲರೂ ಸಾಯುಜ್ಯರು
ಗೊಹೇಶ್ವರನ ಶರಣನ ಸುಳುಹಿನ
ಸೊಗಸನುಪಮಿಸ ಬಾರದು

—ಪ್ರಭುದೇವರು

### ಬಾಲ್ಯದ ಬೆಳಕು

ಬಬಲೇಶ್ವರದ ಮರುಳಪ್ಪನವರದು ಶರಣ ಮನೆತನ. ಆ ಮನೆತನದ ಆದರ್ಶ ದಂಪತಿಗಳು ಚನ್ನಬಸವಪ್ಪ ಮತ್ತು ಚನ್ನಬಸವಮ್ಮ. ಅವರಿಗೆ ಗುರುವೇ ದೈವ; ಗುರು ಮಠವೇ ದೇವಾಲಯ. ಮರ್ತ್ಯದ ಕತ್ತಲೆಯಲ್ಲಿ ತಡಕಾಡುವ ಮಾನವನನ್ನು ಅನುಕಂಪದಿಂದ ಕೈ ಹಿಡಿದು ಬೆಳಕಿನತ್ತ ಒಯ್ಯುವ ಕಾರುಣ್ಯ ಮೂರ್ತಿ ಗುರುವೊಬ್ಬನೇ ಎಂಬುದರಲ್ಲಿ ಶರಣ ಚನ್ನಬಸಪ್ಪನವರಿಗೆ ಅಚಲ ನಂಬುಗೆ. ಗುರುವಿನ ಕರುಣೆಯಿಂದ

ಸಹಜವಾದ ಸತ್ಯವಾದ ಪರಮ ಪದವಿಯನ್ನು ಪಡೆಯಲು ಅವರಿಗಿದ್ದ ತವಕ ಅಪಾರ. ಶರಣೆ ಚನ್ನಬಸವಮ್ಮನವರೂ ಅಷ್ಟೇ. ಲೋಕ ಸಂಸಾರದಲ್ಲಿದ್ದರೂ ಪರಮಾರ್ಥದ ಮಾರ್ಗವನ್ನು ಎಡೆಬಿಡದೆ ಹಿಡಿದವರು. ಅವರ ದಾಂಪತ್ಯ ಜೀವನಕ್ಕೆ ಸಮಂತೆ, ಸೈರಣೆಗಳು ರಕ್ಷೆಯಾಗಿದ್ದವು.

ಶುದ್ಧ ಜೀವನದ ಈ ದಂಪತಿಗಳ ಹಿರಿಯ ಮಗನ ಹೆಸರು ಗುರುಪಾದ. ಆತನ ಜನನ ಶಾ.ಶ. ೧೬೭೦. ಹೆತ್ತವರ ಸಂಸ್ಕಾರದ ಮೊತ್ತವಾಗಿ ಬಾಲಕ ಗುರುಪಾದ ವಯಸ್ಸಿಗಿಂತಲೂ ಮುಂದೆ ಬೆಳೆಯುತ್ತಿದ್ದ. ದೃಢವಾದ ಮೈಕಟ್ಟು. ತೇಜಃ ಪೂರ್ಣವಾದ ಮುಖ. ಅವರ್ಣನೀಯವಾದ ಕಣ್ಣಿನ ಕಾಂತಿ. ಗುರುಪಾದ ಮಗುವಾಗಿದ್ದಾಗ ಕೋಣೆಯ ಕೂಸಾಗಿ ಕೊಳೆಯಲಿಲ್ಲ: ಬೀದಿಯ ಕೂಸಾಗಿ ಬೆಳೆದ! ಗುರುಪಾದನನ್ನು ಎತ್ತಿ ಆಡಿಸುವುದೆಂದರೆ ಯಾರಿಗಾದರೂ ಆಸೆ; ತೃಪ್ತಿ !

ಒಂದು ದಿನ ತಂದೆ-ತಾಯಿಗಳು ಎಂದಿನಂತೆ ಗುರುಗಳ ದರ್ಶನಕ್ಕೆಂದು ಮಠಕ್ಕೆ ಹೊರಟಿದ್ದಾರೆ. ಜೊತೆಯಲ್ಲಿ ಬಾಲಕ ಗುರುಪಾದನೂ ಸೇರಿಕೊಂಡ. ಆಗ ಅವನಿಗೆ ಸುಮಾರು ಐದಾರು ವರ್ಷ ಇರಬಹುದು. ಮಠಕ್ಕೆ ಬಂದಕೂಡಲೇ ಚನ್ನಬಸವಪ್ಪ ಚನ್ನಬಸವಮ್ಮನವರು ಗುರುಗಳಿಗೆ ದೀರ್ಘ ದಂಡ ನಮಸ್ಕಾರ ಮಾಡಿದರು. ಗುರುಪಾದನೂ ಮೌನವಾಗಿ ತಂದೆ-ತಾಯಿಯರನ್ನು ಅನುಸರಿಸಿದ.

ವೃದ್ಧರಾಗಿದ್ದ ಶ್ರೀಗುರು ಶಾಂತವೀರ ಸ್ವಾಮಿಗಳು ಆ ಮುಗ್ಧ ಮಗುವನ್ನು ನೋಡಿ ಮುಗುಳ್ನಕ್ಕರು. ಅವರ ಕಾರುಣ್ಯದ ಕಿರಣ ಗುರುಪಾದನ ಮೇಲೆ ಹರಿದುದು ಯಾರಿಗೂ ಕಾಣಲಿಲ್ಲ. ಬಾಲಕನನ್ನು ಗುರುಗಳು ತಮ್ಮ ಹಸ್ತದಿಂದ ಸ್ಪರ್ಶಿಸಿದಾಗ ಅವನ ಮುಖದಲ್ಲಿ ಏನೋ ಬೆರಗು. ತಾಯಿ-ತಂದೆಗಳಿಗೆ ಅವರ್ಣನೀಯ ಅನುಭವ.

"ಈ ಹೂವನ್ನು ನಮ್ಮ ಉಡಿಗೆ ಹಾಕಬಾರದೇಕೆ" ಇದ್ದಕ್ಕಿದ್ದಂತೆ ಶಾಂತವೀರ ಸ್ವಾಮಿಗಳು ನುಡಿದರು. 'ಉದಯಕ್ಕೆ ಹುಟ್ಟದ, ಅಸ್ತಮಾನಕ್ಕೆ ಅಳಿಯದ ಮಹಾ ಬೆಳಗನ್ನು ಕಂಡ' ಶ್ರೀ ಗುರುವಿನ ಮುಖದಿಂದ ಬಂದ ಈ ವಾಣಿಯಲ್ಲಿ ಮಂತ್ರಶಕ್ತಿಯಿತ್ತು. ದಂಪತಿಗಳು ಹಿಂದೆ ಮುಂದೆ ನೋಡಲಿಲ್ಲ. "ಅಪ್ಪಣೆ" ಎಂದು ಗುರುಪಾದಕ್ಕೆ "ಗುರುಪಾದ"ನನ್ನು ಸಲ್ಲಿಸಿದರು.

ಶಾಂತವೀರ ಸ್ವಾಮಿಗಳು ಸಮಾಧಾನದ ನಿಟ್ಟುಸಿರು ಬಿಟ್ಟರು. ಶ್ರೀ ಮಠದ ಧರ್ಮದ ಜ್ಯೋತಿಯನ್ನು ಆರದಂತೆ ನೋಡಿಕೊಳ್ಳುವ ಓರ್ವ ಸಮರ್ಥ ಉತ್ತರಾಧಿಕಾರಿಯನ್ನು ಸ್ವಾಮಿಗಳು ಗುರುಪಾದನಲ್ಲಿ ಕಂಡಿದ್ದರು. ಮನೆಯ ಮಗುವನ್ನು ಮಹಾಮನೆಯ ಮೂರ್ತಿಯನ್ನಾಗಿ ಮಾಡಲು ಸಂಕಲ್ಪಿಸಿ, ಗುರುಪಾದ ಬಾಲಕನ ಮಸ್ತಕದ ಮೇಲೆ ತಮ್ಮ ವರದ ಹಸ್ತವಿಟ್ಟು ಮತ್ತೊಮ್ಮೆ ಆಶೀರ್ವದಿಸಿದರು.

ಚನ್ನಬಸವಪ್ಪ ಮತ್ತು ಚನ್ನಬಸವಮ್ಮ ದಂಪತಿಗಳಿಗೆ ತಮ್ಮ ಜೀವನದಲ್ಲಿ ಸಾರ್ಥಕವಾದ ಗುರುಕಾಣಿಕೆ ಸಲ್ಲಿಸಿದೆವೆಂಬ ತೃಪ್ತಿಯ ಭಾವನೆ ಮೂಡಿತು. ಗುರುಗಳಿಗೆ ಶರಣುಮಾಡಿ ಗುರುಪಾದನನ್ನು ಬಿಟ್ಟು ಮನೆಗೆ ಹಿಂದಿರುಗಿದರು.

ಶಾಂತವೀರ ಸ್ವಾಮಿಗಳಿಗೆ ಎಪ್ಪತ್ತರ ಮೇಲೆ ವಯಸ್ಸಾಗಿತ್ತು. ಮಠದ ಮೂಲ ಪುರುಷರಾಗಿದ್ದುದರಿಂದ ಅದರ ಶ್ರೇಯಸ್ಸಿಗೆ ಸಮರ್ಥ ವ್ಯವಸ್ಥೆ ಮಾಡಬೇಕಾದ ಹೊಣೆ ಅವರ ಮೇಲಿತ್ತು. ಆ ಹೊಣೆಯನ್ನು ಹೊರಲು ಬಾಲಕ ಗುರುಪಾದನನ್ನು ಅಣಿಮಾಡತೊಡಗಿದರು. ಮಠದ ಹಿತಚಿಂತನೆ ಮತ್ತು ಪೂಜಾನುಷ್ಠಾನ ಇವೆರ ಡನ್ನು ಬಿಟ್ಟು ಶಾಂತವೀರ ಸ್ವಾಮಿಗಳು ಬೇರಾವ ಚಟುವಟಿಕೆಗಳ ಕಡೆಗೂ ಗಮನ ಕೊಡುತ್ತಿರಲಿಲ್ಲ. ಗುರುಪಾದನನ್ನು ಸದಾ ತಮ್ಮ ಬಳಿ ಇಟ್ಟುಕೊಂಡು ಅವನ ಪಾಠ–ಪ್ರವಚನಗಳತ್ತ ಗಮನ ಹರಿಸಿದರು.

ಪುಟ್ಟ ಬಾಲಕ ಗುರುಪಾದನಾದರೂ ಅಷ್ಟೇ. ಗುರುಗಳು ಹಾಕಿದ ಗೆರೆ ದಾಟದ ಭಕ್ತ. ಮಠದ ಒಳ ಹೊರಗೆ ಅವನು ಓಡಾಡುತ್ತಿದ್ದರೆ, ಅವರ ಗೆಲುವೇ ಗೆಲುವು. ಗುರುಗಳ ಪೂಜೆಗೆ ಪತ್ರಿ ಹೂ ತರುವುದು, ಪೂಜೆ ನಡೆಯುವಾಗ ಆಸಕ್ತಿಯಿಂದ ನೋಡುವುದು, ಅಗತ್ಯ ಸಾಧನ ಸಲಕರಣೆಗಳನ್ನು ಓಡಿ ಹೋಗಿ ತಂದು ಕೊಡುವುದು, ಗುರುಗಳ ಪ್ರಸಾದ ನಡೆಯುವಾಗ ತಾನೂ ಹತ್ತಿರದಲ್ಲೇ ಕುಳಿತು ಅಚ್ಚುಕಟ್ಟಾಗಿ ಪ್ರಸಾದ ಸ್ವೀಕರಿಸುವುದು ಇವೆಲ್ಲವೂ ಗುರುಪಾದನ ಭವ್ಯ ಭವಿಷ್ಯದ ಸಂಕೇತವಾಗಿ ದ್ದವು. ಮಠಕ್ಕೆ ಬಂದು ಹೋಗುತ್ತಿದ್ದ ಭಕ್ತರನ್ನು ತನ್ನ ಬಾಲ ಭಾಷೆಯಲ್ಲಿ ಮಾತ ನಾಡಿಸುತ್ತಿದ್ದ ರೀತಿಯಂತೂ ಅನನ್ಯವಾಗಿತ್ತು.

ಒಂದು ದಿನ ಮಧ್ಯಾಹ್ನ ಸಮಯ. ಮಠಕ್ಕೆ ಮನಗೂಳಿಯ ಮಹಾ ಸ್ವಾಮಿಗಳು ಕುದುರೆಯ ಮೇಲೆ ಬಂದಿಳಿದರು. ಅವರು ಯಾವಾಗಲೂ ಕಿವಿಟೊಪ್ಪಿಗೆ ಧರಿಸು ತ್ತಿದ್ದುದರಿಂದ "ಟೊಪ್ಪಿಗೀಶ" ಸ್ವಾಮಿಗಳೆಂದೇ ಹೆಸರಾಗಿದ್ದರು. ಅವರು ಬಬಲೇಶ್ವರ ಮಠಕ್ಕೆ ಬಂದಾಗ ಶಾಂತವೀರ ಸ್ವಾಮಿಗಳು ಜಳಕ ಮುಗಿಸಿಕೊಂಡು ಪೂಜಾನು ಷ್ಠಾನಕ್ಕೆ ಕುಳಿತಿದ್ದರು. ಗುರುಪಾದ ಬಾಗಿಲಬಳಿ ನಿಂತಿದ್ದ. ಟೊಪ್ಪಿಗೀಶ ಸ್ವಾಮಿ ಗಳನ್ನು ಕಂಡಕೂಡಲೇ ಗುರುಪಾದ ಚಿರಪರಿಚಿತನಂತೆ ದೀರ್ಘದಂಡ ನಮಸ್ಕಾರ ಮಾಡಿ "ಅಜ್ಜಾ ಅವರು ಶಿವಪೂಜೆಗೆ ಕುಳಿತಾರ. ತಾವು ಮುಹೂರ್ತ ಮಾಡ್ರಿ. ತಾವು ದಯಮಾಡಿಸೀರಿ ಅಂತ ಅಜ್ಜಾ ಅವರಿಗೆ ತಿಳಿಸಿ ಬರ್‍ತೀನ್ರಿ" ಎಂದು ಹೇಳಿ, ಅವರ ಕುದುರೆಯನ್ನು ಪಕ್ಕದ ಕೊಟ್ಟಿಗೆಯಲ್ಲಿ ಕಟ್ಟಿಸುವ ವ್ಯವಸ್ಥೆ ಮಾಡಿದ.

ಗುರುಪಾದನ ಚಟುವಟಿಕೆ ನೋಡಿ ಟೊಪ್ಪಿಗೀಶ ಸ್ವಾಮಿಗಳಿಗೆ ಪ್ರಯಾಣದ ಆಯಾಸವೇ ಪರಿಹಾರವಾಯಿತು. ಅಷ್ಟು ಚಿಕ್ಕ ವಯಸ್ಸಿನಲ್ಲೇ ಸೇವಾನಿಷ್ಠೆ ಮೈಗೂಡಿಕೊಂಡಿರುವುದನ್ನು ಮನಗಂಡು ಅವರಿಗೆ ಅತ್ಯಂತ ಸಂತೋಷವಾಯಿತು.

ಅವರು ತಮ್ಮ ಸಂಚಾರ ಕಾಲದಲ್ಲಿ ಸಾವಿರ, ಸಾವಿರ ಹುಡುಗರನ್ನು ಕಂಡಿದ್ದರೂ ಗುರುಪಾದನಲ್ಲಿ ಮಾತ್ರ ಬೇರಾರಲ್ಲೂ ಕಾಣದ ಗುಣ ಲಕ್ಷಣಗಳನ್ನು ಕಂಡರು. ಅವರ ಸೂಕ್ಷ್ಮ ದೃಷ್ಟಿಗೆ ಗುರುಪಾದ ಬಹು ದೊಡ್ಡವನಾಗಿ ಕಂಡ. ಮಹಾತ್ಮರಿಗೆ ಮಾತ್ರ ಇಂತಹ ಲಕ್ಷಣಗಳು ಸುಲಭ ಗೋಚರ. ಗುರುಪಾದನ ನಗುಮುಖ, ಸಡಗರದ ಓಡಾಟ, ಸೌಜನ್ಯದ ಮಾತುಗಳನ್ನು ಟೊಪ್ಪಿಗೀಶ ಸ್ವಾಮಿಗಳು ಗಮನಿಸುತ್ತಲೇ ಕುಳಿತುಕೊಂಡರು.

ಅಷ್ಟರಲ್ಲಿ ಶಾಂತವೀರ ಸ್ವಾಮೀಗಳು ಪೂಜೆ ತೀರಿಸಿಕೊಂಡು ಹೊರಬಂದರು, ಉಭಯ ಸ್ವಾಮಿಗಳೂ ಪರಸ್ಪರ ನಮಸ್ಕರಿಸಿದರು. ಮಧ್ಯಾಹ್ನದ ಪೂಜೆಗೆ ದಯ ಮಾಡಿಸಬೇಕೆಂದು ಶಾಂತವೀರ ಸ್ವಾಮಿಗಳು ಬಿನ್ನಹ ಮಾಡಿಕೊಂಡರು. ಟೊಪ್ಪಿಗೀಶ ಸ್ವಾಮಿಗಳಿಗೆ ಜಳಕ ಪೂಜೆಗಳನ್ನು ಮಾಡಿಸಲು ಗುರುಪಾದನದೇ ಓಡಾಟ. ಮನೆಗೆ ಬಂದವರನ್ನು ಮನಸಾರೆ ಆದರಿಸುವ ಸಂಸ್ಕಾರ ಗುರುಪಾದನಿಗೆ ತನ್ನ ತಂದೆತಾಯಿಯ ರಿಂದ ಬಂದಿತ್ತು. ಜೊತೆಗೆ ಶಾಂತವೀರ ಸ್ವಾಮಿಗಳ ಪರುಷ ಹಸ್ತದ ಸ್ಪರ್ಶ ಅವನಿಗಾಗಿತ್ತು.

ಟೊಪ್ಪಿಗೀಶ ಸ್ವಾಮಿಗಳ ಜಳಕ ಪೂಜೆ ಮುಗಿದ ಮೇಲೆ ಶಾಂತವೀರ ಸ್ವಾಮಿ ಗಳು ಅವರ ಜೊತೆಯಲ್ಲೇ ಕುಳಿತು ಪ್ರಸಾದ ಸ್ವೀಕರಿಸಿದರು, ಗುರುಪಾದನೂ ಗುರುಗಳ ಎದುರಿಗೆ ಕುಳಿತು ಪ್ರಸಾದ ತೆಗೆದುಕೊಂಡ. ಅವನು ಕೊರಳಲ್ಲಿ ಲಿಂಗ, ರುದ್ರಾಕ್ಷಿ, ಹಣೆಯಲ್ಲಿ ವಿಭೂತಿ ಧರಿಸಿ ಹಸನ್ಮುಖದಿಂದ ಕುಳಿತು ಪ್ರಸಾದ ಸ್ವೀಕರಿ ಸಿದ ರೀತಿ ಟೊಪ್ಪಿಗೀಶ ಸ್ವಾಮಿಗಳ ಮನಸ್ಸನ್ನು ಸೂರೆಗೊಂಡಿತು.

ಪ್ರಸಾದನಂತರ ಗುರುಪಾದನನ್ನು ಹತ್ತಿರಕ್ಕೆ ಕರೆದು ಟೊಪ್ಪಿಗೀಶ ಸ್ವಾಮಿಗಳು ಆತನ ಮಸ್ತಕದ ಮೇಲೆ ತಮ್ಮ ಅಮೃತ ಹಸ್ತವನ್ನಿಟ್ಟರು, ಗುರು–ಶಿಷ್ಯ ಹಸ್ತ-ಮಸ್ತಕ ಸಂಯೋಗ ಒಂದು ಮಿಂಚಿನ ಅನುಭವ. ಅದು ಸಂಸ್ಕಾರವಿದ್ದವರಿಗೆ ಮಾತ್ರ ಅರಿವಾಗುತ್ತದೆ. ಟೊಪ್ಪಿಗೀಶ ಸ್ವಾಮಿಗಳ ಹಸ್ತ ಸ್ಪರ್ಶವಾದ ಕೂಡಲೇ ಗುರುಪಾದ ನಿಗೂ ಅಪೂರ್ವ ಅನುಭವವಾಯಿತು. ತಮ್ಮ ಕಾರುಣ್ಯದ ಕಂದನಿಗೆ ಟೊಪ್ಪಿಗೀಶ ಸ್ವಾಮಿಗಳ ಆಶೀರ್ವಾದ ದೊರೆತುದನ್ನು ಕಂಡ ಶಾಂತವೀರ ಸ್ವಾಮಿಗಳಿಗೆ ಅತ್ಯಂತ ಹರ್ಷವೆನಿಸಿತು. ತನಗರಿವಿಲ್ಲದೆಯೇ ಗುರುಪಾದ "ಗುರುಪುತ್ರ"ನಾದ!

ಬಾಲಕ ಗುರುಪಾದ ಆದರ್ಶ ಗುರುವಾಗಬೇಕೆಂಬುದು ಶಾಂತವೀರ ಸ್ವಾಮಿಗಳ ಸಂಕಲ್ಪ. ತಮ್ಮ ಸಂಕಲ್ಪ ಸಿದ್ಧಿಗಾಗಿ, ತಾವೇ ಗುರುಪಾದ ಮೂರ್ತಿಗೆ ಪಾಠ ಪ್ರವಚನ ನಡೆಸತೊಡಗಿದರು. ಹೆತ್ತವರ ಹಾರೈಕೆ, ಶ್ರೀಗುರುಗಳ ಅನುಗ್ರಹ, ಭಕ್ತಾದಿಗಳ ಅದೃಷ್ಟ ಮೂರೂ ಮುಪ್ಪುರಿಗೊಂಡು ಗುರುಪಾದನನ್ನು ಮೇಧಾವಿಯ ನ್ನಾಗಿ ಮಾಡಿದ್ದವು. ಅವನ ಅಸಾಧಾರಣ ಪ್ರತಿಭೆಯನ್ನು ಕಂಡು ಶಾಂತವೀರ

ಸ್ವಾಮಿಗಳಿಗೇ ಸೋಜಿಗವೆನಿಸುತ್ತಿತ್ತು. ಕಲಿಕೆಯಲ್ಲಿ ಗುರುಪಾದನಿಗೆ ಅಪಾರ ಆಸಕ್ತಿ; ಶ್ರದ್ಧೆ. ಗುರುಮುಖದಿಂದ ಬಂದ ಶ್ರೀವಾಣಿಗಳು ಅವನ ಅಂತರಂಗದ ಮೇಲೆ ಅಚ್ಚೊತ್ತಿದವು. ಆದರ್ಶ ಬದುಕಿಗೆ ಬೇಕಾದ ಎಲ್ಲ ಲಕ್ಷಣಗಳೂ ಆ ಬಾಲಕನಲ್ಲಿ ಮೈಗೂಡತೊಡಗಿದವು.

## ಮಾಹೇಶ್ವರ ದೀಕ್ಷೆ

ಗುರುಪಾದನಿಗೆ ಈಗ ಎಂಟು ವರ್ಷ ಅವನಿಗೆ ಮಾಹೇಶ್ವರ ದೀಕ್ಷೆ ನೀಡಲು ಗುರುಗಳು ಸಂಕಲ್ಪಿಸಿದರು. ಊರ ಜನರಿಗೆ ಹರ್ಷವೋ ಹರ್ಷ. ಚನ್ನಬಸವಪ್ಪ, ಚನ್ನ ಬಸವಮ್ಮ ಅವರಿಗೆ ಹೃದಯ ತುಂಬಿ ಬಂದಿತು. ತಮ್ಮ, ಕರುಳಿನ ಕುಡಿಗೆ ಶ್ರೀಗುರುವಿನ ಮರಿದೇವರಾಗುವ ಭಾಗ್ಯ. ಹೆತ್ತೊಡಲು ಸಾರ್ಥಕವೆನಿಸಿತು. ಹೆತ್ತ ವರೂ ಮಮಕಾರ ದೂರ ಮಾಡಿ ಹತ್ತರಲ್ಲಿ ಹನ್ನೊಂದಾಗಿ ಊರಿನ ಜನರೊಡನೆ ದೀಕ್ಷಾ ಸಂಸ್ಕಾರದ ಸಮಾರಂಭದಲ್ಲಿ ಪಾಲುಗೊಂಡರು. ಮಾಹೇಶ್ವರ ದೀಕ್ಷೆಯ ನಂತರ ಗುರುಪಾದನಿಗೆ ಪೂರ್ವಸಂಬಂಧದ ಹಂಗು ಇಂಗಿತು.

ಭಕ್ತಾದಿಗಳ ನೆರವಿನಿಂದ ದೀಕ್ಷಾ ಸಂಸ್ಕಾರದ ಅಂಗವಾಗಿ ದೊಡ್ಡ ಗಣಾರಾಧ ನೆಯೇ ನಡೆಯಿತು. ಸುತ್ತಮುತ್ತಣ ಹಳ್ಳಿಗಳಿಂದಲೂ ಜನ ಸೇರಿದ್ದರು. ದೀಕ್ಷಾ ಸಂಸ್ಕಾರ ಮುಗಿದ ಮೇಲೆ, ಅಂಗಣದಲ್ಲಿ ಸೇರಿದ್ದ ಜನಸಮೂಹದ ಮುಂದೆ ಶಾಂತ ವೀರ ಸ್ವಾಮಿಗಳು ಬಂದು ನಿಂತು "ಗುರುಪಾದ ಮರಿದೇವರು ನಮ್ಮ ಮಠದ ಉತ್ತ ರಾಧಿಕಾರಿಗಳು" ಎಂದು ಘೋಷಿಸಿದರು. ಭಕ್ತಾದಿಗಳಿಗೆ ಆದ ಆನಂದ ಅಷ್ಟಿಷ್ಟಲ್ಲ. "ಗುರುಪಾದ ಮರಿದೇವರಿಗೆ ಜಯವಾಗಲಿ" ಎಂದು ಜಯಘೋಷ ಮಾಡಿದರು. ಜನಗಳಿಂದ ದೊರೆತ ಅದ್ಭುತ ಸ್ವಾಗತ ಶಾಂತವೀರ ಸ್ವಾಮಿಗಳಿಗೆ ಸಮಾಧಾನವುಂಟು ಮಾಡಿತು, ಆಗತಾನೇ ದೀಕ್ಷಾ ಸಂಸ್ಕಾರ ಪಡೆದು ಬಂದಿದ್ದ ಗುರುಪಾದ ಮರಿದೇವರ ಮುಖ ಗಂಭೀರ ತೇಜಸ್ಸಿನಿಂದ ಕಂಗೊಳಿಸುತ್ತಿತ್ತು.

ಗುರುಪಾದದೇವರು ಪಡೆದ ಸಂಸ್ಕಾರ ಸಾಮಾನ್ಯವಾದುದಲ್ಲ; ಅದು ಶಿವಸಂಸ್ಕಾರ. ಶರೀರದ ಧರ್ಮಗಳನ್ನು ಜಯಿಸಿ ಆತ್ಮಧರ್ಮಗಳನ್ನು ಬೆಳಸಿಕೊಳ್ಳುವಂತೆ ಮಾಡು ವುದೇ ಸಂಸ್ಕಾರದ ಕೆಲಸ. ಶಿವ ಸಂಸ್ಕಾರದ ಪ್ರಸಾದ ಕಾಯ ಪರಮಾರ್ಥಕಾಯ ವಾಗುತ್ತದೆ. ವ್ಯಕ್ತಿ ಜೀವನದಲ್ಲಿ ಶೀಲ ಮತ್ತು ಸಜ್ಜನಿಕೆಗಳು ಅಳವಡುತ್ತವೆ. ಸಂಸ್ಕಾರದ ಪಾವಿತ್ರ್ಯತೆಯನ್ನು ಮಹಾ ದಾರ್ಶನಿಕರಾದ ಪೂಜ್ಯ ಡಾ. ಜ.ಚ.ನಿ. ಅವರ ಮುಂದಿನ ಮಾತುಗಳಲ್ಲಿ ಕಾಣಬಹುದು.

"ತಾಯ ಒಡಲಲ್ಲಿ ಹುಟ್ಟಿ ಬಂದುದು ಜಡದೇಹ; ಜೀವ. ಗುರು ರಾಯನ ಕರದಲ್ಲಿ ಸಂಜಾತವಾಗುವುದು ಅಜಡ ಅಂಗ ಮತ್ತು ಲಿಂಗ. ತಾಯ

ಒಡಲು ಜೀವಾತ್ಮ ಗರ್ಭ; ಗುರುರಾಯ ಕರ ದೇವಾತ್ಮ ಗರ್ಭ. ಅಲ್ಲಿ ದೊರೆಯು ವುದು ಅನ್ನಪೋಷಣೆ. ಇಲ್ಲಿ ದೊರೆಯುವುದು ಪುಣ್ಯ ಪೋಷಣೆ; ಅಲ್ಲಿ ಒದಗುವುದು ಜಲ ಸಂಸ್ಕಾರ; ಮಲ ಸಂಸ್ಕಾರ. ಇಲ್ಲಿ ಒದಗುವುದು ಸುಗುಣ ಸಂಸ್ಕಾರ; ವಿಮಲ ಸಂಸ್ಕಾರ. ಅಲ್ಲಿ ಲಭಿಸುವುದು ಭೋಗ ನಿದ್ರೆ; ಇಲ್ಲಿ ಲಭಿಸುವುದು ಯೋಗ ನಿದ್ರೆ. ಜನನಿ ಜಠರ ಜಾತದಿನ ಜನ್ಮತಿಥಿ; ಜಗದ್ಗುರು ಕರಸಂಜಾತ ಜನ್ಮ ಜಯಂತಿ; ಧರ್ಮ ವರ್ಧಂತಿ. ಅಲ್ಲಿ ಪಿಂಡೋತ್ಪತ್ತಿ; ಇಲ್ಲಿ ಪಿಂಡ ಜ್ಞಾನೋತ್ಪತ್ತಿ. ಅಲ್ಲಿ ಮಾಂಸೋತ್ಪತ್ತಿ; ಇಲ್ಲಿ ಮಂತ್ರೋತ್ಪತ್ತಿ. ಅಲ್ಲಿ ಪತನ; ಇಲ್ಲಿ ಉತ್ಥಾನ. ಅಲ್ಲಿ ಅಜ್ಞಾನ; ಇಲ್ಲಿ ಸುಜ್ಞಾನ. ಅಲ್ಲಿ ಸಾಮಾನ್ಯಗತಿ; ಇಲ್ಲಿ ಸರ್ವ ಮಾನ್ಯ ಪ್ರಗತಿ. ಅಲ್ಲಿ ಅಶಾಂತಿ; ಇಲ್ಲಿ ಶಾಂತಿ. ಅಲ್ಲಿನದು ಭವಸಂಸ್ಕಾರ; ಇಲ್ಲಿನದು ಶಿವಸಂಸ್ಕಾರ! ಶ್ರೀಗುರು ಕರುಣಿಸಿದ ಕ್ರಿಯಾ ಸಂಸ್ಕಾರ ಶಿಷ್ಯನ ಆಚರಣೆಯಲ್ಲೂ. ಜ್ಞಾನ ಸಂಸ್ಕಾರ ವಿಚಾರ ದಲ್ಲೂ ಅಳವಡುತ್ತವೆ. ಆಗ ಅವನಲ್ಲಿ ಅಪೂರ್ವ ಕ್ರಾಂತಿ ಮತ್ತು ಅನುಪಮ ಶಾಂತಿ ಉಂಟಾಗುತ್ತವೆ."

ಗುರುಪಾದ ಮರಿದೇವರ ಬದುಕಿನಲ್ಲಿ ಹೊಸ ತಿರುವು ಆರಂಭವಾಯಿತು. ವೈ-ಮನಂಗಳಲ್ಲಿ ಅಲೌಕಿಕ ಗಾಂಭೀರ್ಯ-ಗಮನಗಳು ಕೂಡಿಕೊಂಡವು. ಸ್ನಾನ-ಶಿವ ಪೂಜೆಗಳಲ್ಲಿ ಎಳ್ಳಷ್ಟೂ ಕ್ರಮತಪ್ಪದ ಆಚರಣೆ. ಗುರುಗಳು ಹೇಳುವ ಪುರಾಣ ಪುಣ್ಯ ಕಥೆಗಳಲ್ಲಿ ವಿಶೇಷ ಆಸಕ್ತಿ. ಪರಿಪೂರ್ಣವಾಗಿ ಅರ್ಥವಾಗದಿದ್ದರೂ ಪಾರಮಾರ್ಥ ವಿಚಾರಗಳಲ್ಲಿ ಅತೀವ ನಿಷ್ಠೆ. ದಿನಗಳೆದಂತೆ ಗುರುಪಾದ ಮರಿದೇವರ ಸುಪ್ತ ಪ್ರಜ್ಞೆಗೆ ಗರಿ ಮೂಡತೊಡಗಿದವು. ಅಧ್ಯಯನದ ಆಸಕ್ತಿ ದ್ವಿಗುಣಗೊಂಡಿತು. ಕಲಿಕೆಯಲ್ಲಿ ಕಾಲಕ್ಕಿಂತ ವೇಗವಾಗಿ ಹೋಗುವ ಹಂಬಲ ಮರಿದೇವರಿಗೆ. ತಮ್ಮ ಉತ್ತರಾಧಿಕಾರಿಯ ಪ್ರಗತಿ ಕಂಡು ಶಾಂತವೀರ ಸ್ವಾಮಿಗಳಿಗೆ ಮಹದಾನಂದ.

ಮಠದ ದಾಸೋಹ ಸೇವೆಗೆ ಹಿಟ್ಟಿನ ಭಿಕ್ಷೆ ಸಂಗ್ರಹಿಸುವ ಕಾಯಕದಲ್ಲೂ ಗುರುಪಾದ ಮರಿದೇವರಿಗೆ ಅಷ್ಟೇ ಶ್ರದ್ಧೆ. ಹನ್ನೆರಡು-ಹದಿಮೂರು ವರ್ಷದ ಮರಿದೇವರು ಕೈಯಲ್ಲಿ ಜೋಳಿಗೆ ಹಿಡಿದು ಭಕ್ತರ ಮನೆಗಳ ಒಳ ಬಾಗಿಲಲ್ಲಿ ನಿಂತು "ತಾಯಿ ದಾಸೋಹದ ಭಿಕ್ಷೆ" ಎಂದರೆ ಆ ದನಿಯಲ್ಲಿ ಆವುದೋ ಮಂತ್ರಶಕ್ತಿ ಅಡಗಿ ದಂತೆ ಕೇಳಿಸುತ್ತಿತ್ತು. ಮರಿದೇವರ ಜೋಳಿಗೆಗೆ ಹಿಟ್ಟು ನೀಡುವುದು ಗೃಹಿಣಿಯರಿಗೆ ಒಂದು ಪುಣ್ಯದ ಅನುಭವವಾಗಿತ್ತು. ಆ ತೇಜಃಪುಂಜ ಮುಖ, ಕಣ್ಣಿನ ಯೋಗ ಕಾಂತಿ ಯಾರಿಗಾದರೂ ಭಕ್ತಿ ಭಾವನೆ ಮೂಡಿಸುವಂತಿದ್ದವು. ಭಿಕ್ಷೆ ನೀಡಿದ ಭಕ್ತರು ಕೈಗಳಿಗೆ ಮರಿದೇವರ ಪವಿತ್ರ ಪಾದ ಮುಟ್ಟಿ ನಮಸ್ಕರಿಸಿದಾಗಲೇ ತೃಪ್ತಿ.

ಊರ ಹಿರಿ-ಕಿರಿಯರಿಗೆಲ್ಲ ಗುರುಪಾದ ಮರಿದೇವರೆಂದರೆ ಮನೆ-ಮಾತು. ಅವರ ನಡೆ ನುಡಿಗಳಿಗೆ ಅವರಿವರೆನ್ನದೆ ಎಲ್ಲರೂ ಮಾರು ಹೋಗಿದ್ದರು. ತಮ್ಮ

ಊರಿನ ಮಠಕ್ಕೆ ಓರ್ವ ಮಹಾ ವಟು ದೊರಕಿದರೆಂದು ಭಕ್ತಾದಿಗಳು ಹಿರಿ ಹಿರಿ ಹಿಗ್ಗಿದರು. ಎಷ್ಟೋ ಜನ ತಾಯಂದಿರು ತಮ್ಮ ಮಕ್ಕಳಿಗೆ "ಗುರುಪಾದ ಮರಿ ದೇವರ್ಹಾಂಗ ನೀನೂ ಆಗ್ಬೇಕು ನೋಡಪ" ಎಂದುದುಂಟು. ತಮ್ಮ ಮಕ್ಕಳೂ ಹಾಗೆ ಸನ್ಯಾಸ ಸ್ವೀಕರಿಸಬೇಕೆಂಬುದು ಬಹುಶಃ ಅವರ ವಿಚಾರವಲ್ಲದಿರಬಹುದಾದರೂ, ಮರಿದೇವರ ಗುಣಸಂಪನ್ನತೆ ತಮ್ಮ ಮಕ್ಕಳಲ್ಲೂ ಬರಬೇಕೆಂಬುದು ಅವರ ಬಯಕೆ ಯಾಗಿತ್ತು. ತಾಯಿ ಚನ್ನಬಸವಮ್ಮ ಗುರುಪಾದ ಮರಿದೇವರು ಮಗುವಾಗಿದ್ದಾಗ ತೊಟ್ಟಿಲಲ್ಲಿಟ್ಟು,

" ಆಚಾರಕ್ಕರಸಾಗು ನೀತಿಗೆ ಪ್ರಭುವಾಗು
ಮಾತಿನಲಿ ಚೂಡಾಮಣಿಯಾಗು ನನ ಕಂದ
ಜ್ಯೋತಿಯೆ ಆಗು ಜಗಕೆಲ್ಲ "

ಎಂದು ಹಾಡಿದ್ದರು. ತೊಟ್ಟಿಲ ತೂಗುವಾಗ ಎಲ್ಲಾ ತಾಯಂದಿರೂ ಈ ಹಾಡು ಹಾಡುತ್ತಾರೆ. ಆದರೆ ಅದರಂತೆ ಆಗುವ ಪುಣ್ಯ ಗುರುಪಾದ ಮರಿದೇವರಂತಹ ಕೆಲ ವರಿಗೆ ಮಾತ್ರ.

ಮಠದ ಎಲ್ಲ ಕೆಲಸಗಳಲ್ಲೂ ಈಗ ಗುರುಪಾದ ಮರಿದೇವರ ಒಪ್ಪವಿದೆ. ಮುಂಜಾನೆಯಿಂದ ರಾತ್ರಿ ಗುರುಗಳು ವಿಶ್ರಾಂತಿಗೆ ಹೋಗುವವರೆಗೂ ಗುರುಪಾದ ಮರಿದೇವರು ಒಂದಲ್ಲ ಒಂದು ಕಾಯಕದಲ್ಲಿ ತೊಡಗಿರುತ್ತಿದ್ದರು. ಅಷ್ಟು ಚಿಕ್ಕ ವಯಸ್ಸಿನಲ್ಲೇ ಗುರುಗಳು ಏಳುವ ಮುನ್ನವೇ ಹಾಸಿಗೆಯಿಂದೇಳುವ ಎಚ್ಚರ. ನಿತ್ಯದ ಕಾಯಕದಲ್ಲಿ ಎಂದೂ ಉದಾಸೀನ ಮಾಡುತ್ತಿರಲಿಲ್ಲ; ಪ್ರತಿದಿನ ಹುಟ್ಟಿದರೂ ಬೇಸರ ವಿಲ್ಲದೆ ಬೆಳಕು ನೀಡುವ ಸೂರ್ಯನಂತೆ !

## ಗುರುಗಳ ಲಿಂಗೈಕ್ಯ

ಗುರುಪಾದ ಮರಿದೇವರಿಂದಾಗಿ ಬಬಲೇಶ್ವರ ಮಠಕ್ಕೆ ಹೊಸ ಕಳೆ ಬಂದಿತು; ಬಂದು ಹೋಗುವ ಭಕ್ತಾದಿಗಳ ಸಂಖ್ಯೆಯು ಹೆಚ್ಚಾಗ ತೊಡಗಿತು. ಮಠದ ಈ ಬೆಳ ವಣಿಗೆ ಶಾಂತವೀರ ಸ್ವಾಮಿಗಳಿಗೆ ಸಮಾಧಾನ ತಂದಿತು. ಮಠದ ಎಲ್ಲ ಚಟುವಟಿಕೆ ಗಳನ್ನು ಮರಿದೇವರಿಗೇ ವಹಿಸಿ ತಾವು ಕೇವಲ ಲಿಂಗಾನುಷ್ಠಾನದಲ್ಲೇ ಇರಬೇಕೆಂದು ಗುರುಗಳು ಸಂಕಲ್ಪ ಮಾಡಿದರು. ಅವರ ಸಂಕಲ್ಪಕ್ಕೆ ತಕ್ಕಂತೆ ಮರಿದೇವರ ಸೇವೆ ನಡೆ ಯುತ್ತಿತ್ತು. ಗುರುಗಳ ತ್ರಿಕಾಲ ಸ್ನಾನ ಪೂಜೆಗಳಿಗೆ ಸಕಾಲದಲ್ಲಿ ಅಣಿಯಾಗುತ್ತಿತ್ತು. ಪ್ರತಿದಿನ ಬೆಳಿಗ್ಗೆ-ಸಂಜೆಗೆ ಕೆಲವು ಸಮಯ ಗುರುಗಳ ಬಳಿ ಕುಳಿತು ಗುರುಪಾದ ಮರಿ ದೇವರು ತತ್ವಾನುಷ್ಠಾನ ಮಾಡುತ್ತಿದ್ದರು. ದಿನಗಳೆದಂತೆ ಗುರುಗಳ ಲಿಂಗಪೂಜಾ ನಿಷ್ಠೆ ಗುರುಪಾದ ಮರಿ ದೇವರ ಮನಗೂಡಿ ಕೊಂಡಿತು, ಇಷ್ಟಲಿಂಗಪೂಜೆ ಅವರ ಏಕಾಗ್ರ ಚಿತ್ತವನ್ನು ಮತ್ತಷ್ಟು ದೃಢಗೊಳಿಸಿತು,

ಗುರುಪಾದ ಮರಿದೇವರಿಗೆ ಈಗ ಹದಿನೈದು ತುಂಬಿದೆ, ಒಂದು ದಿನ ಸಂಜೆಯು ಹೊಂಬಿಸಿಲು. ಮಠದ ಹೊರಾವರಣದಲ್ಲಿ ಕಲ್ಲೋದರ ಮೇಲೆ ಶಾಂತವೀರ ಸ್ವಾಮಿಗಳು ಕುಳಿತಿದ್ದರು. ವಯೋಧರ್ಮಕ್ಕೆ ಅನುಗುಣವಾಗಿ ಅವರ ದೇಹ ಕುಗ್ಗಿತ್ತು. ಸ್ವತಂತ್ರವಾಗಿ ನಡೆದಾಡುವಂತಿರಲಿಲ್ಲ. ಶಿವನ ಧ್ಯಾನ ಬಿಟ್ಟು ಬೇರಾವುದರ ಪರಿವೆಯೂ ಅವರಿಗಿರಲಿಲ್ಲ.

ಸಂಜೆಯ ಪೂಜೆಗೆ ಸಿದ್ಧವಾಗದೆಯೆಂದು ಮರಿದೇವರು ಗುರುಗಳಿಗೆ ತಿಳಿಸಿದರು. ಗುರುಗಳು ಮರಿದೇವರತ್ತ ಮುಖಮಾಡಿ "ದೇವರೂ, ಷಟಸ್ಥಲ ಕುರಿತು ಪ್ರಭು ದೇವರು ಹೇಳಿರುವ ಯಾವುದಾದರೂ ಒಂದು ಪ್ರವಚನ ನೆನಪಿಗೆ ಬಂದರೆ ಹೇಳಿ" ಎಂದರು. ಮರಿದೇವರು ತಡಮಾಡಲಿಲ್ಲ.–

"ವಿಶ್ವಾಸದಿಂದ ಭಕ್ತನಾಗಿ,<br>
ಆ ವಿಶ್ವಾಸದೊಳಗಣ ನಿಷ್ಠೆಯಿಂ ಮಾಹೇಶ್ವರನಾಗಿ,<br>
ಆ ನಿಷ್ಠೆಯೊಳಗಣ ಸಾವಧಾನದಿಂ ಪ್ರಸಾದಿಯಾಗಿ,<br>
ಆ ಸಾವಧಾನದೊಳಗಣ ಸ್ವಾನು ಭಾವದಿಂ ಪ್ರಾಣಲಿಂಗಿಯಾಗಿ,<br>
ಆ ಸ್ವಾನು ಭಾವದೊಳಗಣ ಅರಿವಿನಿಂ ಶರಣನಾಗಿ<br>
ಆ ಅರಿವು ನಿಜದಲ್ಲಿ ಸಮರಸಭಾವಗಳೈದಿದೊಡೆ<br>
ಅದೇ ಐಕ್ಯಸ್ಥಲ ಗುಹೇಶ್ವರ"

ಕಂಚಿನಂತಹ ಆ ಕಂಠದಿಂದ ಹೊರಬಂದ ವಚನ ವಾಣಿ ಗುರುಗಳ ಶಿವಪೂಜೆಗೆ ಗಂಟೆ ಬಾರಿಸಿದಂತಿತ್ತು! "ಶಿವ ಶಿವ" ಎನ್ನುತ್ತಾ ಗುರುಗಳು ಮರಿದೇವರ ಕೈ ಹಿಡಿದೆದ್ದು ಪೂಜೆಗೆ ಹೊರಟರು. ಗುರುಗಳು ಆಗಾಗ ಇದ್ದಕ್ಕಿದ್ದಂತೆ ಯಾವುದಾದರೂ ಶರಣ ವಾಣಿಯನ್ನು ಹೇಳುವಂತೆ ಮರಿದೇವರಿಗೆ ಅಪ್ಪಣೆ ಮಾಡುತ್ತಿದ್ದರು. ಮರಿದೇವರೂ ಅಷ್ಟೆ. ಗುರುಗಳ ಅಪ್ಪಣೆಗೆ ಸದಾ ಸಿದ್ಧ.

ಎಂದಿನಂತೆ ಸಂಜೆಯ ಪೂಜೆಯಾಗಿದೆ. ಅಂದು ಗುರುಗಳು, ಲಿಂಗಕ್ಕೆ ಸಲ್ಲಿಸಿದ ತೀರ್ಥ ಬಿಟ್ಟು ಮತ್ತೇನನ್ನೂ ಸೇವಿಸಲಿಲ್ಲ. ಗುರುಗಳ ದೇಹಕ್ಕೆ ಆಯಾಸವಾಗಿರುವುದು ಮರಿದೇವರಿಗೆ ಅರ್ಥವಾಯಿತು, ಮೆಲ್ಲನೆ ಮೇಲೆಬ್ಬಿಸಿ ಅವರು ಪವಡಿಸುವ ಸ್ಥಳಕ್ಕೆ ಕರೆದೊಯ್ದರು. ತಾವೂ ಪೂಜಾದಿಗಳನ್ನು ಮುಗಿಸಿಕೊಂಡು ಬಂದು ಗುರುಗಳು ಪವಡಿಸುವ ಕೋಣೆಯಲ್ಲೇ ಮಲಗಿದರು. ತಾಸೆರಡು ತಾಸು ಕಳೆದಿರಬಹುದು; ಶಾಂತವೀರ ಸ್ವಾಮಿಗಳು 'ಶಿವ ಶಿವ' ಎಂದುದು ಕೇಳಿ ಬಂದಿತು. ಎಚ್ಚರವಾಗೇ ಇದ್ದ ಮರಿದೇವರು ಎದ್ದು ಬಂದು ನೋಡುವಷ್ಟರಲ್ಲಿ ಗುರುಗಳು 'ಅನ್ನ ಚಿನ್ನವಳಿದು ತನ್ನ ತಾ ಮರೆತಿದ್ದರು;' 'ಗುಹೇಶ್ವರನಿಗೆ ಗುರಿಯಾಗಿದ್ದರು'!

'ಮರಣವೇ ಮಹಾನವಮಿ' ಎಂಬ ಶರಣರ ವಾಣಿಯ ಅರ್ಥವನ್ನು ಅರಿತಿದ್ದ ಮರಿದೇವರು ಗುರುಗಳು ಲಿಂಗೈಕ್ಯರಾದುದಕ್ಕೆ ವಿಚಲಿತರಾಗಲಿಲ್ಲ. ಮನಗೊಳಿಯ

ಟೊಪ್ಪಿಗೀಶ ಸ್ವಾಮಿಗಳಿಗೆ ಹೇಳಿ ಕಳುಹಿಸಿದರು. ಗ್ರಾಮದ ಭಕ್ತಾದಿಗಳನ್ನು ಬರ ಮಾಡಿಕೊಂಡರು. ಮಠದ ಮುಂಭಾಗದಲ್ಲೇ ಶಾಂತವೀರ ಸ್ವಾಮಿಗಳಿಗೆ ಕ್ರಿಯಾ ಸಮಾಧಿ ರಚಿತವಾಯಿತು. ಶಾಸ್ತ್ರ ಧರ್ಮಕ್ಕೆ ಅನುಗುಣವಾಗಿ ಗುರುಗಳ ಅಂತ್ಯಕ್ರಿಯೆ ನಡೆಯಿತು. ಇಂದು ಮಠದ ಮುಂದಿರುವ ಮಹಾ ಗದ್ದುಗೆಯಲ್ಲಿ ಮೊದಲ ಗದ್ದುಗೆಯೇ ಆದಿಯ ಶಾಂತವೀರ ಸ್ವಾಮಿಗಳದು.

ಗುರುಗಳ ಕ್ರಿಯಾ ಸಮಾಧಿಗೆ ಬಂದಿದ್ದ ಸಹಸ್ರಾರು ಜನರ ಯೋಗಕ್ಷೇಮ ನೋಡಿಕೊಳ್ಳುವಲ್ಲಿ ಮರಿದೇವರು ಅಪಾರ ಶ್ರಮವಹಿಸಿದರು, ಆದರೂ ಅವರ ಮುಖದಲ್ಲಿ ಅದೇ ಪ್ರಶಾಂತತೆ; ನಿರ್ಲಿಪ್ತತೆ. ಟೊಪ್ಪಿಗೀಶ ಸ್ವಾಮಿಗಳು ಗುರುಪಾದ ಮರಿದೇವರನ್ನು ನೋಡಿ ಮನಸಾರೆ ಮೆಚ್ಚಿಕೊಂಡರು. ಮಠದ ಮುಂದಿನ ಆಗು ಹೋಗುಗಳ ಬಗ್ಗೆ ಹಿತವಚನ ಹೇಳಿದರು.

ಶಾಂತವೀರ ಸ್ವಾಮಿಗಳ ಕ್ರಿಯಾ ಸಮಾಧಿಯ ನಂತರ, ಎರಡು ವಾರ ಕಾಲ ಮಠದಲ್ಲಿ ಪ್ರತಿನಿತ್ಯ ಪುರಾಣ ಪ್ರವಚನ, ಆಧ್ಯಾತ್ಮ ವಿಚಾರ ವಿನಿಮಯ, ಶಾಸ್ತ್ರಾರ್ಥ ಚರ್ಚೆ, ದಾಸೋಹ ಮೊದಲಾದ ಧಾರ್ಮಿಕ ಚಟುವಟಿಕೆಗಳು ನಡೆದವು. ಸುತ್ತ ಮುತ್ತಣ ಭಕ್ತಾದಿಗಳೆಲ್ಲ ಈ ಅನ್ನ ಮತ್ತು ಜ್ಞಾನ ದಾಸೋಹದಲ್ಲಿ ಪಾಲು ಗೊಂಡಿದ್ದರು. ಮನಗೂಳಿಯ ಟೊಪ್ಪಿಗೀಶ ಸ್ವಾಮಿಗಳು ಹದಿನೈದು ದಿನಗಳ ಕಾಲ ಮಠದಲ್ಲೇ ಉಳಿದು ಭಕ್ತರಿಗೆ ಉಪದೇಶ ನೀಡಿದರು. "ಗುರುಪಾದ ಮರಿದೇವರ ನೇತೃತ್ವದಲ್ಲಿ ಬಬಲೇಶ್ವರ ಹಿರೇಮಠಕ್ಕೆ ಉಜ್ವಲ ಭವಿಷ್ಯವಿದೆ" ಎಂದರು. ಮಹಾ ತಪಸ್ವಿಗಳಾದ ಟೊಪ್ಪಿಗೀಶ ಸ್ವಾಮಿಗಳಿಂದ ಬಬಲೇಶ್ವರದೊಂದಿಗೆ ಬೆಳೆದು ಬಂದ ಮನ ಗೂಳಿಯ ಸಂಪರ್ಕ ಇಂದಿಗೂ ಮುಂದುವರಿದುಕೊಂಡು ಬಂದಿದೆ.

ಗುರುಪಾದ ಮರಿದೇವರ ಕಾರ್ಯ ದಕ್ಷತೆಯನ್ನು ಕಂಡು ಬಂದ ಭಕ್ತರೆಲ್ಲ ಹೃದಯ ತುಂಬಿಕೊಂಡರು. ಈ ಅವಧಿಯಲ್ಲಿ ಮರಿದೇವರಿಗೆ ಹಲವಾರು ಭಕ್ತಾಭಿ ಮಾನಿಗಳ ನಿಕಟ ಪರಿಚಯವಾಯಿತು. ಮಠದ ಪುರೋಭಿವೃದ್ಧಿಗೆ ಅನೇಕ ಜನ ಕಾಣಿಕೆ ಸಲ್ಲಿಸಲು ಮುಂದಾದರು. ಏನೇ ಇದ್ದರೂ ಗುರುಪಾದ ಮರಿದೇವರು ಭಾವಾವೇಶಕ್ಕೆ ಒಳಗಾದವರಲ್ಲ. ಭಕ್ತರ ಉತ್ಸಾಹಕ್ಕೆ, ಅಭಿಮಾನಕ್ಕೆ ಕೃತಜ್ಞತೆ ಸೂಚಿಸಿ, ಸಮಯ ಬಂದಾಗ ಸಹಾಯ ಮಾಡುವಿರಂತೆ ಎನ್ನುತ್ತಿದ್ದರು.

ಶಾಂತವೀರ ಸ್ವಾಮಿಗಳ ಪ್ರತಿರೂಪವಾಗಿ ಗುರುಪಾದ ಮರಿದೇವರು ಮಠದ ಆಗುಹೋಗುಗಳನ್ನು ನೋಡಿಕೊಳ್ಳುತ್ತಿದ್ದರು. ತುಂಬು ಯೌವನದಲ್ಲಿ ಕಾಲಿಡುತ್ತಿದ್ದ ಮರಿದೇವರು ಹಗಲು ಹನ್ನೆರಡು ತಾಸೂ ಬಿಡುವಿಲ್ಲದೆ ಒಂದಲ್ಲ ಒಂದು ಕಾಯಕದಲ್ಲಿ ನಿರತರಾಗಿರುತ್ತಿದ್ದರು. "ಈ ತನು ಮನ ಶಿವನ ಪ್ರಸಾದ. ಅವು ಶಿವನಿಗೆ ಮೀಸಲು." ಎನ್ನುವ ವಿಶ್ವಾಸದಿಂದ ಮಠದ ಏಳಿಗೆಗಾಗಿ ದುಡಿಯ ತೊಡಗಿದರು. "ಮಠ"

ಮತ್ತು "ಗುರು" ಪದಗಳಿಗೆ ಸಾರ್ಥಕತೆ ಉಂಟುಮಾಡಬೇಕೆಂಬ ಸಂಕಲ್ಪದಿಂದ ಮುನ್ನಡೆದರು.

ಮಠದ ಕೆಲಸ ಕಾರ್ಯಗಳಿಗಾಗಿ ಶಾಂತವೀರ ಸ್ವಾಮಿಗಳು ನೇಮಿಸಿಕೊಂಡಿದ್ದ ಸೇವಕರನ್ನು ಮರಿದೇವರು ಅಷ್ಟೇ ಪ್ರೀತಿಯಿಂದ ಕಾಣುತ್ತಿದ್ದರು, ಮಠದ ದನಕರು ಗಳನ್ನು ತಾವೇ ಆಸಕ್ತಿಯಿಂದ ಆರೈಕೆ ಮಾಡುತ್ತಿದ್ದರು. ಮಠಕ್ಕೆ ಬಂದು ಹೋಗು ತ್ತಿದ್ದ ಭಕ್ತರ ಸಂಖ್ಯೆಯೇನೂ ಕಡಿಮೆ ಇರಲಿಲ್ಲ. ಅವರ ಊಟೋಪಚಾರಗಳ ಕಡೆಗೂ ತಾವೇ ಗಮನ ಕೊಡುತ್ತಿದ್ದರು. ಆಗಿಂದಾಗ ಮಠದ ಅಂಗಣದಲ್ಲಿ ಜ್ಞಾನದಾಸೋಹ ಕಾರ್ಯವೂ ನಡೆಯುತ್ತಿತ್ತು.

ಇಷ್ಟೆಲ್ಲ ಕಾರ್ಯ ಚಟುವಟಿಕೆಗಳ ಮಧ್ಯೆಯೂ, ಮರಿದೇವರು ತಮ್ಮ ಅಧ್ಯಯನದ ಬಗ್ಗೆ ಜಾಗ್ರತರಾಗಿಯೇ ಇದ್ದರು. ಅಂತರಂಗದ ವಿಕಾಸಕ್ಕೆ ಅಗತ್ಯ ವಾದ ಆಳವಾದ ಮತ್ತು ಅನುಷ್ಠಾನಗಳಿಗೆ ಸಾಕಷ್ಟು ಕಾಲ ಮೀಸಲಿಡುತ್ತಿದ್ದರು. ದಿನ ದಿನಕ್ಕೆ ಬಬಲೇಶ್ವರ ಮಠದ ಹೆಸರು ಹಬ್ಬತೊಡಗಿತು. ಗುರುಪಾದ ಮರಿದೇವ ರಲ್ಲಿ ಭಕ್ತರಿಗೆ ಭಕ್ತಿಭಾವಗಳು ತುಂಬಿಕೊಂಡವು.

## ಪೀಠಾರೋಹಣ

ಶಾಂತವೀರ ಸ್ವಾಮಿಗಳ ಸಂಕಲ್ಪದಂತೆ ಗುರುಪಾದ ಮರಿದೇವರಿಗೆ ಮಠದ ಅಧಿಕಾರ ಪಟ್ಟ ಕಟ್ಟಲು ಭಕ್ತ ಮುಂದಾಳುಗಳು ಮಾತಿಗೆ ತೊಡಗಿದರು. ಮನ ಗೂಳಿಯ ಟೊಪ್ಪಿಗೀಶ ಸ್ವಾಮಿಗಳ ಬಳಿಗೆ ಹೋಗಿ ಅರಿಕೆಮಾಡಿಕೊಂಡು ಯೋಗ್ಯ ದಿನವನ್ನು ನಿರ್ಧರಿಸಿದರು. ಪಟ್ಟಾಭಿಷೇಕದ ಸುದ್ದಿ ಹಳ್ಳಿ ಹಳ್ಳಿಗಳಿಗೆ ಬಹುಬೇಗ ಹರಡಿತು.

ಗುರುಗಳ ಸಂಕಲ್ಪಕ್ಕಾಗಿ ಪಟ್ಟಾಭಿಷೇಕಕ್ಕೆ ಒಪ್ಪಿದರೂ ತಾವಿನ್ನೂ ಸಾಕಷ್ಟು ಆಧ್ಯಾತ್ಮಿಕ ಜ್ಞಾನ ಬೆಳೆಸಿಕೊಂಡ ಮೇಲೆ ಈ ಕಾರ್ಯ ನಡೆದಿದ್ದರೆ ಚೆನ್ನಾಗಿ ತ್ತೆಂಬುದು ಗುರುಪಾದ ಮರಿದೇವರ ವಿಚಾರ. ನಿಜವಾದ ಆಧ್ಯಾತ್ಮ ಪಿಪಾಸುವಿಗೆ ಯಾವ ಅಧಿಕಾರಗಳೂ ಅಡ್ಡಿಯಾಗುವುದಿಲ್ಲವೆಂದು ಟೊಪ್ಪಿಗೀಶ ಸ್ವಾಮಿಗಳು ಅಪ್ಪಣೆ ಕೊಡಿಸಿ ಮರಿದೇವರನ್ನು ಒಪ್ಪಿಸಿದ್ದರು.

ಮೊದಲೇ ಭಕ್ತಾದಿಗಳ ಭಕ್ತಿ-ಗೌರವಗಳಿಗೆ ಪಾತ್ರರಾಗಿದ್ದ ಗುರುಪಾದ ಮರಿ ದೇವರ ಪಟ್ಟಾಧಿಕಾರವೆಂದರೆ ಕೇಳಬೇಕೆ? ಹತ್ತಕ್ಕೆ ನೂರಾಗಿ, ನೂರಕ್ಕೆ ಸಾವಿರ ವಾಗಿ ಜನ ಸೇರಿದರು. ಮಹೋತ್ಸವಕ್ಕೆ ಬೇಕಾದ ಸಾಧನ ಸಲಕರಣೆಗಳನ್ನೆಲ್ಲ ಭಕ್ತಿಯಿಂದ ತಾವೇ ತಾವಾಗಿ ತಂದು ಕೂಡಿಸಿದರು. ಬಬಲೇಶ್ವರ ಹಿರೇಮಠಕ್ಕೆ

ಮೊಟ್ಟಮೊದಲ ಉತ್ತರಾಧಿಕಾರ ಮಹೋತ್ಸವ. ಮನೆಮನೆಯಲ್ಲಿ ಹಬ್ಬದ ಸಂಭ್ರಮ. ಬಬಲೇಶ್ವರದಲ್ಲಿ ಹಿಂದೆಂದೂ ಕಾಣದಷ್ಟು ಭಕ್ತ ಸಮೂಹ ಸೇರಿತ್ತು.

ಬಬಲೇಶ್ವರ ಮಠದ ಎರಡನೆಯ ಗುರುಗಳ ಪಟ್ಟಾಧಿಕಾರ ಮಹೋತ್ಸವ ಅತ್ಯಂತ ವೈಭವದಿಂದ ನಡೆಯಿತು. ಗುರುಪಾದ ಮರಿದೇವರು ಗುರುಪಾದ ಸ್ವಾಮಿಗಳಾದರು. ಉತ್ಸವಕ್ಕೆ ಸೇರಿದ್ದ ಸಹಸ್ರಾರು ಸಂಖ್ಯೆಯ ಭಕ್ತರು ನೂತನ ಗುರುಗಳ ದರ್ಶನಾಶೀರ್ವಾದ ಪಡೆದು ಹರ್ಷಗೊಂಡರು. ಬಬಲೇಶ್ವರ ಹಿರೇಮಠದ ಇತಿಹಾಸದಲ್ಲಿ ಹೊಸ ಅಧ್ಯಾಯ ಆರಂಭವಾಯಿತು.

ಮಠಕ್ಕೆ 'ಸ್ವಾಮಿ'ಗಳೆನಿಸಿಕೊಳ್ಳುವುದು ಸಾಮಾನ್ಯ ಮಾತಲ್ಲ. ಅದಕ್ಕೆ ಬೇಕಾದ 'ಸ್ವಾಮಿತ್ವ' ಸುಮ್ಮನೆ ಬರುವುದಿಲ್ಲ. ಸಮಾಜಕ್ಕೆ ಮಾರ್ಗದರ್ಶನ ಮಾಡಬೇಕಾದ ಮಹತ್ತರ ಹೊಣೆ 'ಸ್ವಾಮಿ'ಗಳ ಮೇಲಿರುತ್ತದೆ. ಆದುದರಿಂದ ಸ್ವಾಮಿಗಳಾದವರು ಮೊದಲು ಆ ಸ್ಥಾನಕ್ಕೆ ತಕ್ಕ ಅರ್ಹತೆ ಗಳಿಸಿಕೊಳ್ಳಬೇಕು; ಆದರ್ಶ ರೂಢಿಸಿಕೊಳ್ಳಬೇಕು. ಇದಕ್ಕಾಗಿ ಆಳವಾದ ಅಧ್ಯಯನ ಬೇಕಾಗುತ್ತಿದೆ; ಅನುಭಾವ ಅಗತ್ಯವಾಗುತ್ತದೆ. ಗುರುಪಾದ ಸ್ವಾಮಿಗಳಿಗೆ ಇದರ ಅರಿವು ಚೆನ್ನಾಗಿತ್ತು. ಅಂತೆಯೇ ಹೆಚ್ಚಿನ ತತ್ತ್ವ ಹಾಗೂ ಕ್ರಿಯಾ ಜ್ಞಾನದ ಅನುಭಾವ ಪಡೆದುಕೊಳ್ಳುವತ್ತ ಮೊದಲು ಗಮನ ಹರಿಸಿದರು. ಅಕ್ಷರ ವಿದ್ಯೆಗಾಗಲೀ, ಆಧ್ಯಾತ್ಮ ವಿದ್ಯೆಗಾಗಲೀ ಅಷ್ಟಾಗಿ ಆಸಕ್ತಿ ವಹಿಸದ ಆ ಕಾಲದಲ್ಲಿ ಗುರುಪಾದ ಸ್ವಾಮಿಗಳ ಆಶಯಕ್ಕೆ ತಕ್ಕಂತಹ ದಾರ್ಶನಿಕರು ದೊರೆಯುವುದು ದುರ್ಲಭವಾಗಿತ್ತು. ಆದರೂ ಗುರುಪಾದ ಸ್ವಾಮಿಗಳು ನಿರಾಶಾವಾದಿಗಳಲ್ಲ. ಸಾಧಕನಿಗಿರಬೇಕಾದ ಕೆಚ್ಚು-ಮೆಚ್ಚುಗಳು ಅವರಲ್ಲಿ ಮನೆ ಮಾಡಿಕೊಂಡಿದ್ದವು. ಅವರಿಗೆ ಬೇಕಾಗಿದ್ದುದು 'ರೊಟ್ಟಿ ಬಟ್ಟೆಯ ವಿದ್ಯೆಯಲ್ಲ; ಹೃದಯಕ್ಕೆ ಕಾಂತಿ, ಬಗೆಗೆ ಶಾಂತಿ ನೀಡುವ ವಿದ್ಯೆ'ಯಾಗಿತ್ತು. ಅಂತೆಯೇ ಅವರ ಸಾಧನೆ ಆರಂಭವಾಯಿತು.

ಬಬಲೇಶ್ವರ ಸಮೀಪದಲ್ಲಿ ಗೋಠೆ ಎಂಬುದೊಂದು ಚಿಕ್ಕ ಗ್ರಾಮವಿದೆ. ಅದು ಪ್ರಸಿದ್ಧ ಚಿದಂಬರ ಸ್ವಾಮಿಗಳ ಜನ್ಮಸ್ಥಳ. ಈ ಗ್ರಾಮದಲ್ಲಿ ಸಾಲಿ ಮಠದ ಸಿದ್ಧಮಲ್ಲಯ್ಯ ಎಂಬ ಹೆಸರಾಂತ ಪಂಡಿತರಿದ್ದರು. ಅವರು ಸರ್ವ ಶಾಸ್ತ್ರ ನಿಪುಣರೆಂದೆನಿಸಿಕೊಂಡಿದ್ದರು. ಅವರ ಬಗ್ಗೆ ಸಾಕಷ್ಟು ಕೇಳಿದ್ದ ಗುರುಪಾದ ಸ್ವಾಮಿಗಳು, ಶಾಸ್ತ್ರಾಧ್ಯಯನದ ಬಗ್ಗೆ ತಮಗಿರುವ ಅಪೇಕ್ಷೆಯನ್ನು ಅವರಿಗೆ ತಿಳಿಸಿದರು. ಗುರುಸ್ಥಾನದಲ್ಲಿದ್ದ ಗುರುಪಾದ ಸ್ವಾಮಿಗಳ ಅಪೇಕ್ಷೆಗೆ ಇಲ್ಲವೆಂದು ಹೇಳಲಾದೀತೇ? ಸ್ವಾಮಿಗಳೊಂದಿಗೆ ಶಾಸ್ತ್ರ ವಿಚಾರ ವಿನಿಮಯ ನಡಿಸಲು ಸಿದ್ಧಮಲ್ಲಯ್ಯ ಪಂಡಿತರು ಸಂತೋಷದಿಂದ ಒಪ್ಪಿಕೊಂಡರು. ತಿಂಗಳಲ್ಲಿ ಒಂದು ವಾರ ಕಾಲ ಪಂಡಿತರು ಮಠಕ್ಕೆ ಬಂದು ಹೋಗುವ ವ್ಯವಸ್ಥೆಯಾಯಿತು. ಗುರುಪಾದ ಸ್ವಾಮಿಗಳು ಪಂಡಿತರೊಂದಿಗೆ ಅನೇಕ ಗಹನ ತತ್ವಗಳ ಬಗ್ಗೆ ಚರ್ಚೆ ನಡೆಸುತ್ತಿದ್ದರು.

ಈ ಅಧ್ಯಯನ ಹೀಗೆ ಕೆಲವು ಸಮಯ ಸಾಗಿತು. ಆದರೆ ಗುರುಪಾದ ಸ್ವಾಮಿಗಳ ಜ್ಞಾನ ದಾಹ ಹಿಂಗಲಿಲ್ಲ. ಮತ್ತಷ್ಟು ತೀವ್ರ ಚಿಂತನೆ ಅಗತ್ಯವೆನಿಸಿತು. ಕೊನೆಗೆ ಸಿದ್ಧಮಲ್ಲಯ್ಯನವರು ಬಬಲೇಶ್ವರದಲ್ಲೇ ಬಂದಿದ್ದು ಪ್ರತಿ ದಿನವೂ ಶಾಸ್ತ್ರ ಮತ್ತು ತತ್ತ್ವವಿಚಾರ ಪರಿಚಯ ಮಾಡಿಕೊಡುವಂತಾಗಬೇಕೆಂದು ಸ್ವಾಮಿಗಳು ಯೋಚಿಸಿದರು. ಅದೇ ರೀತಿ ಸಿದ್ಧಮಲ್ಲಯ್ಯನವರಿಗೆ ಬಬಲೇಶ್ವರದಲ್ಲೇ ವಾಸ್ತವ್ಯದ ವ್ಯವಸ್ಥೆಯಾಯಿತು. ಊರಿನ ಮುಖ್ಯ ಗೌಡರಾದ ಲಿಂಗನಗೌಡರು ಪಂಡಿತರಿಗೆ ಒಂದು ಜಮೀನನ್ನು ಇನಾಮಾಗಿ ಹಾಕಿಕೊಟ್ಟರು.

ಈ ಸಿದ್ಧಮಲ್ಲಯ್ಯ ಪಂಡಿತರೇ ಬಬಲೇಶ್ವರದಲ್ಲಿರುವ ಪುರಾಣಿಕ ಮಠದ ಮೂಲ ಪುರುಷರು. ಈ ಮಠದ ಪರಂಪರೆಯ ಇನ್ನೊಬ್ಬ ಪಂಡಿತರು ಹಿಂದಿನಿಂದ 'ಗುರುಪಾದೇಶ್ವರ ಪುರಾಣ'ವನ್ನು ಬರೆದಂತೆ ತಿಳಿಯುತ್ತಿದೆ. ಆದರೆ ಅದು ಪ್ರಕಟವಾಗಿಲ್ಲ. ಹಸ್ತಪ್ರತಿ ಮಾತ್ರ ಇದ್ದಂತೆ ಗೊತ್ತಾಗುತ್ತಿದೆ. ಅಂತೂ ಬಬಲೇಶ್ವರ ಹಿರೇಮಠಕ್ಕೂ ಈ ಪುರಾಣಿಕ ಮಠಕ್ಕೂ ನಿಕಟ ಸಂಬಂಧ ಬೆಳೆದುಬಂದಿದೆ. ಪ್ರತಿ ವರ್ಷ ಹಿರೇಮಠದಲ್ಲಿ ನಡೆಯುವ ಪುರಾಣ ಪ್ರವಚನದಲ್ಲಿ ಪುರಾಣಿಕ ಮಠದವರ ಸೇವೆ ಇರುತ್ತದೆ.

ಈ ಪುರಾಣಿಕ ಮಠದ ಲಿಂ. ರುದ್ರಯ್ಯನವರು ಘನರಾಗ ಸಾಂಬಶಿವಯ್ಯನವರಲ್ಲಿ ಶಾಸ್ತ್ರೀಯ ಸಂಗೀತ ಕಲಿತು ಹೆಸರಾದ ಗವಾಯಿಗಳಾಗಿದ್ದರು.

# ೨. ಗುರುಮಠ - ಹಿರಿಮಠ

ಮಠವೆಲ್ಲಿ ಮಠವೆಲ್ಲಿ ಮಠದ ಬಾಕಿಲವೆಲ್ಲಿ
ಕಟದ ರುದ್ರಾಕ್ಷಿ ಕದವೆಲ್ಲಿ ಗುರುಪಾದೇಶ್ವರ
ಮಠವೈತ್ರಿ ಬಾಳಿ ಬನದಾಗ

—ಜನಪದಗೀತೆ.

ಹೀಗೆ ಪಂಡಿತರೊಡನೆ ಶಾಸ್ತ್ರ ಗ್ರಂಥಗಳ ಅಧ್ಯಯನ ಆಲೋಚನೆಗಳಲ್ಲಿ ತೊಡಗಿ ಮೋಕ್ಷಸಾಧನೆಯ ಮಹಾಕಾರ್ಯದಲ್ಲಿ ಮಗ್ನರಾಗಿದ್ದ ಗುರುಪಾದಸ್ವಾಮಿಗಳು ಲೌಕಿಕ-ಕಾರ್ಯಗಳ ಬಗ್ಗೆಯೂ ತಿಳಿದವರಾಗಿದ್ದರು. ಸುತ್ತಲಿನ ಹತ್ತೆಂಟು ವ್ಯವಹಾರಗಳು ಅವರ ಕಣ್ಣ ಮುಂದೆ ಹಾಯುತ್ತಿದ್ದವು. ಅವುಗಳನ್ನು ಚಿಕಿತ್ಸಕ ಬುದ್ಧಿಯಿಂದ ವೀಕ್ಷಿಸುತ್ತಿದ್ದರು.

ಮಹಾತ್ಮರ ಜೀವನದಲ್ಲಿ ಲೌಕಿಕ ಘಟನೆಗಳ ಜೊತೆಯಲ್ಲಿ ಅತಿಮಾನುಷ-ಅಲೌಕಿಕ ಘಟನೆಗಳೂ ಕೂಡಿಬರುತ್ತವೆ. ಅವರ ಮಾತು ಮಂತ್ರವಾಗುತ್ತದೆ. ಕೃತಿ ಘನವಾಗುತ್ತದೆ. ಅವರಿಗರಿವಿಲ್ಲದಂತೆಯೇ ಒಂದು ಅವ್ಯಕ್ತ ಶಕ್ತಿ ಅವರ ಕೈಯಿಂದ ಅಂತಹ ಕೆಲಸಗಳನ್ನು ಮಾಡಿಸುತ್ತದೆ. ಇದು ಹೇಗಾಯಿತು? ಏಕಾಯಿತು? ಎಂಬ ಪ್ರಶ್ನೆಯೇ ಏಳುವುದಿಲ್ಲ. ಈ ಅಲೌಕಿಕ ಘಟನೆಗಳು ಸಾಮಾನ್ಯವಾಗಿ ಲೋಕಹಿತ ದೃಷ್ಟಿಯನ್ನೇ ಹೊಂದಿರುತ್ತವೆ. ಈ ಘಟನೆಗಳು ಸಮಯ ಕೂಡಿಬಂದು ಶಿವ ಪ್ರೇರಣೆಯಾಗಿ ನಡೆಯುವಂತಹ ಮಹಾಕಾರ್ಯಗಳು.

ಹೀಗಾಗಿ ಮಹಾತ್ಮರು ಪವಾಡ ಪುರುಷರಾಗುತ್ತಾರೆ. ಲೋಕಕಲ್ಯಾಣದ ಮಹಾಧ್ಯೇಯದಿಂದ ಹೊರಟ ಶ್ರೀ ಗುರುಪಾದ ಸ್ವಾಮಿಗಳೇನೂ ಇದರಿಂದ ಹೊರತಾಗಲಿಲ್ಲ. ಅವರ ಜೀವನದಲ್ಲಿ ಇಲ್ಲಿಂದ ಮುಂದೆ ಮೇಲಿಂದಮೇಲೆ ಇಂತಹ ಘಟನೆಗಳು ನಡೆದುಹೋದವು. ಬಬಲೇಶ್ವರದಲ್ಲಷ್ಟೇ ಅಲ್ಲ, ನಾಡಿಗೇ ಅವರ ಖ್ಯಾತಿ ಹಬ್ಬಿತು.

### ಗುರುಮಠ ರಚನೆ

ಬಬಲೇಶ್ವರ ಬಾಬಣ್ಣ ಗೌಡರದು ಆ ಭಾಗಕ್ಕೆ ಹೆಸರಾದ ಮನೆತನ. ದೊಡ್ಡ ಮನೆತನಕ್ಕೆ ತಕ್ಕಂತೆ ಅವರ ವ್ಯವಹಾರಗಳೆಲ್ಲ ದೊಡ್ಡವೆ. ವ್ಯವಸಾಯ, ವ್ಯವಹಾರ ದಾಸೋಹ ಎಲ್ಲದರಲ್ಲೂ ಆ ಘನತೆಯನ್ನು ಕಾಪಾಡಿಕೊಂಡು ಬಂದಿದ್ದ ಬಾಬಣ್ಣ

ಗೌಡರಿಗೆ ಆರು ಜನ ಗಂಡು ಮಕ್ಕಳು. ಅವರೆಲ್ಲರಿಗೂ ಸಾಲಾಗಿ ಮನೆ ಕಟ್ಟಿಸಿ ಬದುಕಿಗೆ ಎಲ್ಲ ವ್ಯವಸ್ಥೆಯನ್ನು ಮಾಡಿದ್ದರಿಂದ ಅವರು ಸಾಲಮನೆಯವರೆಂದೇ ಪರಿಚಿತರು.

ಶ್ರೀಶೈಲ ಮಹಾಕ್ಷೇತ್ರ ಭರತ ಖಂಡದ ವಿವಿಧ ಭಾಗಗಳ ಆಸ್ತಿಕ ಜನರ ಪವಿತ್ರ ಯಾತ್ರಾ ಸ್ಥಳ. ಮಲ್ಲಿಕಾರ್ಜುನನ್ನು ಕಾಣುವ ಮಹಾ ಹಂಬಲವನ್ನು ಕೈಗೂಡಿಸಿ ಕೊಂಡು ಕೃತಾರ್ಥಳಾಗಿ ಮುಕ್ತಿ ಪದವಿಗೇರಿದ ಮಹಾ ಶಿವಶರಣೆ ಅಕ್ಕ ಮಹಾದೇವಿಯು ಬಯಲಾದ ಪವಿತ್ರ ಕ್ಷೇತ್ರ.

ಈ ಹಿನ್ನೆಲೆಯಿಂದ ಅಲ್ಲಿಯ ಒಂದೊಂದು ಗಿಡಬಳ್ಳಿಯು, ಕಲ್ಲು ಕಮರಿಗಳೂ ಪಾವಿತ್ರ್ಯತೆಯನ್ನು ಪಡೆದಿವೆ. ಆಧುನಿಕ ಸಂಪರ್ಕ ಸಾಧನಗಳಿಲ್ಲದ ಪೂರ್ವ ಕಾಲದಲ್ಲಿ ಕ್ಷೇತ್ರ ದರ್ಶನ ಒಂದು ಮಹಾಸಾಧನೆ. ಹೋಗಿ ಬಂದ ಮೇಲಂತೂ ಮನಸ್ಸಿಗೆ ಒಂದು ಅನಿರ್ವಚನೀಯವಾದ ಆನಂದ; ಶಾಂತಿ. ಬದುಕು ಸಾರ್ಥಕವಾಯಿತೆಂಬ ಸಮಾಧಾನ. ಈ ಶಾಂತಿ, ಸಮಾಧಾನಗಳಿಗಾಗಿ ಭಕ್ತವೃಂದ ಅವಿರತವಾಗಿ ಈ ಪುಣ್ಯ ಕಾರ್ಯವನ್ನು ಮಾಡುತ್ತ ಬಂದಿದೆ.

ಯಾತ್ರೆ, ಪೂಜೆ, ಸಂತರ್ಪಣೆ, ದಾನ-ದರ್ಮಗಳಲ್ಲಿ ಹೆಸರಾದ ಬಾಬಣ್ಣ ಗೌಡರು ಒಮ್ಮೆ ಶ್ರೀಶೈಲಕ್ಕೆ ಕುಟುಂಬ ಯಾತ್ರೆ ಹೊರಡಲು ನಿರ್ಧರಿಸಿದರು. ಊರಿಗೆ ಹಿರಿಯರಾದ ಗೌಡರ ಕುಟುಂಬಯಾತ್ರೆ ಅಂದರೆ ಕೇಳಬೇಕೆ? ಬಂಧು-ಬಳಗ, ಇಷ್ಟ ಮಿತ್ರರು, ಆಳು-ಕಾಳು ಹೀಗೆ ನೂರಾರು ಜನರ ಒಂದು ಗುಂಪೇ ಯಾತ್ರೆಗೆ ಸಿದ್ಧ ವಾಯಿತು. ದುರ್ಗಮವಾದ ಕಾಡು-ಕಂದರಗಳ ಹಾದಿಯಲ್ಲಿ ದೇವ ದರ್ಶನಕ್ಕಾಗಿ ಹೊರಟ ಗೌಡರ ಯಾತ್ರೆ ಗುರುಕೃಪೆಯಿಂದ ಹೂಸರ ಎತ್ತಿದಂತೆ ಸುಗಮವಾಯಿತು. ಯಾವ ಅಡ್ಡಿ-ಆತಂಕಗಳು ಇಲ್ಲದೆ ನಡೆದ ಯಾತ್ರೆಯ ಅನುಭವ ಆತ್ಮಕ್ಕೆ ತೃಪ್ತಿ ತಂದಿತು.

ಯಾತ್ರೆಯಿಂದ ಬಂದಮೇಲೆ ದಾನ-ಧರ್ಮ, ದಾಸೋಹಮಾಡಿ ಧನ್ಯವಾಗುವದು ಸಂಪ್ರದಾಯ. ಅದರಂತೆ ಬಾಬಣ್ಣ ಗೌಡರು ತಮ್ಮ ಮನೆಯಲ್ಲಿ ಸಂಭ್ರಮದ ಕಾರ್ಯ ಕ್ರಮವನ್ನು ಇಟ್ಟುಕೊಂಡರು. ಸುತ್ತಲಿನ ಗ್ರಾಮಗಳ ಜನಕ್ಕೆಲ್ಲ ಆಮಂತ್ರಣ ಕಳಿಸಿದರು. ಗಣಾರಾಧನೆಗೆ ಶ್ರೀ ಗುರುಪಾದ ಸ್ವಾಮಿಗಳನ್ನು ಆಗಮಿಸಬೇಕೆಂದು ಪ್ರಾರ್ಥಿಸಿಕೊಂಡರು. ಅವರ ಆಸೆಯಂತೆ ಸ್ವಾಮಿಗಳು ಆಗಮಿಸಲು ಒಪ್ಪಿದರು. ಐದು ದಿನಗಳ ಕಾಲ ಒಂದು ವಿಶೇಷ ಉತ್ಸವದಂತೆ ನಡೆದ ಈ ಸಮಾರಂಭದ ಮೊದಲದಿನ ಸ್ವಾಮಿಗಳ ಲಿಂಗಾರ್ಚನೆ, ಪಾದಪೂಜೆ, ಪ್ರಸಾದ ಸ್ವೀಕಾರ ಕಾರ್ಯವಾದ ಮೇಲೆ ಗೌಡರು ತಮ್ಮ ಗುರು ಕಾಣಿಕೆಯಾಗಿ ಐವತ್ತು ಬೆಳ್ಳಿಯ ಗಟ್ಟಿ ನಾಣ್ಯಗಳನ್ನು

ತಮ್ಮ ಹಿರಿಯ ಸೊಸೆಯ ಕೈಯಿಂದ ಸ್ವಾಮಿಗಳಿಗೆ ಅರ್ಪಿಸಿದರು. ಆದರೆ ಸ್ವಾಮಿ ಗಳು ಆ ಗುರುದಕ್ಷಿಣೆಯನ್ನು ಸ್ವೀಕರಿಸದೆ ಹಾಗೇ ಹೋದರು.

ಸ್ವಾಮಿಗಳು ತಾವು ಅರ್ಪಿಸಿದ್ದ ಗುರುದಕ್ಷಿಣೆಯನ್ನು ಸ್ವೀಕರಿಸದಿದ್ದುದು ಗೌಡರಿಗೆ ಒಂದು ಸಮಸ್ಯೆಯಾಯಿತು. ತಮ್ಮ ಏರ್ಪಾಟಿನಲ್ಲಿ ಏನಾದರೂ ಕುಂದಾಯಿತೇನೋ ಎಂಬ ಅಳುಕು ಮನಸ್ಸಿನಲ್ಲಿ ಕಾಡತೊಡಗಿತು. ಆದರೂ ಸಮಾಧಾನ ತಂದು ಕೊಂಡರು.

ಮರುದಿನ ಗುರುಪಾದ ಸ್ವಾಮಿಗಳು ಶಿವಪೂಜೆ, ಪಾದಪೂಜೆ, ಪ್ರಸಾದ ಸ್ವೀಕರಿಸಿದಮೇಲೆ ಗೌಡರು ತಮ್ಮ ಸೊಸೆಯ ಕೈಯಿಂದ ನೂರು ನಾಣ್ಯಗಳನ್ನು ಅರ್ಪಿಸಿದರು. ಆದರೆ ಆ ದಿನವೂ ಸ್ವಾಮಿಗಳು ಆ ಹಣದಕಡೆಗೆ ಗಮನಕೊಡದೆ ಆಸನದಿಂದ ಎದ್ದರು. ಈ ದಿನ ಗೌಡರಿಗೆ ನಿಜವಾಗಿಯೂ ಕಳವಳಕ್ಕೆಡೆಯಾಯಿತು. ಆದರೂ ಧೈರ್ಯತಂದುಕೊಂಡು ತಾವು ಕೈಕೊಂಡಿರುವ ದಾಸೋಹ ಕಾರ್ಯಕ್ಕೆ ಚ್ಯುತಿ ಬರದಂತೆ ಮಿಕ್ಕ ವ್ಯವಸ್ಥೆಯ ಕಡೆಗೆ ಗಮನ ಕೊಡಲು ನಿರ್ಧರಿಸಿ ತಮ್ಮ ಸೊಸೆಗೆ ಮುಂದಿನ ಮೂರು ದಿನಗಳಲ್ಲಿ ನಾಣ್ಯಗಳ ಸಂಖ್ಯೆಯನ್ನು ದಿನಕ್ಕೆ ನೂರರಂತೆ ಹೆಚ್ಚಿಸಿ ಅರ್ಪಿಸುವಂತೆ ನಿರ್ದೇಶನ ನೀಡಿದರು. ಅದರಂತೆ ಆಕೆ ಮೂರನೆಯ ದಿನ ಮುನ್ನೂರು ನಾಣ್ಯಗಳನ್ನು, ನಾಲ್ಕನೆಯ ದಿನ ನಾನೂರು ನಾಣ್ಯಗಳನ್ನು ಅರ್ಪಿಸಿದಳು. ಆದರೂ ಸ್ವಾಮಿಗಳು ಅದರ ಕಡೆಗೆ ಗಮನ ಹರಿಸಲಿಲ್ಲ. ಮಾವನವರ ನಿರ್ದೇಶನದಂತೆ ಕಡೆಯ ದಿನವಾದ ಐದನೆಯ ದಿನ ಐನೂರು ನಾಣ್ಯಗಳನ್ನು ಮಾವನವರ ಸಮ್ಮುಖದಲ್ಲೇ ಸ್ವಾಮಿಗಳಿಗೆ ಭಕ್ತಿಯಿಂದ ಗುರು ದಕ್ಷಿಣೆಯಾಗಿ ನೀಡಿದಳು. ಪ್ರಸಾದ ಸ್ವೀಕರಿಸಿದ ಸ್ವಾಮಿಗಳು ನಾಣ್ಯಗಳಕಡೆ ನಿರ್ಲಕ್ಷದಿಂದಿದ್ದುದನ್ನು ಕಂಡು ಗೌಡರು ತಡೆಯಲಾರದೆ ತುಂಬ ನಮ್ರತೆಯಿಂದ "ನಾನು ಮಾಡಿರುವ ಈ ಐದು ದಿನಗಳ ವ್ಯವಸ್ಥೆಯಲ್ಲಿ ಏನಾದರೂ ತಪ್ಪಿದ್ದರೆ ದಯಮಾಡಿ ಕ್ಷಮಿಸಬೇಕು. ನನ್ನ ಈ ಅಲ್ಪ ಗುರುದಕ್ಷಿಣೆ ಯನ್ನು ತಾವು ಸ್ವೀಕರಿಸದ ಹೊರತು ಮನಸ್ಸಿಗೆ ಸಮಾಧಾನವಿಲ್ಲ. ಯಾತ್ರೆ ಮಾಡಿ ಬಂದ ಶಾಂತಿಯೂ ದೊರಕುವುದಿಲ್ಲ". ಎಂದು ಬಿನ್ನವಿಸಿ ಕೊಂಡರು.

ಆಗ ಗುರುಪಾದ ಸ್ವಾಮಿಗಳು ಮುಗುಳು ನಗೆ ನಕ್ಕು-"ಬಾಬಣ್ಣನವರೇ, ನಿಮ್ಮ ಶಿವ ಪೂಜಾ ನಿಷ್ಠೆ, ಅತಿಥಿ ಸತ್ಕಾರ, ಗುರುಭಕ್ತಿ ಇವುಗಳಲ್ಲಿ ಯಾವ ಕುಂದೂ ಇಲ್ಲ. ದೊಡ್ಡ ಮನೆತನದಲ್ಲಿ ಜನಿಸಿ ದೊಡ್ಡ ಬದುಕನ್ನು ಬದುಕುತ್ತಿರುವ ನಿಮ್ಮ ಈ ನಿಷ್ಠೆ ನಿಮ್ಮ ಪೀಳಿಗೆಗೆ ಶ್ರೀರಕ್ಷೆಯಾಗುವುದರಲ್ಲಿ ಯಾವ ಸಂಶಯವೂ ಇಲ್ಲ. ನಾವು ಈ ಹಣವನ್ನು ಸ್ವೀಕರಿಸದುದಕ್ಕೆ ಬೇರೆ ಕಾರಣವಿದೆ" ಎಂದರು. ಗುರುಗಳ ಒಂದೊಂದು ಮಾತನ್ನು ಭಯಾಸಕ್ತಿಗಳಿಂದ ಕೇಳುತ್ತಿದ್ದ ಗೌಡರು "ಅದೇನು ಹೇಳಬಾರದೆ ಸ್ವಾಮಿ? ನನ್ನ ಕೈಯಲ್ಲಾಗುವುದಾದರೆ ಅದನ್ನು ತಮ್ಮ ಆಶೀರ್ವಾದ ಬಲದಿಂದ ಪರಿಹರಿಸಲು ಪ್ರಯತ್ನಿಸುವೆನು" ಎಂದರು.

ಸ್ವಾಮಿಗಳು "ಈ ಹಣವನ್ನು ನಾನು ತೆಗೆದುಕೊಳ್ಳಬಹುದು. ಆದರೆ ಇದನ್ನು ಸುರಕ್ಷಿತವಾಗಿ ಇಡಲು ನಮ್ಮ ಮಠದಲ್ಲಿ ಸ್ಥಳವೆಲ್ಲಿದೆ. ನಿಮ್ಮ ಅಪೇಕ್ಷೆಯಂತೆ ತೆಗೆದುಕೊಂಡು ಹೋದಲ್ಲಿ ನನ್ನ ಶಿವಪೂಜೆ, ಶಾಸ್ತ್ರಾಧ್ಯಯನವನ್ನು ಬಿಟ್ಟು ಈ ಹಣವನ್ನು ಕಾಯುತ್ತ ಕೂಡ್ರ ಬೇಕಾದಿತಲ್ಲವೆ?" ಎಂದು ಹೇಳಿದ ಅರ್ಥ ಗರ್ಭಿತವಾದ ಮಾತಿನ ಅಂತರ್ಯವನ್ನು ಅರಿಯುವುದು ಗೌಡರಿಗೆ ಕಷ್ಟವಾಗಲಿಲ್ಲ. "ಈ ವಿಷಯವನ್ನು ಹೇಳಲು ಇಷ್ಟೊಂದು ಸಂಕೋಚವೇಕೆ ಸ್ವಾಮಿ? ಅಪ್ಪಣೆ ಕೊಡಿಸಿ, ಆಜ್ಞೆ ಎಂದು ಸ್ವೀಕರಿಸಿ ಶಿರಸಾ ವಹಿಸಿ ನಿರ್ವಹಿಸುವೆನು" ಎಂದರು.

ಗೌಡರ ಮನಸ್ಸಿನ ನಿಚ್ಚಳ ನಿಲುವನ್ನು ಕಂಡು ಸ್ವಾಮಿಗಳಿಗೆ ಮಹದಾನಂದ ವಾಯಿತು. "ಗುರು, ಲಿಂಗ, ಜಂಗಮ ಸೇವೆಯಲ್ಲಿ ನಿಮಗಿರುವ ಶ್ರದ್ಧೆ ನನಗೆ ತಿಳಿದಿದೆ ಗೌಡರೆ. ಈ ದಿಶೆಯಲ್ಲಿ ಎಂತಹ ತ್ಯಾಗವನ್ನಾದರೂ ತಾವು ಮಾಡಬಲ್ಲಿರಿ ಎಂಬ ನಂಬಿಕೆ ಇದ್ದುದರಿಂದಲೇ ನನ್ನ ಅಭೀಪ್ಸೆಯನ್ನು ಸೂಕ್ಷ್ಮವಾಗಿ ತಿಳಿಸಿದೆ. ಅದನ್ನು ಶೀಘ್ರವಾಗಿ ನೀವು ಗ್ರಹಿಸಿದಿರಿ. ಯಾವ ಕೆಲಸವನ್ನಾದರೂ ನಿಷ್ಠೆಯಿಂದ ಕೈಗೊಳ್ಳುವ ನಿಮಗೆ ಈ ಕಾರ್ಯದಲ್ಲಿ ಎಲ್ಲ ಶುಭಯ ಉಂಟಾಗಲಿ. ಗುರುಗಳಿಗೆ ಸಿರಿ-ಸಂಪತ್ತು, ಅಧಿಕಾರ-ಅಂತಸ್ತುಗಳ ಆಸೆ ಇಲ್ಲ. ಶಿವಪೂಜೆ, ಶಾಸ್ತ್ರಾಧ್ಯಯನ, ಸಮಾಜ ಸೇವೆ ಗಳಿಗೆ ಅನುಕೂಲವಾಗುವಂತಹ ಒಂದು ಗುರುಮಠವನ್ನು ನೀವು ನಿರ್ಮಿಸಿರಿ. ಅದರಿಂದ ಆಗುವ ಉಪಕಾರ ದೀರ್ಘಕಾಲ ನಿಲ್ಲುವಂತಹ ಲೋಕಹಿತ ದೃಷ್ಟಿಯಿಂದ ಕೂಡಿರುತ್ತದೆ." ಎಂದು ಸೂಚಿಸಿದರು. ಸೂಚನೆಯನ್ನು ಗೌಡರು ಶಿರಸಾವಹಿಸಿ ಸ್ವೀಕರಿಸಿದರು. ಶ್ರೀ ಗುರುಪಾದಗಳನ್ನು ಕಣ್ಣಿಗೊತ್ತಿಕೊಳ್ಳುತ್ತ "ನನ್ನ ಕೈಯಿಂದ ಇಂತಹ ಸತ್ಕಾರ್ಯ ಮಾಡಲು ತಾವು ನಿಯೋಜಿಸಿದ್ದು ನನ್ನ ಪೂರ್ವ ಜನ್ಮದ ಸುಕೃತ" ಎಂದರು.

ಶ್ರೀ ಗುರುಪಾದ ಸ್ವಾಮಿಗಳ ಆಶೀರ್ವಾದ ಪೂರ್ವಕವಾದ ಅನುಜ್ಞೆಯನ್ನು ಹೊತ್ತು ಬಂದ ಗೌಡರಿಗೆ ಗುರುತರವಾದ ಜವಾಬ್ದಾರಿಯನ್ನು ನಿರ್ವಹಿಸಬೇಕಾದ ಕಾತರ ಬಲವಾಯಿತು. ತಮ್ಮ ಸಂಪತ್ತು ಸತ್ಕಾರ್ಯಕ್ಕಾಗಿ ವಿನಿಯೋಗವಾಗುವ ಸದಾವಕಾಶ ಸಿಕ್ಕಿದಕ್ಕಾಗಿ ಮನಸ್ಸಿಗೆ ಸಮಾಧಾನವಾಯಿತು. ಗುರುಗಳು ಹೊರಟುಹೋದಮೇಲೆ ಮಕ್ಕಳನ್ನು ಕರೆಸಿ ಕಾರ್ಯದ ವಿವರವನ್ನು ವಿವರಿಸಿದರು. ಗೌಡರ ಮಕ್ಕಳಾದರೂ ಅಷ್ಟೆ. ವಂಶದ ಹೆಸರನ್ನು ಚಿರಕಾಲ ನೆಲೆಗೊಳಿಸಬಲ್ಲ ಉದಾರಿಗಳು. ತಂದೆಯ ಆಜ್ಞೆಯಂತೆ ಗುರುಮಠ ನಿರ್ಮಾಣಕ್ಕಾಗಿ ನಡಕಟ್ಟಿ ನಿಂತರು.

ಶ್ರೀ ಸ್ವಾಮಿಗಳ ಇಚ್ಛೆಯಂತೆ ಗುರುಮಠವನ್ನು ನಿರ್ಮಿಸುವ ಕೆಲಸವನ್ನು ಹೊತ್ತ ಗೌಡರಿಗೆ ಮತ್ತೊಂದು ಪ್ರಶ್ನೆ ಮುಂದೆ ಬಂದಿತು. ಇದುವರೆಗೆ ಅವರಿಗೆ ದೊಡ್ಡ ದೊಡ್ಡ ಅಂಕಣಗಳ ವಾಸ ಗೃಹಗಳನ್ನು ಕಟ್ಟಿದ ಅನುಭವವಿತ್ತೇ ಹೊರತು

ಧಾರ್ಮಿಕ, ಆಧ್ಯಾತ್ಮಿಕ ಚಟುವಟಿಕೆಗಳ ಕೇಂದ್ರವಾಗಿ ಸಾರ್ವಕಾಲಿಕವಾಗಿ ನಿಲ್ಲುವಂತಹ ಗುರುಮಠದ ನಿರ್ಮಾಣಕಾರ್ಯ ಅವರಿಗೆ ಹೊಸದು. ಅದಕ್ಕೆ ನಿರ್ದೇಶನವನ್ನು ಸ್ವಾಮಿಗಳಿಂದಲೇ ಪಡೆಯಲು ಮನಸ್ಸು ಮಾಡಿದರು.

ಒಂದು ದಿನ ಸ್ವಾಮಿಗಳು ನಿತ್ಯ ವಿಧಿಗಳನ್ನು ಮುಗಿಸಿ ನಾಲ್ಕಾರು ಭಕ್ತರೊಡನೆ ಮಠದಲ್ಲಿ ತಾತ್ವಿಕ ವಿವೇಚನೆಯಲ್ಲಿ ತೊಡಗಿದ್ದರು. ಗೌಡರು ಆವೇಳೆಗೆ ಅಲ್ಲಿಗೆ ಬಂದರು. ಮಠವನ್ನು ಪ್ರವೇಶಿಸಿದ ಕೂಡಲೇ ಸ್ವಾಮಿಗಳಿಗೆ ಸಾಷ್ಟಾಂಗ ನಮಸ್ಕಾರ ಸಲ್ಲಿಸಿದರು. "ಬನ್ನಿರಿ ಗೌಡರೇ" ಎಂದು ಸ್ವಾಮಿಗಳು ಗೌಡರನ್ನು ಕರೆದು ಹತ್ತಿರದಲ್ಲಿ ಕುಳಿತು ಕೊಳ್ಳಲು ಹೇಳಿದರು. ಬಸವಣ್ಣನವರು ಹೇಳಿದ ಭಕ್ತಿಕಾಯಕದ ನಿಷ್ಠೆಯ ವಚನ ವನ್ನು ಕುರಿತು ವಿವೇಚಿಸುತ್ತಿದ್ದ ಸ್ವಾಮಿಗಳು,

> " ಮಾಡಬೇಕು ಮಾಡಬೇಕು ತನುಮುಟ್ಟಿ
> ಮಾಡಬೇಕು, ಮಾಡಬೇಕು ಮಾಡಬೇಕು
> ಮನಮುಟ್ಟಿ ಮಾಡಬೇಕು. ತನುಮುಟ್ಟಿ
> ಮನಮುಟ್ಟದಿರ್ದೊಡೆ ಮೆಚ್ಚ ನಮ್ಮ
> ಕೂಡಲ ಸಂಗಮದೇವ "

ಎಂದು ವಚನವನ್ನು ಹೇಳಿ ಮಾಡುವ ಕೆಲಸ ಯಾವುದೇ ಇರಲಿ ತನುಮನಗಳನ್ನು ಅರ್ಪಿಸಿ ಮಾಡಿದಾಗ ಮಾತ್ರ ಸಾರ್ಥಕ. ಅಂತಹ ಕಾಯಕದಿಂದ ಶಿವನಿಗೂ ಪ್ರಿಯ ವಾಗುತ್ತದೆ. ಎಂಬ ತತ್ವವನ್ನು ವಿವರಿಸಿದಾಗ ಭಕ್ತ ಜನ ಆನಂದದಿಂದ ಆಲಿಸಿತು.

ನಂತರ ಸ್ವಾಮಿಗಳು ಗೌಡರ ಕಡೆಗೆ ತಿರುಗಿ "ಏನು ಗೌಡರೆ ಎಲ್ಲ ಕ್ಷೇಮವೆ" ಎಂದರು. ಗೌಡರು "ತಮ್ಮ ಅನುಗ್ರಹದಿಂದ ಅದಕ್ಕೆ ಎಂದೂ ಕೊರತೆ ಇಲ್ಲ." ಎಂದು ಹೇಳಿ, "ಗುರುಮಠದ ನಿರ್ಮಾಣದ ಕೆಲಸವನ್ನು ನಾಳೆಯಿಂದ ಆರಂಭ ಮಾಡಬೇಕೆಂದಿದ್ದೇನೆ. ಕಟ್ಟಡ ಹೇಗಿರಬೇಕೆಂಬುದು ನನಗೆ ತಿಳಿಯದ ವಿಷಯ. ಈ ವಿಚಾರವಾಗಿ ತಮ್ಮ ನಿರ್ದೇಶನಕ್ಕಾಗಿ ಬಂದಿರುವೆ. ದಯಮಾಡಿ ನಿರ್ದೇಶನ ನೀಡಿ ಅನುಗ್ರಹಿಸಬೇಕು" ಎಂಬುದಾಗಿ ಅರಿಕೆ ಮಾಡಿಕೊಂಡರು.

ಆಗ ಗುರುಪಾದಸ್ವಾಮಿಗಳು – "ಶಿವ ಪೂಜೆ, ಪಾದ ಪೂಜೆ, ಮತ್ತು ಪ್ರಸಾದ ಸ್ವೀಕರಿಸಲು ಅಚ್ಚುಕಟ್ಟಾದ ಗುರುಮಠದ ಅವಶ್ಯವಿದೆ. ಅದು ಪ್ರಶಾಂತವಾದ, ಪ್ರಶಸ್ತವಾದ ಸ್ಥಳವಾಗಿದ್ದರೆ ಹೊರಗಿನಿಂದ ಬರುವ ಸ್ವಾಮಿಗಳಿಗೂ ಅನುಕೂಲ ವಾಗುವದು" ಎಂದು ಹೇಳಿ ಆಶೀರ್ವದಿಸಿದರು.

ಮುಂದೆ ಕೆಲವೇ ತಿಂಗಳಲ್ಲಿ ಐದು ಅಂಕಣದ ಕಲ್ಲುಗಚ್ಚಿನಿಂದ ನಿರ್ಮಿಸಲಾದ ಸುಂದರ ಹಾಗೂ ಸುಭದ್ರವಾದ ಗುರುಮಠ ರಚಿತವಾಯಿತು. ಈಗಿನ ವಿಶಾಲ ಹಿರೇಮಠದ ಮಧ್ಯಭಾಗದಲ್ಲಿರುವುದೇ ಆಗ ರಚಿಸಲ್ಪಟ್ಟ ಗುರುಮಠವಾಗಿದೆ. ಅದರ

ಬಾಗಿಲು ಕೂಡ ಕಲ್ಲಿನದಾಗಿದ್ದು ಒಳ್ಳೇ ಕಲಾತ್ಮಕವಾಗಿದೆ. ಈ ಗುರುಮಠವು ಹಿರೇಮಠದ ಹೃದಯದಂತಿದೆ.

ಹಲವಾರು ವರುಷ ತಮ್ಮ ಪೂಜಾನುಷ್ಠಾನಗಳನ್ನು ಗುರುಪಾದಸ್ವಾಮಿಗಳು ಈ ಗುರುಮಠದಲ್ಲಿಯೇ ನೆರವೇರಿಸಿರುವುದರಿಂದ ಅದೊಂದು ತೀರ ಪವಿತ್ರ ಸ್ಥಾನ ವೆಂದು ಬಹು ಜನರು ಅದಕ್ಕೆ ಭಕ್ತಿಯಿಂದ ನಡೆದುಕೊಳ್ಳುವದನ್ನು ಇಲ್ಲಿ ಕಾಣಬಹುದಾಗಿದೆ.

## ವಿಶಾಲ ಮಠದ ನಿರ್ಮಾಣ

ಈ ಗುರುಮಠ ರಚನೆಯಾದ ಕೆಲವು ದಿವಸಗಳು ಕಳೆದ ಬಳಿಕ ಬಬಲೇಶ್ವರ ಮುಖ್ಯ ಗೌಡರಾದ ಲಿಂಗನಗೌಡರು ಮತ್ತು ಅವರ ಉಳಿದ ಹಲವಾರು ಬಂಧು ಗಳೆಲ್ಲರೂ ಸೇರಿ ಈಗಿರುವ ವಿಶಾಲವಾದ, ಸುಂದರವಾದ, ಸುಭದ್ರವಾದ ಮಠವನ್ನು ನಿರ್ಮಿಸಲು ಮುಂದಾದರು. ಆಗಿನ ಕಾಲಕ್ಕೆ ಅದು ಒಂದು ಮಹತ್ವದ ಸಾಹಸದ ಕೆಲಸವಾಗಿತ್ತು.

ಈ ಲಿಂಗನಗೌಡರು ಬಬಲೇಶ್ವರ ಗೌಡರ ಮೂಲಪುರುಷರಾದ ಶೂರ ವೀರನ ಗೌಡ, ಲಿಂಗನಗೌಡರ ವಂಶಸ್ಥರಾಗಿರುವರೆಂಬ ಮಾತನ್ನು ಇಲ್ಲಿ ಸ್ಮರಿಸಬಹುದಾಗಿದೆ. ಬಬಲೇಶ್ವರದಲ್ಲಿ ಹಿರೇಮಠಕ್ಕೆ ಗೌರವವಿರುವಂತೆ, ಇಲ್ಲಿಯ ಗೌಡರ ಹಿರೇಮನೆತನಕ್ಕೂ ಗೌರವವಿದೆ. ಅದನ್ನು ಈಗಲೂ ಕೂಡ ಕಾಣಬಹುದು.

ಮಠವೆಂದರೆ ಅದು ಕೇವಲ ನಾಲ್ಕು ಗೋಡೆಗಳ ನಿರ್ಮಾಣವಲ್ಲ. ಅದಕ್ಕೊಂದು ಪರಿಸರಬೇಕು. ಪರಂಪರೆಯನ್ನು ಪ್ರತಿಬಿಂಬಿಸಬಲ್ಲ ಆಕರ್ಷಣೆ ಇರಬೇಕು. ಆ ಕ್ಷೇತ್ರಕ್ಕೆ ಕಾಲಿರಿಸಿದವರಿಗೆ ಕೆಲಘಳಿಗೆ ಕುಳಿತುಕೊಳ್ಳಬೇಕೆಂಬ ಬಯಕೆ ಮೂಡಿಸಬೇಕು. ಬಂದು ಹೋಗುವಾಗ ಮನಸ್ಸಿನಮೇಲೆ ಅವರಿಗರಿವಿಲ್ಲದಂತೆಯೇ ಒಂದು ಅನಿರ್ವ ಚನೀಯವಾದ ಪ್ರಭಾವ ಬೀಳಬೇಕು. ಜೊತೆಗೆ ಪೂಜೆ, ಅಧ್ಯಯನ, ದಾಸೋಹ, ಅತಿಥಿಗಳಿಗೆ ವ್ಯವಸ್ಥೆ, ದನಗಳ ಕೊಟ್ಟಿಗೆ, ನೀರು, ನೆರಳಿನ ಆಸರೆಗಳಿರಬೇಕು. ಎಲ್ಲಕ್ಕಿಂತ ಹೆಚ್ಚಾಗಿ ಕಟ್ಟಡಕ್ಕೆ ನಾಲ್ಕಾರು ಕಾಲ ಸ್ಥಾಯಿಯಾಗಿ ನಿಲ್ಲಬಲ್ಲ ಬಿಗಿ ಇರಬೇಕು. ಅಂತು ಊರ ಜನರ ಸಹಕಾರದಿಂದ ವಿಶಾಲ ಮಠದ ನಿರ್ಮಾಣ ಕಾರ್ಯ ಶ್ರೀ ಗುರುಕೃಪೆಯೊಂದಿಗೆ ಆರಂಭವಾಯಿತು.

ಕಲ್ಲುಗಳೇನೋ ಬಬಲೇಶ್ವರ ಹತ್ತಿರದಲ್ಲಿ ಸಿಗುತ್ತಿದ್ದವು. ಆದರೆ ಬಬಲೇಶ್ವರದಿಂದ ಸುಮಾರು ನೂರಾರು ಮೈಲು ದೂರ ಇರುವ ಮಲೆನಾಡಿನಿಂದ ತೇಗಿನ ಕಟ್ಟಿಗೆ ತರಿಸುವದು ಹೇಗೆಂಬದೊಂದೇ ಸಮಸ್ಯೆಯಾಗಿತ್ತು, ಆಗ ರೈಲು, ಟ್ರಕ್ಕು ಯಾವುವೂ

ಇಲ್ಲದ ಕಾಲ. ಲಿಂಗನಗೌಡ ಮೊದಲಾದ ಭಕ್ತರಿಗೆ ಮತ್ತೆ ಯೋಚನೆ ಆರಂಭವಾಯಿತು. ಆದರೆ ಸಮಸ್ಯೆಯನ್ನು ಬಿಡಿಸಲು 'ಗುರುವಿನ ಕೃಪೆ ಇರುವಾಗ ನೀವೇಕೆ ಚಿಂತಿಸುತ್ತೀರಿ' ಎಂದ ಗುರುಗಳ ಮಾತು ದೊಡ್ಡ ಪರಿಹಾರವಾಯಿತು. ಸೊನ್ನೆ ಕೋಲು, ಮನುಷ್ಯ ಮತ್ತು ಪಶುಗಳ ನೆರವಿನಿಂದ ತೇಗಿನ ತೊಲೆಗಳನ್ನು ತುಂಬಿದ ನದಿಯಲ್ಲಿ ತೇಲಿಬಿಟ್ಟು ತರುವ ವಿಚಾರ ಭಕ್ತರಿಗೆ ಹೊಳೆಯಿತು.

ಮಲೆನಾಡಿನಲ್ಲಿ ತೇಗಿನ ಮರಗಳನ್ನು ಕೊಂಡು ಕಡಿಸಿ ಕೋಣ ಹೂಡಿದ ಕಿರುಗಾಲಿ ಬಂಡಿಯಲ್ಲಿ ಒಂದೊಂದೆ ತುಂಡನ್ನು ಕೃಷ್ಣಾ ನದಿ ತೀರಕ್ಕೆ ಸಾಗಿಸಿದರು. ತೊಲೆ ತುಂಡುಗಳ ತುದಿಯಲ್ಲಿ ತೂತುಮಾಡಿ ಒಂದಕ್ಕೊಂದು ಹೊಂದಿಕೆ ಆಗುವಂತೆ ದೊಡ್ಡ ತೆಪ್ಪವನ್ನು ರಚಿಸಿದರು. ಅದರ ಮೇಲೆ ಹಗುರಾದ ಕಟ್ಟಿಗೆಗಳನ್ನು ಹೇರಿ ನದಿಗೆ ಮಹಾಪೂರ ಬಂದಾಗ ತೇಲಿಬಿಟ್ಟರು. ಆ ತೆಪ್ಪ ಎಲ್ಲಿಯೂ ತಟ್ಟೆ ತಡೆದು ನಿಲ್ಲುವದನ್ನು ತಪ್ಪಿಸುವದಕ್ಕಾಗಿ, ಪ್ರವಾಹದ ಮಾರ್ಗವಾಗಿ ಸಾಗುವಂತೆ ಮಾಡವದಕ್ಕಾಗಿ ಹತ್ತಿಪ್ಪತ್ತು ಅಂಬಿಗರು ಬುತ್ತಿ ಕಟ್ಟಿಕೊಂಡು ತೆಪ್ಪ ಹತ್ತಿ ಎಂಟು ಹತ್ತುದಿನ ಹಗಲು ರಾತ್ರಿ ಪಾಳಿಯಂತೆ ಕೆಲಸಮಾಡಿ ಬಬಲೇಶ್ವರಕ್ಕೆ ಸಮೀಪದ ಜೈನಾಪುರಕ್ಕೆ ತಂದರು.

ಅಲ್ಲಿ ಅಂಬಿಗರು, ಉಳಿದ ಹಲವಾರು ಹಳ್ಳಿಗರು ಸೇರಿ ತೆಪ್ಪವನ್ನು ತಡೆದು, ಒಂದು ದಂಡೆಗೆ ಒಯ್ದು ಗಿಡಕ್ಕೆ ಕಟ್ಟಿಹಾಕಿದರು. ಹೊಳೆ ಇಳಿದನಂತರ ಎತ್ತಿನ ಬಂಡಿಗಳಲ್ಲಿ ಬಬಲೇಶ್ವರಕ್ಕೆ ಅವನ್ನು ಸಾಗಿಸಲಾಯಿತು. ಆಗಿನ ಕಾಲದಲ್ಲಿ ಇದೊಂದು ತೀರಸಾಹಸದ ಕೆಲಸವಾಗಿತ್ತು. ಗುರುಪಾದ ಸ್ವಾಮಿಗಳ ಆಶೀರ್ವಾದ ಬಲವೇ ತಮ್ಮ ಪ್ರಯತ್ನಕ್ಕೆ ಫಲನೀಡಿತೆಂದು ಅದರಲ್ಲಿ ಪಾಲುಗೊಂಡವರ ಅನುಭವಕ್ಕೆ ಬಂದಿತು.

ಲಿಂಗನಗೌಡರು ಕೈ ಹಾಕಿದ ಈ ಪುಣ್ಯ ಕೆಲಸಕ್ಕೆ ಗ್ರಾಮದ ನೂರಾರು ಕೈಗಳು ಕೂಡಿಬಂದವು. ಶ್ರಮ ಎಂಬುದಕ್ಕಿಂತ ಸೇವೆ ಎಂಬ ಭಾವದಿಂದ ದುಡಿದ ಜನ ದೊಡ್ಡಕಾರ್ಯವನ್ನು ಮಾಡಿದ ಕೃತಾರ್ಥ ಭಾವನೆಯನ್ನು ತಾಳಿದರು.

ಆಗ ರಚಿತವಾದ ಮಠದ ಸುಂದರ ಕಟ್ಟಡ ಈಗಲು ಕೂಡ ಅಚ್ಚಳಿಯದೆ ಶಾಂತಿ ತಾಣವಾಗಿ ಸರ್ವರನ್ನು ಸ್ವಾಗತಿಸಲು ಸದಾಸಿದ್ಧವಾಗಿ ನಿಂತಿದೆ.

ಹೀಗೆ ಸ್ವಾಮಿಗಳ ಆಶಯ – ಆಶೀರ್ವಾದ ಹಾಗೂ ಲಿಂಗನಗೌಡರ ಮತ್ತು ಅವರ ಇತರ ಬಂಧುಗಳ ನಿಷ್ಠೆಯ ಕಾಯಕದ ಫಲವಾಗಿ ಬಬಲೇಶ್ವರದ ವಿಶಾಲವಾದ ಮಠ ಸಿದ್ಧವಾಯಿತು. ಮಠದ ಕಟ್ಟಡಕ್ಕೆ ಬಳಸಿರುವ ಕರಿಕಲ್ಲು ಮತ್ತು ತೇಗದ ಮರ ಅದರ ಅಂದವನ್ನು ಹೆಚ್ಚಿಸಿರುವುದರ ಜೊತೆಗೆ ಇಂದಿಗೂ ಅಂದವಾಗಿ, ಅಚಲವಾಗಿ ನಿಲ್ಲಲು. ನೆರವಾಗಿವೆ.

# ೩. ನೂರೊಂದು ಬಿಲ್ವವೃಕ್ಷ

ಯೋಗಿಗಳ ಇಳಿದಲ್ಲಿ ಏಳೂರ ಜಾತುರಿ
ಬಾಳಿಯ ನಿಕಂಬಾ ಮಟ ಮನಿಯ ಗುರುಪಾದಯೋಗಿ
ಸ್ವಾಮಿಳಿದ ಜಾಗೆ ಕೈಲಾಸ

—ಜನಪದಗೀತೆ.

ಮಠದ ನಿರ್ಮಾಣ ಕಾರ್ಯ ಬರದಿಂದ ಸಾಗುತ್ತಿರುವಾಗ ಗುರುಪಾದ ಸ್ವಾಮಿಗಳು ಊರ ಹತ್ತರದ ಹಿರೇ ಮಠದ ಹೊಲದಲ್ಲಿ ನೂರೊಂದು ಬಿಲ್ವವೃಕ್ಷಗಳನ್ನು ನೆಟ್ಟು ಬಿಲ್ವ ವನವನ್ನು ನಿರ್ಮಿಸಬೇಕೆಂದು ಸಂಕಲ್ಪಿಸಿದರು. ಆ ಕಾಲಕ್ಕೆ ಸಣ್ಣ ಸಸಿಗಳಿಗೆ ಸದಾ ಬೇಕಾದ ನೀರಿನಾಶ್ರಯದ ಬಾವಿ ಇರಲಿಲ್ಲ. ತಮ್ಮ ಈ ಸಂಕಲ್ಪದ ಈಡೇರಿಕೆಗಾಗಿ ಸ್ವಾಮಿಗಳು ಯಾರನ್ನೂ ಆಶ್ರಯಿಸಲಿಲ್ಲ. ಸ್ವತಃ ತಾವೇ ಹೊಲದ ಹತ್ತಿರದ ಹಳ್ಳದಿಂದ ಹೆಗಲ ಮೇಲೆ ದೊಡ್ಡ ಕೊಡ ಹೊತ್ತು ಎರಡು ವರ್ಷ ಸಸಿಗಳಿಗೆ ನೀರೆರೆದು ಪೋಷಿಸಿದರು. ಮಠದ ಕೆಲಸ ಯಾವುದೇ ಇರಲಿ ಪೂಜೆ ಅಧ್ಯಯನ, ಬೋಧನೆಗಳ ಜೊತೆಗೆ ಇಂತಹ ಶ್ರಮದ ಕೆಲಸವನ್ನೂ ಒಲವಿನಿಂದ ಮಾಡುತ್ತಿದ್ದ ಗುರುಪಾದ ಸ್ವಾಮಿಗಳ ಬದುಕು ಇತರರಿಗೆ ಆದರ್ಶವಾಗುವ ರೀತಿಯಲ್ಲಿ ವೃದ್ಧಿಯಾಗತೊಡಗಿತು. ಸ್ವಾಮಿಗಳ ನಡೆ–ನುಡಿಗಳು ಸುತ್ತಲಿನ ಮಂದಿಯಲ್ಲಿ ಪೂಜ್ಯಭಾವನೆಯನ್ನು ವೃದ್ಧಿಸಲು ಮಾರ್ಗಮಾಡಿಕೊಟ್ಟವು.

**ಮಠದ ಬಾವಿ ರಚನೆ :**

ಬಿಲ್ವ ವೃಕ್ಷಗಳ ಬೆಳವಣಿಗೆಗೆ ನೀರೆರೆಯುವ ಶ್ರಮದ ಕೆಲಸವನ್ನು ನೋಡಿ ಮರುಗಿದ ಬಬಲೇಶ್ವರದ ಭಕ್ತರೊಬ್ಬರು ಒಮ್ಮೆ ಸ್ವಾಮಿಗಳ ಬಳಿಗೆ ಬಂದು ನಮಸ್ಕರಿಸಿದರು. ಅವರ ಕ್ಷೇಮ ಸಮಾಚಾರ ವಿಚಾರಿಸಿದ ಸ್ವಾಮಿಗಳು ಬಂದವರ ಬಯಕೆಯೇನೆಂದು ಕೇಳಿದರು. ಆ ಮಹಾ ಭಕ್ತರು ಬಿಲ್ವ ವೃಕ್ಷಗಳ ಪೋಷಣೆಗೆ ಬೇಕಾದ ನೀರಿನಾಶ್ರಯಕ್ಕೆ ಹಿರೇಮಠದ ಹೊಲದಲ್ಲಿ ತಾನೊಂದು ಬಾವಿಯನ್ನು ತೋಡಿಸಿಕೊಡಬೇಕೆಂದಿರುವ ಬಯಕೆಯನ್ನು ವ್ಯಕ್ತಪಡಿಸಿದರು. ಸ್ವಾಮಿಗಳು ಯೋಚಿಸಿ "ನಿಮ್ಮ ಇಚ್ಛೆ ಸೂಕ್ತವಾಗಿದೆ. ಆದರೆ ಈ ಸುತ್ತಣ ಪ್ರದೇಶ ತುಂಬ ಬಂಡೆ ಕಲ್ಲುಗಳಿಂದ ಕೂಡಿದ್ದು ನೀರು ಬೀಳುವುದು ಕಷ್ಟ. ಬಹಳ ಶ್ರಮವಾಗುತ್ತದೆ. ಯೋಚಿಸಿ ನೋಡಿರಿ" ಎಂದರು.

ಸ್ವಾಮಿಗಳ ಈ ಮಾತಿಗೆ ಆತ "ತಾವು ನಿತ್ಯವೂ ನೂರೊಂದು ಬಿಲ್ವ ಸಸಿಗಳಿಗೆ ದೂರದ ಹಳ್ಳದಿಂದ ಹೆಗಲ ಮೇಲೆ ಕೊಡ ಹೊತ್ತು ನೀರು ತರುವುದಕ್ಕಿಂತ ಕಷ್ಟ ವೇನಾಗಲಾರದು. ತಮ್ಮ ಅನುಗ್ರಹದಿಂದ ನನಗೆ ತಕ್ಕಷ್ಟು ಅನುಕೂಲವೂ ಇದೆ ತಮ್ಮ ಆಶೀರ್ವಾದದಿಂದ ಈ ಕಷ್ಟದ ಕೆಲಸವು ಸುಗಮವಾಗಿ ಸಾಗುವದೆಂಬ ನಂಬಿಕೆ ನನಗಿದೆ" ಎಂದರು.

ಬಿಲ್ವ ವೃಕ್ಷದ ಸಸಿಗಳ ಸುತ್ತ ಬೆಳೆದಿದ್ದ ಕಳೆ-ಕಸಗಳನ್ನು ತೆಗೆಯುತ್ತಿದ್ದ ಸ್ವಾಮಿ ಗಳು "ಸದುದ್ದೇಶದಿಂದ ಶಿವ ಪ್ರೇರಿತರಾಗಿ ಸತ್ಕಾರ್ಯಕ್ಕೆ ಕೈ ಹಾಕಿರುವ ನಿಮಗೆ ಸದಾಶಿವನ ಶ್ರೀರಕ್ಷೆ ಖಂಡಿತ ಇದೆ. ಕಾರ್ಯವನ್ನು ಪ್ರಾರಂಭಿಸಿರಿ" ಎಂದು ಹೇಳಿ ಆಶೀರ್ವದಿಸಿದರು.

ಸ್ವಾಮಿಗಳ ಅನುಮತಿಯಂತೆ ಬಾವಿಯೊಂದನ್ನು ತೋಡಲು ನಿರ್ಧರಿಸಲಾ ಯಿತು. ಆ ಕಾಲಕ್ಕೆ ಅದೊಂದು ಅತ್ಯಂತ ಪ್ರಯಾಸದ ಕೆಲಸ. ಗಟ್ಟಿಯಾದ ಕಲ್ಲು ಬಂಡೆಗಳನ್ನು ಸಿಡಿಮದ್ದಿನಿಂದ ಒಡೆಯಲು ಕಲ್ಲು ಒಡ್ಡರನ್ನು ಕರೆಸಲಾ ಯಿತು. ಕೆಲಸ ಬಿರುಸಿನಿಂದ ಆರಂಭವಾಯಿತು. ಸುತ್ತಲಿನ ಜನರೂ ಕುತೂಹಲ ದಿಂದ ನೀರನ್ನು ನಿರೀಕ್ಷಿಸತೊಡಗಿದರು.

ಕಠಿಣ ಕೆಲಸ ಮಾಡುವ ಸಮಯದಲ್ಲಿ ಮನುಷ್ಯ ಕೆಲವುಸಲ ತಾಳ್ಮೆ ಕಳೆದು ಕೊಳ್ಳುತ್ತಾನೆ. ಅದರಲ್ಲೂ ವಿವೇಚನಾ ಶಕ್ತಿ ಕಡಿಮೆಯಾದ ವ್ಯಕ್ತಿಗಳಲ್ಲಂತೂ ಇದು ತೀರಾ ಸಹಜ. ಒಂದು ದಿನ ಎಂದಿನಂತೆ ಕಲ್ಲು ಒಡೆಯುವ ಕಾರ್ಯ ಸಾಗಿದೆ. ಕಲ್ಲೊಡ್ಡರು ಎಂಬ ಹೆಸರಿಗೆ ತಕ್ಕಂತೆ ಗಟ್ಟಿಮುಟ್ಟಾದ ಆಳುಗಳು ಕೆಲಸ ಮಾಡು ತ್ತಿದ್ದಾರೆ. ಯಾವುದೋ ಒಂದು ಸಣ್ಣ ಮಾತಿನಿಂದ ಇಬ್ಬರಲ್ಲಿ ಜಗಳ ಆರಂಭ ವಾಯಿತು. ಮಾತು ವೈಷಮ್ಯದ ಮಟ್ಟಕ್ಕೇರಿ ಸ್ವಲ್ಪ ಬಲವಾಗಿದ್ದವನು ಇನ್ನೊ ಬ್ಬನ ತಲೆಗೆ ಕೈಯಲ್ಲಿದ್ದ ಹಾರೆಯಿಂದ ಹೊಡೆದ. ತಲೆಯಿಂದ ರಕ್ತ ಸೋರ ಲಾರಂಭಿಸಿ ಆತ ಮೂರ್ಛೆ ಹೋದ. ಕೆಲಸ ಮಾಡುತ್ತಿರುವವರೆಲ್ಲ ಸೇರಿ ದೊಡ್ಡ ಗುಂಪೇ ಆಯಿತು. ಅವರಿವರಿಗೆ ಕಂಡಂತೆ ಆಡತೊಡಗಿದರು. ಅವರಲ್ಲಿ ಸ್ವಲ್ಪ ಬುದ್ಧಿ ವಂತ ಮೂರ್ಛೆ ಹೋದವನನ್ನು ಕೂಡಲೇ ಸ್ವಾಮಿಗಳ ಬಳಿಗೆ ತೆಗೆದುಕೊಂಡು ಹೋಗಲು ಸೂಚಿಸಿದ. ಅದರಂತೆ ಆತನನ್ನು ಮಠಕ್ಕೆ ಹೊತ್ತುಕೊಂಡು ತರಲಾಯಿತು.

ಆಗಿನ್ನೂ ಬೆಳಗಿನ ಒಂಬತ್ತು ಗಂಟೆ ಸಮಯ, ಸ್ವಾಮಿಗಳು ಆಗತಾನೆ ಶಿವ ಪೂಜೆ ಮುಗಿಸಿಕೊಂಡು ಗುರುಮಠದಿಂದ ಹೊರಬರುತ್ತಿದ್ದರು. ಮಠದ ಚೌಸೊಪ್ಪೆ ಪಡಸಾಲೆಯ ಅಂಗಳ ಮಧ್ಯ ಸತ್ತಂತೆ ಬಿದ್ದಿರುವ ವ್ಯಕ್ತಿ. ತಲೆಯಿಂದ ರಕ್ತಧಾರೆ, ಸುತ್ತ ಕಾತರ ಹಾಗೂ ಭಯದಿಂದ ತುಂಬಿರುವ ಜನ. ಅದನ್ನು ಕಂಡು ಸ್ವಾಮಿ ಗಳು ಸ್ವಲ್ಪವೂ ವಿಚಲಿತರಾಗಲಿಲ್ಲ; ಈ ಘಟನೆ ಈ ಮೊದಲೇ ಅವರಿಗೆ ತಿಳಿ

ದಿತ್ತೋ ಎಂಬಂತೆ, "ಇಂಥ ಘಟನೆಗಳು ನಡೆಯಬಾರದು" ಎಂದು ಒಮ್ಮೆ ಮೇಲಕ್ಕೆ ನೋಡಿ, ಹೊದ್ದಿದ್ದ ಬಟ್ಟೆಯನ್ನು ಸರಿಪಡಿಸಿಕೊಳ್ಳುತ್ತ, ಗಾಯಾಳುವಿನ ಬಳಿ ಬಂದು ಕರುಣಾ ದೃಷ್ಟಿಯಿಂದ ವೀಕ್ಷಿಸಿ, ಗಾಯಾಳುವಿನ ಹತ್ತಿರ ಕುಳಿತರು. ಆವ ರಣದಲ್ಲಿ ಸೂಜಿ ಬಿದ್ದರೂ ಕೇಳುವಷ್ಟು ನಿಶ್ಶಬ್ದ, ಉಸಿರಿನ ಶಬ್ದವನ್ನು ಗುರುತಿಸುವಷ್ಟು ನೀರವತೆ. ಒಮ್ಮೆ ಗಾಯಾಳುವಿನ ಹಣೆಯ ಮೇಲೆ ಕೈಯಿಟ್ಟು ಭಸ್ಮವನ್ನು ತರಿಸಿ ಗಾಯದ ಸ್ಥಳಕ್ಕೆ ಲೇಪಿಸಿದರು, ಮೇಲೆ ಬಿಳಿಯ ಬಟ್ಟೆಯ ಪಟ್ಟಿಯನ್ನು ಕಟ್ಟಿದರು. ನಂತರ "ನೀವೆಲ್ಲ ಸ್ವಲ್ಪ ಕಾಲ ಹೊರಗೆ ಹೋಗಿರಿ" ಎಂದಷ್ಟೇ ಹೇಳಿ ಮಠದ ಮುಂಬಾಗಿಲನ್ನು ಮುಚ್ಚಿದರು.

ಗಾಯಾಳುವಿನ ಹತ್ತಿರದಲ್ಲೇ ಕುಳಿತು ಸ್ವಾಮಿಗಳು ಅವನ ಮೈಗೆಲ್ಲ ಭಸ್ಮವನ್ನು ಲೇಪಿಸಿ ಪಂಚಾಕ್ಷರಿ ಮಂತ್ರವನ್ನು ಜಪಿಸಲು ಆರಂಭ ಮಾಡಿದರು. ಹೊರಗಡೆ ಕುತೂಹಲದಿಂದ ನಿಂತಿದ್ದ ಜನರಿಗೆ ಆ ಮಧುರವಾಣಿ ಕೇಳಿಯೂ ಕೇಳದಂತೆ ಕಿವಿಯ ಮೇಲೆ ತಾಕುತ್ತಿತ್ತು. ಮಂತ್ರ ಮುಗ್ಧರಾದವರಂತೆ ಆಲಿಸುತ್ತ ಅಲ್ಲಲ್ಲೆ ಕುಳಿತರು, ಮೂರು ನಾಲ್ಕು ಗಂಟೆಗಳ ಕಾಲ ಹೀಗೇ ನಡೆದ ಮೇಲೆ ಮೂರ್ಛೆ ಹೊಂದಿದ್ದ ವ್ಯಕ್ತಿ ಕೈಕಾಲು ಆಡಿಸಲು ಪ್ರಾರಂಭಿಸಿದ. ಪವಾಡವೋ ಎಂಬಂತೆ ಮೆಲ್ಲನೆ ಕಣ್ಣು ತೆರೆದ. ಸ್ವಾಮಿಗಳು ಕೂಡಲೆ ಬಟ್ಟಲಲ್ಲಿದ್ದ ತಿಳಿ ಜಲವನ್ನು ಅವನ ತುಟಿಯ ಮೇಲ್ಗಡೆ ಬಿಟ್ಟರು. ಅಮೃತವನ್ನು ಕುಡಿದಷ್ಟು ಸಮಾಧಾನದಿಂದ ಆ ಹನಿಗಳನ್ನು ಅವನು ಕುಡಿದು ಸ್ವಾಮಿಗಳ ಹಸ್ತ ಹಿಡಿದುಕೊಂಡ. ಕೈ ಬಿಡುವು ದಿಲ್ಲವೆಂಬಂತೆ ಹಸ್ತ ನೀಡಿದ ಸ್ವಾಮಿಗಳು ನಿಧಾನವಾಗಿ ಆತನನ್ನು ಆಸರಕ್ಕೆ ಒರಗಿಸಿ ಕುಳ್ಳಿರಿಸಿದರು. ತಾವೇ ಎದ್ದು ಹೋಗಿ ಮುಚ್ಚಿದ ಬಾಗಿಲನ್ನು ತೆಗೆದರು.

ನಂಬಲಾಗದ ರೀತಿಯಲ್ಲಿ ಚೇತರಿಸಿಕೊಂಡು ಕುಳಿತಿದ್ದ ವ್ಯಕ್ತಿಯನ್ನು ಕಂಡ ಜನ ಅವಾಕ್ಕಾದರು. ಅವನ ಆಧಾರವೇ ಪೂರೈಸಿತೆಂಬ ಗತಭರವಸೆಯಿಂದ ತಂದ ಜೀವಶ್ರವ ಪುಲಕಿತವಾಗಿ ಎದ್ದು ಕುಳಿತದ್ದು ಒಂದು ದೊಡ್ಡ ಪವಾಡವಾಗಿ ತೋರಿತು. ಎಲ್ಲರೂ ಒಳ ಬಂದು ನೋಡಿ ಸ್ವಾಮಿಗಳಿಗೆ ನಮಸ್ಕರಿಸಿದರು. ಆಗಿ ಹೋದ ಕಹಿ ಘಟನೆ ಒಬ್ಬರ ಮನಸ್ಸಿನಲ್ಲೂ ಉಳಿದಂತೆ ತೋರಲಿಲ್ಲ. ಸ್ವಾಮಿ ಗಳೂ ಅಷ್ಟೆ. ಗಾಯಾಳುವನ್ನು ಒಳ ತಂದಾಗ ಒಂದು ಮಾತನ್ನೂ ಆಡಿರಲಿಲ್ಲ. ಆದದ್ದಾಯಿತು ಅದನ್ನು ಸರಿಪಡಿಸುವ ಮಾರ್ಗವೇನೆಂದು ಯೋಚಿಸಿದ್ದರು. ಈಗಲೂ ಸಹ ಮುಂದೆ ಇಂತಹ ಅಕಾರ್ಯ ಸಂಭವಿಸಬಾರದೆಂಬುದೇ ಅವರ ಇಚ್ಛೆಯಾಗಿತ್ತು. ಈ ಸಂದರ್ಭದಲ್ಲಿ ತಾವು ಏನೆನ್ನಬೇಕೆಂಬುದೇ ಜನರಿಗೆ ತೋರಲಿಲ್ಲ.

ಮೂಕ ವಿಸ್ಮಯರಾಗಿ ಕುಳಿತಿದ್ದ ಜನರನ್ನು ಕುರಿತು ಸ್ವಾಮಿಗಳು"ಬದುಕಿ ನಲ್ಲಿ ಹತ್ತೆಂಟು ಸಂದರ್ಭಗಳಲ್ಲಿ ಇಂತಹ ಕಹಿ ಘಟನೆಗಳು ಸಂಭವಿಸಬಹುದು. ಅಂತಹ

ಸಮಯದಲ್ಲಿ ಮಾನವ, ಮಾನವನಾಗಿ ನಡೆದರೆ ಅವನ್ನು ದೂರ ಮಾಡಬಹುದು. ದೈವ ಸೃಷ್ಟಿಯಲ್ಲಿ ಮುಕುಟಪ್ರಾಯನಾದ ಮಾನವ ಅದರ ಬೆಲೆ, ಜವಾಬ್ದಾರಿಗಳನ್ನು ಅರಿತು ನಡೆದಾಗ ಲೋಕ ಕಲ್ಯಾಣ ಸಾಧ್ಯವಾಗುತ್ತದೆ. ಇಂದಿನ ದುರ್ಘಟನೆ ದೈವಾನುಗ್ರಹದಿಂದ ಸುಲಲಿತವಾಗಿ ದೂರವಾಯಿತು. ಮುಂದೆ ಹೀಗೆ ಆಗದಂತೆ ನೋಡಿಕೊಳ್ಳಲು ಸೂಚನೆ ನೀಡಿತು" ಎಂದು ಹೇಳಿದರು.

ಆ ನಂತರ ಆ ಗಾಯಾಳನ್ನು ಮನೆಗೆ ಕರೆದೊಯ್ಯಲು ಸ್ವಾಮಿಗಳು ಸೂಚಿಸಿದರು. ಅವನನ್ನು ಆನಂದದಿಂದ ಮನೆಗೆ ಕರೆದುಕೊಂಡು ಹೋಗಲಾಯಿತು. ಕೆಲ ದಿನಗಳಲ್ಲಿ ಆತನು ಪೂರ್ತಿ ಆರೋಗ್ಯವಂತನಾದ. ಆ ವ್ಯಕ್ತಿ ತಾನು ಬದುಕಿರುವವರೆಗೂ ಆ ಸಂದರ್ಭವನ್ನು ಮರೆಯಲ್ಲಿಲ್ಲ. ತಲೆಗೆ ಪೆಟ್ಟು ಕೊಟ್ಟ ವ್ಯಕ್ತಿಯ ಜೀವನದಲ್ಲಂತೂ ದೊಡ್ಡ ಪರಿವರ್ತನೆಯೇ ಆಗಿ ಹೋಯಿತು. ಕಡೆಯ ತನಕ ಇಬ್ಬರೂ ಕಲ್ಲೊಡ್ಡರೂ ಸೋದರರಂತೆ ಬಾಳಿದರು.

ಇಂಥ ಘಟನೆಗಳು ಶ್ರೀ ಗುರುಪಾದ ಸ್ವಾಮಿಗಳನ್ನು ಲೌಕಿಕದ ಮಟ್ಟದಿಂದ ಅಲೌಕಿಕ ಮಟ್ಟಕ್ಕೇರಿಸುವ ಮೆಟ್ಟಲುಗಳಾದವು. ಅವರ ಅತಿಮಾನುಷ ಘಟನೆಗಳು ಜೀವರಿಗೆ ಲೇಸ ಬಯಸುವ ಉದಾರ ದೃಷ್ಟಿಯನ್ನು ಹೊಂದಿದ್ದುವೇ ಹೊರತು, ಎಂದೂ ಅದಕ್ಕೆ ಹೊರತಾಗಿರಲಿಲ್ಲ.

ಬಾವಿಯ ಕೆಲಸದ ವೇಳೆಯಲ್ಲಿ ಸಂಭವಿಸಿದ ಈ ದುರ್ಘಟನೆ ಸ್ವಾಮಿಗಳ ಕೃಪಾಶೀರ್ವಾದದಿಂದ ಸೌಹಾರ್ದಕ್ಕೆ ಎಡೆ ಮಾಡಿಕೊಟ್ಟಿತು. ವಿರಸ ಸರಸಕ್ಕೆ ತಿರುಗಿತು; ಕಹಿ ಸಿಹಿಯಾಯಿತು. ದುಡಿಯುವ ಜನ ಕಹಿಯನ್ನು ಮರೆತು ಮರುತ್ಸಾಹದಿಂದ, ಹೊಸ ಚೇತನದಿಂದ, ಭಕ್ತಿ ಶ್ರದ್ಧೆಗಳಿಂದ ಕೆಲಸ ಮಾಡತೊಡಗಿದರು.

ಬಾವಿಯನ್ನು ಆಳ ಅಗಿದಷ್ಟೂ ಕಲ್ಲು ಬಂಡೆ ಸವೆಯಲಿಲ್ಲ. ಅನೇಕ ಸಲ ಆಳದಿಂದ ಭಾರವಾದ ಕಲ್ಲುಗಳನ್ನು ಮೇಲೆತ್ತಲು ಆಗದೆ, ನಾಳೆಗಾಗಿ ಅವನ್ನು ಕೆಲಸಗಾರರು ಬಿಟ್ಟುಹೋಗುತ್ತಿದ್ದರು. ಹೀಗಿರುವಾಗ ಒಂದು ದಿನ ಬೆಳಿಗ್ಗೆ ಬಂದು ನೋಡಿದಾಗ ಭಾರವಾದ ದೊಡ್ಡ ಕಲ್ಲುಗಳೆಲ್ಲ ಮೇಲೆ ಬಂದು ಬಿದ್ದುದು ಕಂಡು ಬಂದಿತು. ಮರುದಿನ ಬೇಕೆಂದೇ ಕಲ್ಲುಗಳನ್ನು ಬಿಟ್ಟುಬಂದರು. ಮರುದಿನವೂ ಕಲ್ಲುಗಳು ಮೇಲೆ ಬಂದು ಬಿದ್ದಿದ್ದವು. ಇದನ್ನು ನಂಬುವದೇ ಕಷ್ಟವಾಯಿತು. ಎಲ್ಲ ಶಿವಪ್ರೇರಣೆ, ಗುರುಕೃಪೆ ಎಂದು ಕೆಲಸಗಾರರು ಸುಮ್ಮನಾಗಿ ಕೆಲಸಕ್ಕೆ ನೆರವಾಯಿತಲ್ಲ ಎಂದು ಮುಂದುವರಿದರು. ಈ ಸಂದ್ದಿ ಊರೆಲ್ಲ ಹರಡಿತು. ಇಂತಹ ರಹಸ್ಯವನ್ನು ಭೇದಿಸಿ ನೋಡಬೇಕೆಂಬ ಉದ್ದೇಶದಿಂದ ಊರಲ್ಲಿಯ ಒಬ್ಬ ತರುಣ ವ್ಯಕ್ತಿ ರಾತ್ರಿ ಬಾವಿಯ ಹತ್ತರದ ಗಿಡದಲ್ಲಿ ಅಡಗಿ ಕುಳಿತ, ಆ ದಿನ ರಾತ್ರಿ ತನ್ನ ಕಣ್ಣೇ ನಂಬದಂತಹ ಒಂದು ಘಟನೆ ನಡೆಯಿತು. ಆತ ಕುಳಿತ್ತಿದ್ದಂತೆಯೇ ಸ್ವಾಮಿ

ಗಳು ನಡುರಾತ್ರಿಯಲ್ಲಿ ನೇರವಾಗಿ ಬಾವಿಯ ಬಳಿ ಬಂದರು, ಸರಾಗವಾಗಿ ಬಾವಿಯ ಒಳಗೆ ಇಳಿದು ನಿರಾಯಾಸವಾಗಿ ಕಲ್ಲುಗಳನ್ನೆಲ್ಲ ತಂದು ಮೇಲೆ ಹಾಕಿ ಇನ್ನೇನು ಹೊರಡಬೇಕೆನ್ನುವಷ್ಟರಲ್ಲಿ ಮರೆಯಲ್ಲಿ ಕುಳಿತಿದ್ದ ಆ ತರುಣ ಉದ್ದೇಶ ಪೂರ್ವಕವಾಗಿ ಕೆಮ್ಮಿದ. ಸ್ವಾಮಿಗಳು ಆ ಕಡೆಗೆ ತಿರುಗಿ "ಕದ್ದು ನೋಡುವ ಪ್ರವೃತ್ತಿ ಜೀವನಕ್ಕೆ ಶ್ರೇಯಸ್ಸಲ್ಲ" ಎಂದು ನುಡಿದು ಮಠದ ಕಡೆಗೆ ಹೊರಟರು. ಗುರುಗಳ ಮಾತುಗಳು ಆ ತರುಣನ ಅಂತರಂಗದ ಬಾಗಿಲನ್ನು ತೆರೆದವು. ಅವನಿಗೆ "ಘನದಲ್ಲಿ ಅಲ್ಪವನ್ನು ಕೆಣಕಲು ಹೋಗಬಾರದಾಗಿತ್ತು" ಎಂದೆನಿಸಿತು. ಆ ಮಾನಸಿಕ ನೋವಿನಿಂದ ಅವನು ಬಹಳ ಕಾಲ ನರಳಿದನೆಂದು ಪ್ರತೀತಿ.

ಅದೇನೇ ಇರಲಿ, ಬಾವಿ ಕೆಲಸದಲ್ಲಿ ಕಲ್ಲು ತೆಗೆಯುವುದು ಕಷ್ಟವಾದಾಗ ಶ್ರೀ ಗುರುಪಾದ ಸ್ವಾಮಿಗಳಿಗೆ ಆ ಕೆಲಸವನ್ನು ಸುಲಭ ಮಾಡುವ ಪ್ರೇರಣೆ ಒದಗಿ ಬಂದಿತು. ಅಷ್ಟು ಭಾರವಾದ ಬಂಡೆಗಳನ್ನು ಎತ್ತುವುದು ಒರಟು ಕೆಲಸಕ್ಕೆ ಹೆಸರಾದ ಕಲ್ಲೊಡ್ಡರಿಂದಲೇ ಆಗದಿದ್ದಾಗ ಅವರು ಲೀಲಾಜಾಲವಾಗಿ ಮಾಡಿದುದು ಅವರೊಬ್ಬ ದೇವಾಂಶ ಸಂಭೂತರೆಂಬ ನಂಬಿಕೆಗೆ ಇಂಬು ಕೊಟ್ಟಿತು. ಒಟ್ಟಿನಲ್ಲಿ ದೈವ ಪ್ರೇರಣೆ, ಗುರುಕೃಪೆ, ಮಾನವ ಪ್ರಯತ್ನಗಳು ಮುಪ್ಪುರಿಗೊಂಡು ಬಾವಿಯಲ್ಲಿ ನೀರು ಸಮೃದ್ಧವಾಗಿ ಉಕ್ಕಿತು. ನೂರೊಂದು ಬಿಲ್ವದ ಸಸಿಗಳ ಪೋಷಣೆಗೆಂದು ಪ್ರಾರಂಭಿಸಿದ ಈ ಪ್ರಯತ್ನ ಫಲಗೊಂಡಿತು ಬಿಲ್ವವನ ಹಸಿರುಟ್ಟು ನಲಿಯಿತು.

ಬಾವಿಯ ಕೆಲಸ ಪೂರೈಸಿದ ಮೇಲೆ, ಬಿಲ್ವವನ ಸಮೃದ್ಧವಾಗಿ ಬೆಳೆದು ನಿಂತ ಬಳಿಕ ಜನರಲ್ಲಿ ಸ್ವಾಮಿಗಳ ಬಗ್ಗೆ ಮತ್ತಷ್ಟು ಗಾಢವಾದ ಒಲವು, ಗೌರವಗಳು ಮೂಡಿಬಂದವು, ಸಾಮಾನ್ಯವಾಗಿ ಸ್ವಾಮಿಗಳೆಂದರೆ ಪೂಜೆ, ಪ್ರವಚನ, ಅಧ್ಯಯನ ಪ್ರವಾಸ ಮುಂತಾದ ಕಾರ್ಯಗಳಲ್ಲಿ ತೊಡಗಿರುವುದನ್ನು ಕಂಡಿದ್ದ ಭಕ್ತ ಜನಕ್ಕೆ ಹೆಗಲ ಮೇಲೆ ಕೊಡ ಹೊತ್ತು ಸಸಿಗಳಿಗೆ ನೀರೆರೆಯುವುದು, ಬಾವಿಯ ಕೆಲಸದಲ್ಲಿ ನೇರವಾಗಿ ಭಾರವಾದಕಲ್ಲು ಹೊರುವುದು ಮೊದಲಾಗಿ ದಿನವಿಡೀ ದುಡಿಯುತ್ತಿದ್ದ ಗುರುಪಾದ ಸ್ವಾಮೀಗಳು ಒಂದು ವಿಶಿಷ್ಟವಾದ ಶಕ್ತಿಯಾಗಿ ಕಂಡಿತು. ಶರಣರ ಮಹಾತತ್ವವಾದ ಕಾಯಕ ಸ್ವಾಮಿಗಳ ನಿತ್ಯಕರ್ಮದಲ್ಲಿ ಪರಿಪೂರ್ಣವಾಗಿ ಅನುಷ್ಠಾನಕ್ಕೆ ಬಂದು ಇತರರಿಗೆ ಆದರ್ಶವಾಯಿತು. ಇದರಿಂದ ಹಿರೇಮಠದ ಪರಂಪರೆಗೆ ಪ್ರಕರ್ಷತೆಯುಂಟಾಯಿತು, ಈ ಸಂಸ್ಥೆಯನ್ನು ಚೆನ್ನಾಗಿ ಕಟ್ಟಿ ಬೆಳೆಸಬೇಕೆಂಬ ಹಂಬಲ ಜನತೆಯಲ್ಲಿ ಹೆಚ್ಚಾಯಿತು.

### ನೂರೊಂದು ಜಂಗಮ ದಂಪತಿ ಪೂಜೆ :

ಶ್ರೀ ಗುರುಪಾದ ಸ್ವಾಮಿಗಳು ಮಠದ ತೋಟದಲ್ಲಿ ನೂರೊಂದು ಬಿಲ್ವ ವೃಕ್ಷಗಳನ್ನು ಬೆಳೆಸಿದುದಕ್ಕೆ ಬೇರೊಂದು ಹಿನ್ನೆಲೆಯಿತ್ತು. ಹಿಂದಕ್ಕೆ ಜಗದ್ಗುರು

ಶ್ರೀ ರೇಣುಕರು ಅಗಸ್ತ್ಯರಿಗೆ ಉಪದೇಶ ಮಾಡುವಾಗ ಸಿದ್ಧಾಂತ ಶಿಖಾಮಣಿಯಲ್ಲಿ ಮತ್ತು ಶಿವಶರಣರು ತಮ್ಮ ವಚನಗಳಲ್ಲಿ ನೂರೊಂದು ಸ್ಥಲಗಳನ್ನು ವಿವರವಾಗಿ ಹೇಳಿರುವರು. ಕೊನೆಯದಾದ ನೂರೊಂದನೆಯ ಸ್ಥಲವೇ ಶೂನ್ಯ. ಅದೇ ಶಿವಸ್ವರೂಪ. ಈ ಸ್ಥಲಗಳ ಸಂಕೇತವಾಗಿ ಬೆಳೆದ ಬಿಲ್ವ ವೃಕ್ಷಗಳಿಗೆ ಸರಿಯಾಗಿ ನೂರೊಂದು ಜಂಗಮ ದಂಪತಿಗಳ ಪೂಜೆ ಮಾಡಿಸಬೇಕೆಂಬುದು ಸ್ವಾಮಿಗಳ ಮನಸ್ಸಿನಲ್ಲಿ ಹೊಳೆಯಿತು. ಗುರುಗಳ ಈ ಆಶಯಕ್ಕೆ ಅನುಗುಣವಾಗಿ ಮಠದ ಭಕ್ತ ವೃಂದವೆಲ್ಲ, ಸರ್ವಬಗೆಯ ಸಿದ್ಧತೆಗಳನ್ನು ಕೈಗೊಂಡಿತು. ಆ ಭಾಗಕ್ಕೆ ಅಷ್ಟೇ ಏಕೆ? ನಾಡಿಗೆ ಹೊಸದಾದ ಈ ಬಗೆಯ ಬಿಲ್ವವನ ಸೃಷ್ಟಿ. ಜನಮನದ ಆಸಕ್ತಿ ಕೆರಳಿಸಿತು. ಜೊತೆಗೆ ಸ್ವಾಮಿಗಳು ಪ್ರತಿ ಬಿಲ್ವ ವೃಕ್ಷದಡಿಯಲ್ಲಿ ಜಂಗಮ ದಂಪತಿಗಳಿಂದ ನಡೆಸಲುದ್ದೇಶಿಸಿರುವ ಪೂಜಾ ಮಹೋತ್ಸವ ಅವರ ಮನೋ ಭಿತ್ತಿಯಲ್ಲಿ ಹಾದು ಹೋಯಿತು.

ಎಲ್ಲ ಕಡೆಯಿಂದಲೂ ಈ ಮಹಾ ಉತ್ಸವಕ್ಕೆ ಧನ, ಧಾನ್ಯ ಜನ ಬೆಂಬಲ ತಾನಾಗಿಯೇ ಕೂಡಿ ಬಂದಿತು. ಗುರುಪಾದ ಸ್ವಾಮಿಗಳೇ ಶುಭ ದಿನವನ್ನು ಗೊತ್ತು ಮಾಡಿ, ಮುಹೂರ್ತವನ್ನು ನಿರ್ಣಯಿಸಿದರು. ಸುತ್ತಲಿನ ಹತ್ತೆಂಟು ಗ್ರಾಮಗಳಿಂದ ಜನ ಜಾತ್ರೆಯಂತೆ ಮಠಕ್ಕೆ ಬಂದಿಳಿಯಿತು. ಅವರಿಗೆಲ್ಲ ಊಟ-ವಸತಿಯ ವ್ಯವಸ್ಥೆ, ಪ್ರಯಾಸವಿಲ್ಲದೆಯೇ ತನ್ನಷ್ಟಕ್ಕೇ ತಾನೇ ಸಿದ್ಧವಾಯಿತು. ಒಟ್ಟಿನಲ್ಲಿ ಜನ ಸಡಗರದ ಸಂಭ್ರಮದ ಆವರಣದಲ್ಲಿ ಓಲಾಡಿತು.

ಇನ್ನು ನೂರೊಂದು ಜನ ಜಂಗಮ ದಂಪತಿಗಳನ್ನು ಕೂಡಿಹಾಕುವುದು ಒಂದು ಸಾಮಾನ್ಯ ಕೆಲಸವೇನಲ್ಲ. ಪರಿಶುದ್ಧ ಹೃದಯರಾಗಿ, ಸಂಪ್ರದಾಯ ಬದ್ಧ ಮನೆತನದ ಈ ದಂಪತಿಗಳ ಆಯ್ಕೆಭರದಿಂದ ಸಾಗಿತು, ಹಾಗೆ ಆಯ್ಕೆಗೊಂಡ ದಂಪತಿಗಳು ಅದು ತಮ್ಮ ಪೂರ್ವಜನ್ಮದ ಸುಕೃತವೆಂದೇ ಭಾವಿಸಿದರು. ನೂರು ಜನ ದಂಪತಿಗಳ ವರೆಗೆ ಸಂಖ್ಯೆ ನಿರಾಯಾಸವಾಗಿ ಕೂಡಿಬಂದಿತು. ನಾಳೆ ಬೆಳಿಗ್ಗೆ ಶುಭ ಮುಹೂರ್ತದಲ್ಲಿ ಬಿಲ್ವ ವೃಕ್ಷಗಳಡಿಯಲ್ಲಿ ಜಂಗಮ ದಂಪತಿಗಳ ಅರ್ಚನೆ ನಡೆಯಬೇಕಾಗಿದೆ. ನೂರೊಂದನೆಯ ದಂಪತಿಗಳು ಸಿಗುವ ಸೂಚನೆಯೇ ಕಾಣಲಿಲ್ಲ. ಯಾವನಿಟ್ಟಿನಲ್ಲಿ ನೋಡಿದರೂ ಅದು ದುರ್ಲಭವೆಂದೇ ತೋರುವಂತಾಯಿತು, ಉತ್ಸಾಹದಿಂದ ಓಡಾಡಿ ಕೆಲಸಮಾಡುತ್ತಿದ್ದ ಕಾರ್ಯಕರ್ತರಿಗೆ ದಿಕ್ಕುತೋಚದಾಯಿತು. ಎಲ್ಲಿ ಕಾರ್ಯಕ್ಕೆ ವಿಘ್ನವಾದಿತೋ ಎಂಬ ಶಂಕೆ ತಲೆದೋರಿತಾದರೂ ಮರು ಗಳಿಗೆಯಲ್ಲೇ ಸುಶಾಂತಿ ಚಿತ್ತರಾದ ಸ್ವಾಮಿಗಳ ಮುಖದರ್ಶನದಿಂದ ಅದು ಮಾಯವಾಗುತ್ತಿತ್ತು. ಸ್ವಾಮಿಗಳು ಮಾತ್ರ ವಿಚಲಿತರಾಗದೆ ಎಂದಿನಂತೆ ಗಂಭೀರ ಮುಖ ಮುದ್ರೆಯಿಂದ ಸಾವಧಾನವಾಗಿ ಕಾರ್ಯಕ್ರಮ ವ್ಯವಸ್ಥೆಯ ಮೇಲ್ವಿಚಾರಣೆ ಮಾಡುತ್ತಿದ್ದರು. ಸಂಜೆಯಾಯಿತು, ರಾತ್ರಿಯಾಯಿತು, ನಾಳೆ

ಪೂಜಾನಂತರ ದೊಡ್ಡ ದಾಸೋಹಕ್ಕಾಗಿ ದೊಡ್ಡದೊಡ್ಡ ಹಂಡೆಗಳನ್ನಿಟ್ಟು ತೋಟದ ಆವರಣದಲ್ಲಿ ಬೆಳದಿಂಗಳ ಶಾಂತವಾತಾವರಣದಲ್ಲಿ ಅಡಿಗೆಗೆ ಆರಂಭವಾಯಿತು. ಬೆಳಗಾಗುವುದರೊಳಗೆ ಅಡಿಗೆಯೂ ಪೂರೈಸಿತು. ಸೂರ್ಯೋದಯವಾಯಿತು. ಕಾರ್ಯಭಾರ ವಹಿಸಿದ್ದ ಮುಂದಾಳುಗಳು ಕೆಲವರು ಸ್ವಾಮಿಗಳ ಬಳಿಗೆ ಬಂದು "ನೂರೊಂದನೆಯ ಜಂಗಮ ದಂಪತಿಗಳಿನ್ನೂ ದೊರೆತಿಲ್ಲ – ಮುಹೂರ್ತಕ್ಕೆ ಇನ್ನೆರಡು ಘಂಟೆಗಳು ಮಾತ್ರ ಉಳಿದಿವೆ. ಈ ಬಗ್ಗೆ ತಾವು ಬೆಳಕು ಬೀರಬೇಕು" ಎಂದು ಬಿನ್ನವಿಸಿಕೊಂಡರು. ಆಗ ಸ್ವಾಮಿಗಳು "ಕಾತರವೇಕೆ? ಇನ್ನೂ ಎರಡು ಘಂಟೆಗಳಿವೆ. ಪೂಜಾ ವ್ಯವಸ್ಥೆ ನಡೆಯಲಿ. ಹಾಗೇ ಹಲಗಣೆ ಹಾದಿ ಹಿಡಿದು ಹೋಗಿ ಬನ್ನಿರಿ. ಯಾರಾದರೂ ಜಂಗಮ ದಂಪತಿಗಳು ಸಿಗಬಹುದು" ಎಂದು ಸೂಚಿಸಿದರು.

ಕೂಡಲೇ ಬಲ್ಲವನೊಬ್ಬನನ್ನು ಹಲಗಣೆ ದಿಕ್ಕಿಗೆ ಕಳಿಸಲಾಯಿತು. ಆತ ಸ್ವಲ್ಪ ಸಮಯ ಸಾಗುವುದರೊಳಗೆ ದೂರದಲ್ಲಿ ಪುಣ್ಯವೇ ಹಣ್ಣಾದಂತಹ ವೃದ್ಧ ಜಂಗಮ ದಂಪತಿಗಳು ಕೋಲೂರಿ ಕೈಕೈ ಹಿಡಿದುಕೊಂಡು ಬಬಲೇಶ್ವರದ ಕಡೆಗೇ ಬರುತ್ತಿದ್ದುದು ಗೋಚರಿಸಿ ಸ್ವಾಮಿಗಳ ಮಾತು ಸುಳ್ಳಾಗುವುದುಂಟೆ? ವೃದ್ಧ ಜಂಗಮ ದಂಪತಿಗಳನ್ನು ಕಂಡ ವ್ಯಕ್ತಿಗೆ ಮಹದಾನಂದವಾಯಿತು. ಭಾಗ್ಯ ನಿಧಿಯನ್ನು ಕಂಡ ಬಡವನಂತೆ ಅವರ ಹತ್ತಿರ ಹೋಗಿ ತಾವು ಯಾರೆಂದು ಪ್ರಶ್ನಿಸಿದ. ತಾವು ಕಲ್ಯಾಣ ಪಟ್ಟಣದಿಂದ ಬಂದವರೆಂದೂ ತಮ್ಮ ಹೆಸರು ಶಿವಯ್ಯ, ಪಾರವ್ವ ಎಂದೂ ಹೇಳಿದಾಗ ಆತನಿಗೆ ಸಾಕ್ಷಾತ್ ಶಿವ–ಪಾರ್ವತಿಯನ್ನೇ ಕಂಡಷ್ಟು ಆನಂದವಾಯಿತು, ಭಕ್ತಿಯಿಂದ ನಮಸ್ಕರಿಸಿ ಬಬಲೇಶ್ವರ ಮಠದ ತೋಟದ ಬಿಲ್ವವನಕ್ಕೆ ಅವರನ್ನು ಕರೆತಂದನು.

ಕೈಲಾಸದ ವೈಭವವನ್ನು ಹೋಲುವ ನೂರೊಂದು ದಂಪತಿಗಳ ಪೂಜಾ ವ್ಯವಸ್ಥೆ. ಮಧ್ಯದಲ್ಲಿ ದೊಡ್ಡ ಬಿಲ್ವದ ಅಡಿಯಲ್ಲಿ ತೆರವಾಗಿದ್ದ ಆಸನಕ್ಕೆ ವೃದ್ಧ ಆ ಜಂಗಮ ದಂಪತಿಗಳನ್ನು ಕರೆ ತಂದು ಕೂಡಿಸಿದಾಗ ಇಡೀ ವಾತಾವರಣಕ್ಕೆ ಕಳೆಯೇರಿತು. ಹೆಂಗಸರು–ಮಕ್ಕಳು. ದೊಡ್ಡವರು–ಚಿಕ್ಕವರು, ಆಳು–ಧಣಿ, ಪಂಡಿತ–ಪಾಮರ ಎಲ್ಲ ತುಂಬಿದ್ದ ಪೂಜಾಸ್ಥಳದ ವೈಭವ ಭಕ್ತಜನದ ಮನಸ್ಸಿಗೆ ವರ್ಣಿಸಲಸದಳವಾದ ಆನಂದವನ್ನುಂಟುಮಾಡಿತು.

ಮುಹೂರ್ತ ಸಂಭವಿಸುತ್ತಿದ್ದಂತೇ ಶ್ರೀ ಗುರುಪಾದ ಸ್ವಾಮಿಗಳು ತಾವು ಕುಳಿತ ಆಸನದಿಂದೆದ್ದು ದೊಡ್ಡದೊಂದು ಕರ್ಪೂರದ ಕಟ್ಟಿಯನ್ನು ಥಳಥಳ ಹೊಳೆ ಯುವ ಹಿತ್ತಾಳೆಯ ಹರಿವಾಣದಲ್ಲಿ ಹೊತ್ತಿಸಿ ಎರಡೂ ಹಸ್ತಗಳಿಂದ ಎತ್ತಿ ಬೆಳಗಿದರು. ನಗಾರಿ, ಕರಡೆ. ಮೊದಲಾದವುಗಳ ಹಿನ್ನೆಲೆಯಲ್ಲಿ ನೂರೊಂದು ಘಂಟೆ ಗಳ ನಿನಾದ ಕೈಲಾಸವನ್ನು ಮುಟ್ಟಿತು. ಪ್ರತಿ ಬಿಲ್ವ ವೃಕ್ಷದ ಪಕ್ಕದಲ್ಲಿದ್ದ ಕೆಂಡದ ಮೇಲೆ ಹದವರಿತು ಉದುರಿಸಿದ ಗುಗ್ಗಳ, ದೂಪ, ಗಂಧದ ಪುಡಿಯ

ಹೊಗೆ ಮುಗಿಲು ಮುಟ್ಟುವಂತೆ ಮೇಲೇರಿತು. ಮರುಕ್ಷಣದಲ್ಲೇ ನೂರೊಂದು ಜಂಗಮ ದಂಪತಿಗಳು ಮೇಲೆದ್ದು ಬಿಲ್ವವೃಕ್ಷಕ್ಕೆ ನಮಸ್ಕರಿಸಿ ಸಂತೃಪ್ತಿದ್ದ ದೃಶ್ಯ ಲೌಕಿಕವಾದ ಮಾನವನನ್ನು ಆ ಘಳಿಗೆಯ ಮಟ್ಟಿಗೆ ಅಲೌಕಿಕವಾದ ಒಂದು ಆನಂದಕ್ಕೊಯ್ದು ಜನ್ಮಸಾರ್ಥಕವಾಯಿತೆಂಬ ಸಮಾಧಾನದಿಂದ ಎವೆಮುಚ್ಚಿಸಿತು. ಸುಮಾರು ಒಂದು ಘಂಟೆಯ ಕಾಲ ವಿಧಿಪೂರ್ವಕವಾಗಿ ನಡೆದ ಈ ಬಿಲ್ವವೃಕ್ಷ ದೀಕ್ಷಾ ಸಂಸ್ಕಾರ ಬಬಲೇಶ್ವರಮಠದ ಸಂಪ್ರದಾಯದಲ್ಲೊಂದು ಮೈಲಗಲ್ಲಾಗಿದೆ. ಎಂತಹ ಆತಂಕ ಸ್ಥಿತಿಯಲ್ಲಿ ಸ್ವಲ್ಪವೂ ಅವ್ಯವಸ್ಥೆಯಾಗದಂತೆ. ಕಾರ್ಯವಿಘ್ನವಾಗ ದಂತೆ ಕೆಲಸಕಾರ್ಯಗಳು ನಡೆಯಲು ಶ್ರೀ ಗುರುಗಳ ಕೃಪಾಶೀರ್ವಾದವಿದೆ ಎಂಬುದನ್ನು ಸಿದ್ಧಪಡಿಸಿತು.

ಪೂಜಾನಂತರ ಜಂಗಮ ದಂಪತಿಗಳಿಗೆ ಕಾಣಿಕೆ ಕೊಡುವ ವ್ಯವಸ್ಥೆಯಿತ್ತು, ಅದರಂತೆ ಅವರಿಗೆ ಉಚಿತ ಮರ್ಯಾದೆಯಿಂದ ದಕ್ಷಿಣೆಯನ್ನು ಅರ್ಪಿಸಲು ಆರಂಭ ಮಾಡಿದರು. ಆಶ್ಚರ್ಯವೆಂದರೆ, ಕಡೆ ಘಳಿಗೆಯಲ್ಲಿ ದೊರೆತು, ಕಾರ್ಯಕ್ರಮ ನಿರ್ವಿಘ್ನವಾಗಿ ನಡೆಯಲು ನೆರವಾದ ವೃದ್ಧ ಜಂಗಮ ದಂಪತಿಗಳು ಮಾತ್ರ ಕಣ್ಮರೆ ಯಾಗಿದ್ದರು. ಇಡೀ ಜನಕ್ಕೆ ದಿಕ್ಕು ತೋಚದಾಯಿತು. ಆಶ್ಚರ್ಯ, ವಿಸ್ಮಯ, ಭಯ, ಕುತೂಹಲಗಳು ಒಮ್ಮೆಗೆ ಅವರನ್ನು ಆವರಿಸಿದವು. ಸ್ವಾಮಿಗಳಿಗೆ ಈ ವಿಷಯ ತಿಳಿಸಿದರು, ಆಗಲೂ ಸ್ವಾಮಿಗಳು ಸ್ವಲ್ಪವೂ ವಿಚಲಿತರಾಗದೆ ಗಂಭೀರವಾದ ಧ್ವನಿ ಯಿಂದ ಶಾಂತರೀತಿಯಲ್ಲಿ "ಪೂಜಾಕಾಲಕ್ಕೆ ಒದಗಿಬಂದ ಆ ವೃದ್ಧ ಜಂಗಮದಂಪತಿ ಗಳು ನಮ್ಮಿಂದ ಕಾಣಿಕೆಗಾಗಿ ಬಂದವರಲ್ಲ; ನಮ್ಮ ಕಾರ್ಯಕ್ಕೆ ವಿಘ್ನವಾಗಬಾರ ದೆಂದು ಬಂದ ಕಾರಣಿಕರು. ಶಿವ-ಶಕ್ತಿಯರು. ಬಂದ ಕಾರ್ಯ ಪೂರೈಸಿದ ಮೇಲೆ ಅವರಿಲ್ಲಿರಲು ಸಾಧ್ಯವೇ? ಅದಕ್ಕೇಕೆ ಕಳವಳ! ಮುಂದಿನ ಕೆಲಸ ಮುಗಿಸಿ ದಾಸೋಹ ಕಾರ್ಯ ನಡೆಯಲಿ, ಜನ ಹಸಿದಿದ್ದಾರೆ, ನೂರೊಂದನೆಯ ಸ್ಥಲ ಶೂನ್ಯ ಸ್ಥಲ. ಬಯಲು, ಬಯಲನ್ನಪ್ಪಿದುದರಿಂದ ನಿಮ್ಮ ಪೂಜೆ ಫಲಪ್ರದವಾದಂತಾ ಯಿತು. ನೀವೆಲ್ಲರೂ ಪುಣ್ಯವಂತರು. ಇಂದು ನಡೆದ ಸಂಸ್ಕಾರದಿಂದಾಗಿ ಈ ನೂರೊಂದು ಬಿಲ್ವವೃಕ್ಷಗಳು ಪೂಜೆಗೆ ಅರ್ಹವಾದ ವೃಕ್ಷಗಳಾದವು" ಎಂದಾಗ ಭಕ್ತರಿಗೆ ಆದ ಆನಂದ ಅಷ್ಟಿಷ್ಟಲ್ಲ.

ಬೆಳಗಿನಿಂದ ಒಂದೇ ಸವನೆ ನಡೆಯುತ್ತಿದ್ದ ಅನ್ನದಾಸೋಹ ಸಂಜೆ ಆದರೂ ಅಕ್ಷಯವಾಗುತ್ತಲೇ ಇತ್ತು. ಗುರುಕರುಣೆಯಿಂದ ನಡೆಯುವ ದಾಸೋಹದ ಮಹಿ ಮೆಯೇ ಅಂತಹುದು.

ಆ ಸಂಜೆ ನಡೆದ ಸ್ವಾಮಿಗಳ ಉತ್ಸವಕಾರ್ಯವೂ ಅಷ್ಟೇ ವೈಭವವಾಗಿ ರಾತ್ರಿಯವರೆಗೆ ಸಾಗಿತು. ಭಕ್ತರು ಸ್ವಾಮಿಗಳನ್ನು ಮಠಕ್ಕೆ ಭಕ್ತಿಭಾವದಿಂದ ಬರ ಮಾಡಿಕೊಂಡರು.

# ೪. ಮಂದಿಗಾಗಿ ಮಠ

ದೊಡ್ಡವ ಅಂದಾರ ಅವರೆಂಥ ದೊಡ್ಡವರ
ದುಡ್ಡಿನ ನೀ ಮ್ಯಾಲ ರಥ ಹೂಡಿ ಗುರುಪಾದೇಶ
ದೊಡ್ಡರೆನಬೇಕ ಅವರಿಗೆ

—ಜನಪದಗೀತೆ.

**ಮಳೆ ಬರಿಸಿದ್ದು :**

ಶ್ರೀ ಗುರುಪಾದ ಸ್ವಾಮಿಗಳು ಮಠದ ಅಭಿವೃದ್ಧಿಯ ಬಗ್ಗೆ ತಾಳಿದ್ದ ಸಂಕಲ್ಪದ ಫಲವಾಗಿ ಅದೊಂದು ಆದರ್ಶ ರೀತಿಯಲ್ಲಿ ಬೆಳೆಯತೊಡಗಿತು. ಅದರ ಪುರೋಭಿವೃದ್ಧಿಗಾಗಿ ಅವರು ಪಡುತ್ತಿದ್ದ ಶ್ರಮ ಉಳಿದವರೂ ಆ ಬಗ್ಗೆ ಗಮನಕೊಡಲು ಪ್ರೇರಣೆ ನೀಡಿತು. ಮಠದ ಜಮೀನಿನಲ್ಲಿ ಬರುತ್ತಿದ್ದ ಬೆಳೆಯಂತೂ ಆ ಭಾಗಕ್ಕೆ ಹೆಸರಾಗಿತ್ತು. "ಸ್ವಾಮಿಗಳು ಎಡಗೈಲೆ ಬಿತ್ತಿದರೂ ಸಾಕು. ಆ ಬೆಳೆಯ ರೀತಿಯೇ ಬೇರೆ, ತೂಗಿ ತೊನೆಯುತ್ತದೆ." ಎಂಬುದು ರೈತರ ಸಾಮಾನ್ಯವಾದ ಮಾತಾಗಿತ್ತು. ಅದೇನು ಕೃಪೆಯೋ! ಮಠದ ತೋಟದ ಗಿಡ ಗುಂಪುಗಳು, ಹೊಲದ ಆಹಾರ ಧಾನ್ಯದ ಬೆಳೆಗಳು ನಿರೀಕ್ಷೆಗೆ ಮೀರಿ ಬೆಳೆದು ಫಲ ನೀಡುತ್ತಿದ್ದವು. ಬಂದ ಉತ್ಪನ್ನವನ್ನು ಮಠಕ್ಕೆ ಬಂದ ಅತಿಥಿಗಳ ದಾಸೋಹಕ್ಕಾಗಿ ಬಳಸಲಾಗುತ್ತಿತ್ತು.

ಒಮ್ಮೆ ತೋಟದಲ್ಲಿ ಬೆಳೆ ಸಮೃದ್ಧವಾಗಿ ಬಂದಿತ್ತು. ಹೊಡೆಯೊಡೆದು ಕಾಳು ತುಂಬುವ ಕಾಲ, ಅದೇನು ದೈವಲೀಲೆಯೋ ಒಳ್ಳೆಯ ಮಳೆಗಾಲವಾದರೂ ಮಳೆಯ ಸುಳಿವೇ ಕಾಣಲಿಲ್ಲ. ಬರಬಹುದೆಂದು ದಾರಿ ಕಾದು ನಿರಾಸೆಯಾಯಿತೇ ಹೊರತು ಪ್ರಯೋಜನವಾಗಲಿಲ್ಲ. ಆದರೂ ಮಠದ ಬಾವಿ ನೀರಿನಿಂದ ಏತ ನೀರಾವರಿ ಮಾಡಿ ಬೆಳೆಯನ್ನು ಕಾಪಾಡಲಾಗಿತ್ತು. ಅದು ಬಹಳ ಪ್ರಯಾಸದ ಕೆಲಸ. ಬಾವಿ ನೀರಿನಿಂದ ಜೊತೆಗೆ ಒಂದೆರಡು ಸಲ ಒಳ್ಳೇ ಮಳೆಯು ಬಂದಿದ್ದರೆ ಕೆಲಸ ಸುಲಭವಾಗುತ್ತಿತ್ತು. ಇಂಥ ಸಂದರ್ಭದಲ್ಲಿ ಒಂದು ದಿನ ಬೆಳಿಗ್ಗೆ ಮಠದ ತೋಟದ ಬಾವಿಯಿಂದ ಮೊಟ್ಟೆ ಹೊಡೆಯುತ್ತಿದ್ದ ಸಿದ್ಧ, ಬಸಪ್ಪ ಬಾವಿಯ ಹತ್ತಿರ ಕುಳಿತು ಲೋಕಾಭಿರಾಮವಾಗಿ ಮಾತನಾಡುತ್ತಿದ್ದರು. ಆ ಮಾತು, ಈ ಮಾತು ಆಡುತ್ತ ಮಳೆಯ ಸುದ್ದಿಯು ಅವರ ಸಂಭಾಷಣೆಯಲ್ಲಿ ಸೇರಿತು. "ಏನು ವಿಚಿತ್ರವೋ ಇಷ್ಟು ಹೊತ್ತಿಗೆ ನಾಲ್ಕೈದು ಒಳ್ಳೇ ಮಳೆಗಳಾಗಬೇಕಿತ್ತು. ಬಿತ್ತಿಗೆ ಮಾಡಿದ ಒಂದು

ತಿಂಗಳು ಹಂಗೂ ಹಿಂಗೂ ಅಷ್ಟಿಷ್ಟು ಮಳೆಯಾಯಿತು. ಆ ಮೇಲೆ ಅದರ ಸಂಳಿವೇ ಇಲ್ಲ. ಮಠದ ತೋಟಕ್ಕಂತೂ ಬಾವಿಯ ಆಶ್ರಯವಿದೆ. ಉಳಿದ ಜಮೀನುಗಳ ಪಾಡೇನು ? ಇನ್ನೊಂದು ತಿಂಗಳಿಗೆ ಬೆಳೆ ಕೊಯ್ಬೇಕು. ಹೀಗೇ ಆದರೆ ಬರೀ ಮಾಡಿರೋ ಸಾಲಕ್ಕೆ ಬಡ್ಡೀ ಕೊಡೋಕಾಗದು. ದೇವರಿಗೆ ಇನ್ನೂ ಕರುಣ ಬರಲಿಲ್ಲ" ಎಂದ ಬಸಪ್ಪನ ಮಾತಿಗೆ ಬತ್ತೀ ಸೇದುತ್ತ ಕುಳಿತಿದ್ದ ಸಿದ್ದ, "ಎಲ್ಲಿ ದೇವ್ರು ಎಲ್ಲಿ ದಿಂಡ್ರು ಬಿಡು ಬಸಪ್ಪ ಅಂಥ ಕರುಣಾ ಇದ್ದೋನಾಗಿದ್ರೆ ಒಳ್ಳೇ ಕಾಲ್ದಾಗೆ ಕೈ ಕೊಟ್ಟು ಬೆಳೆ ಒಣಗಲಿಕ್ಕೆ ಬಿಡ್ತಿದ್ದ ?" ಎಂದು ಉದಾಸೀನದಿಂದ ನುಡಿದ. ಆ ಮಾತು ಬಸಪ್ಪನಿಗೆ ಹಿಡಿಸಿದಂತೆ ಕಾಣಲಿಲ್ಲ. "ಹಾಗನ್ನಬೇಡ ಸಿದ್ಧ, ಅವನ ಇಚ್ಛೆ ಏನಿದೆಯೋ ಬಲ್ಲವ ರಾರು ? ದೇವ್ರು ದಿಂಡ್ರು ಬಗ್ಗೆ ನಾವು ತಾತ್ಸಾರ ಮಾಡಬಾರ್ದು. ಒಳ್ಳೇದು ಕೆಟ್ಟದ್ದು ಎಲ್ಲಾ ಅವನಿಗೆ ಬಿಡಬೇಕು. ಎಷ್ಟಾದರೂ ನಾವು ಮನುಷ್ಯರು." ಎಂದ. ಇವರ ಮಾತಿನ ಆಸಕ್ತಿಯಲ್ಲಿ ಸ್ವಾಮಿಗಳು ಬೆಳೆದ ಜೋಳದ ನಡುವೆ ಬರುತ್ತಿದ್ದುದರ ಅರಿವಾಗಲಿಲ್ಲ. ಸಿದ್ಧ ಮುಂದುವರಿದು "ನೀನ್ ಸುಮ್ಕಿರು ಬಸಪ್ಪ. ಎಂಟ್ ದಿನ ದಿಂದಾ ಮೊಟ್ಟೆ ಹೊಡ್ದು ಹೊಡ್ದು ಮೈ ಜಿಡ್ದು ಹಿಡಿದದೆ. ಹಂಗಾದ್ರು. ಇವ ತ್ನಾಳೆ ಒಳ್ಳೆ ಮಳೆ ಬರೋಹಂಗ ಮಾಡಪಾ ನೋಡಾನಾ" ಎಂದು ಮಾತು ಮುಗಿ ಸುವ ವೇಳೆಗೆ ಗುರುಗಳು ಎದುರಿಗೆ ಬಂದು ನಿಂತರು. ಇಬ್ಬರೂ ಗಾಬರಿಯಿಂದ ಎದ್ದು ಕೆಲಸದ ಕಡೆಗೆ ಹೊರಡಲು ಅನುವಾದರು. ಸ್ವಾಮಿಗಳು "ಬಸಪ್ಪ ನೀನು ಭೀಮನನ್ನು ಕರೆದುಕೊಂಡು ಮೊಟ್ಟೆ ಹೊಡಿ ; ಸಿದ್ಧನು ಮಠಕ್ಕೆ ಬರಲಿ." ಎಂದು ಹೇಳಿ ಹೊರಟು ಹೋದರು.

ಸಿದ್ಧ ಮರುಮಾತನಾಡಲಿಲ್ಲ. ಬಸಪ್ಪನ ಮುಖವನ್ನೊಮ್ಮೆ ನೋಡಿದರೂ ಮಾತೇ ಹೊರಡಲಿಲ್ಲ. ಆಗಲೇ ನಾಲ್ಕು ಮಾರು ನಡೆದಿದ್ದ ಸ್ವಾಮಿಗಳನ್ನು ಹಿಂಬಾಲಿಸಿದ,

ಸ್ವಾಮಿಗಳು ಮಠವನ್ನು ಮುಟ್ಟಿದ ಕೆಲವೇ ಘಳಿಗೆಯಲ್ಲಿ ಸಿದ್ಧನು ಬಂದ. "ನೀನು ಮಠದ ಪಡಸಾಲೆಯಲ್ಲಿ ಕುಳಿತಿರು, ಎಲ್ಲಿಯೂ ಕದಲಬೇಡ." ಎಂದು ಹೇಳಿ ಸ್ವಾಮಿಗಳು ಗುರುಮಠದ ಒಳಗೆ ಹೋಗಿ ಬಾಗಿಲು ಹಾಕಿಕೊಂಡರು. ಸಿದ್ಧ ಗುರುಗಳ ಅಪ್ಪಣೆಯಂತೆ ಪಡಸಾಲೆಯಲ್ಲಿ ಒಂದು ಕಂಬದ ಹತ್ತಿರ ಕುಳಿತ.

ಮಠಕ್ಕೆ ಬಂದು ಹೋಗುವ ಜನ ಎಂದಿನಂತೆ ಬಂದರು. "ಸ್ವಾಮಿಗಳು ಒಳ ಗಿದ್ದಾರೆ. ಹೊರಗೆ ಬರುವುದು ವೇಳೆಯಾಗುತ್ತದೆ". ಎಂಬ ಸಿದ್ಧನ ಉತ್ತರ ಕೇಳಿ ನಾಳೆಗೆ ಬರುವುದಾಗಿ ಹೇಳಿ ಹೋಗುತ್ತಿದ್ದರು. ಮಧ್ಯಾಹ್ನವಾಯಿತು. ಬಾಗಿಲ ತೆರೆಯುವ ಸೂಚನೆ ಕಾಣಲಿಲ್ಲ. ನಿತ್ಯದ ಪ್ರಸಾದ ಸಿದ್ಧಪಡಿಸಿ ಬಡಿಸುತ್ತಿದ್ದ ವೃದ್ಧ ಸೇವಕಿ ಕಲ್ಯಾಣಮ್ಮ ಬಂದು ವಿಚಾರಿಸಿದಾಗ ಸಿದ್ಧನಿಂದ ಬಂದ ಉತ್ತರ ಆಕೆಗೆ

ಸಮಾಧಾನ ತಂದಿತು. ಆ ದಿನ ಬೆಳಗ್ಗೆ ನಡೆದ ಸಂಗತಿಯನ್ನು ಆ ಮುಂದಂಕಿಗೆ ಆತ ವಿವರಿಸಿದ. ಸ್ವಾಮಿಗಳು ಇತ್ತೀಚೆಗೆ ಇಂತಹ ಸಂದರ್ಭಗಳಲ್ಲಿ ಗುರುಮಠದಲ್ಲಿ ಕುಳಿತು ಧ್ಯಾನ ಮಗ್ನರಾಗುತ್ತಿದ್ದುದು ಆಕೆಗೆ ಪರಿಚಯವಿತ್ತು. ಅವರು ಯಾವುದೋ ಮಹ ದುದ್ದೇಶಕ್ಕಾಗಿಯೇ ಕುಳಿತಿರುವರೆಂದು ತಿಳಿದ ಆಕೆ ಅವರ ಧ್ಯಾನಕ್ಕೆ ಅಡ್ಡಿ ತರದೆ ಹೊರಟು ಹೋದಳು.

ಗುರುಗಳು ಧ್ಯಾನಾಸಕ್ತರಾಗಿ ಕುಳಿತಿರುವ ವಿಷಯ ಮಠಕ್ಕೆ ಬಂದು ಹೋದ ಜನರ ಬಾಯಿಂದ ಊರಲ್ಲೆಲ್ಲ ಹರಡುವುದು ತಡವಾಗಲಿಲ್ಲ. ಒಬ್ಬರಿಂದೊಬ್ಬರಿಗೆ ಹಬ್ಬಿದ ಈ ಸುದ್ದಿಯ ಪರಿಣಾಮವಾಗಿ ಬಹುಜನರು ಮಠಕ್ಕೆ ಬಂದರು. ಎಲ್ಲರೂ ಪಡಸಾಲೆಯ ತುಂಬ ಕುಳಿತರು; ಸಂಜೆಯಾಯಿತು, ರಾತ್ರಿಯಾಯಿತು ಸ್ವಾಮಿ ಗಳು ಹೊರ ಬರುವ ಸೂಚನೆಗಳು ಕಾಣಲಿಲ್ಲ. ಸುಮಾರು ರಾತ್ರಿ ಒಂದು ಗಂಟೆಯ ಸಮಯಕ್ಕೆ ಸ್ವಾಮಿಗಳು ಒಳಗಿನಿಂದಲೇ "ಸಿದ್ಧ ಸಾರವಾಡದ ಕಡೆಗೆ ನೋಡಿಬಾ ! ಮೋಡ ಬಂದಿರಬಹುದು" ಎಂದರು. ಕೂಡಲೇ ಹೋಗಿ ನೋಡಿ ಬಂದ ಆತ "ಅಂತಹ ಲಕ್ಷಣ ಕಾಣುವುದಿಲ್ಲ ಸ್ವಾಮಿ" ಎಂದ. ಕೆಲವು ಗಂಟೆ ಮೌನ, ಮತ್ತೆ ಸಿದ್ಧನಿಗೆ ಅದೇ ಬಗೆಯ ಆದೇಶ. ಮೂರನೆಯ ಸಾರಿ ಸ್ವಾಮಿಗಳಿಂದ ಆದೇಶ ಬರುವ ಹೊತ್ತಿಗೆ ಆಗಲೇ ಬೆಳಗಿನಜಾವ. ಸುತ್ತ ಮೋಡ ಮುಸುಕಿದ ವಾತಾವರಣ ಒಂದು ಹದಕ್ಕೆ ಬಂದು ಧೋ ಎಂದು ಸುರಿಯುವ ಮಳೆ ಆರಂಭವಾಯಿತು. ಸ್ವಲ್ಪವೂ ಪ್ರಕ್ಷುಬ್ಧವಿಲ್ಲದೆ ಧಾರಾಕಾರವಾಗಿ ಸುರಿಯಿತು. ಬಹಳ ದಿನಗಳಿಂದ ಕಂಗಾಲಾಗಿದ್ದ ಭೂಮಿ ತಂಪಾಯಿತು ಜನರು ಹರ್ಷಿತರಾದರು. ಮಾರನೆಯ ದಿನ ಬೆಳಗ್ಗೆ ಸ್ವಾಮಿಗಳು ಎಂದಿನಂತೆ ತೋಟದಲ್ಲಿ ಸುತ್ತಾಡಲು ಬಂದಾಗ ಸಿದ್ಧ ಅವರ ಎರಡೂ ಪಾದಗಳನ್ನು ಬಲವಾಗಿ ಹಿಡಿದು ಗೋಳಿಡಲಾರಂಭಿಸಿದ. ಆಗ ಅವನನ್ನು ಮೇಲೆತ್ತಿದ ಸ್ವಾಮಿಗಳು "ಅಳಬೇಡ ಸಿದ್ಧ. ನೀನೇನು ಅಂತಹ ತಪ್ಪು ಮಾಡಿಲ್ಲ. ಸ್ವಾಮಿಯಾದವರು. ಲೋಕ ಹಿತ ಕಾರ್ಯದ ಜವಾಬ್ದಾರಿ ಹೊತ್ತು ನಿಂತವರು. ಮಾಡಬೇಕಾದ ಕರ್ತವ್ಯದ ಕಡೆಗೆ ಕಣ್ಣು ಹಾಯಿಸುವಂತೆ ಮಾಡಿರುವೆ. ಇದು ಒಳ್ಳೆಯದೇ ಆಯಿತು." ಎಂದಾಗ ಸುತ್ತ ಇದ್ದ ಜನರು ಸ್ವಾಮಿಗಳ ದೊಡ್ಡತನವನ್ನು ಮನಸಾರೆ ಮೆಚ್ಚಿ ಕೊಂಡಾಡಿದರು.

ಗುರುಪಾದ ಸ್ವಾಮಿಗಳು ಇಂತಹ ಅಲೌಕಿಕವಾದ ಪವಾಡಗಳನ್ನು ಮಾಡಿ ದರೂ ಮಾನವೀಯ ವ್ಯವಹಾರಗಳಿಂದ ಅವರೆಂದೂ ದೂರವಾಗಿರಲಿಲ್ಲ. ನಿತ್ಯ ಜೀವನದ ಹತ್ತಾರು ವ್ಯವಹಾರಗಳಲ್ಲಿ ಅವರು ಗಮನ ಕೊಡುತ್ತಿದ್ದರು. ಆ ಭಾಗದ ಜನಜೀವನಕ್ಕೆ ಸಂಬಂಧಿಸಿದ ಹಲವಾರು ಸಮಸ್ಯೆಗಳು ದೂರವಾಗುತ್ತಿದ್ದುದೂ ಅವ ರಿಂದಲೇ. ಎಂತಹ ಮನಸ್ತಾಪದ, ಕಠಿಣವಾದ ವಿಷಯವಿರಲಿ ಸ್ವಾಮಿಗಳ ತೀರ್ಮಾನವೇ ಕಡೆಯದು. ಅದಕ್ಕೆ ಎದುರು ಹೇಳುವ ಮನಸ್ಸು ಯಾರಿಗೂ ಇರು

ತ್ತಿರಲಿಲ್ಲ. ಅಂದರೆ, ಕೇವಲ ಸ್ವಾಮಿಗಳು ಹೇಳಿದರು. ಎಂಬಷ್ಟರಿಂದಲೇ ಹಾಗೆ ಜನ ಒಪ್ಪುತ್ತಿದ್ದರೆಂದಲ್ಲ. ವಿಷಯವನ್ನು ಕೂಲಂಕುಷವಾಗಿ ವಿಮರ್ಶಿಸಿ ಎರಡೂ ಕಡೆಯವರಿಗೂ ಸಮಾಧಾನವಾಗುವ ರೀತಿಯಲ್ಲಿ ಒಪ್ಪಿಸಿ ಹೇಳುವ ಶಕ್ತಿ ಸ್ವಾಮಿಗಳಲ್ಲಿ ಮೈಗೂಡಿದ್ದುದರಿಂದ. ಹೀಗಾಗಿ ಬಬಲೇಶ್ವರದ ಗುರುಪರಂಪರೆಗೆ ಕಳಶವಿಟ್ಟಂತೆ ಗುರುಪಾದ ಸ್ವಾಮಿಗಳು ಪೂಜ್ಯರೆನಿಸತೊಡಗಿದರು. ತಮ್ಮ ಸನಿಹದಲ್ಲಿ ಇಂತಹದೊಂದು ಸಾನಿಧ್ಯವಿದೆ ಎಂಬ ಹೆಮ್ಮೆ. ಸಮಾಧಾನಗಳು ಜನರಲ್ಲಿ ನೆಲೆಗೊಂಡವು.

ಮಳೆಬೆಳೆ ಚೆನ್ನಾಗಿದ್ದರೆ ರೈತರಿಗೆ ಹರ್ಷ; ಸಮಾಜಕ್ಕೆ ನೆಮ್ಮದಿ. ಪ್ರಕೃತಿಯ ವಿಕೋಪದಿಂದ ಈ ಕಾರ್ಯ ಕಾಲತಪ್ಪಿದರೆ ಬವಣೆ ಅಷ್ಟಿಷ್ಟಲ್ಲ. ಇಂತಹ ವಿಪತ್ತುಗಳು ಆಗಾಗ ಸಂಭವಿಸುತ್ತವೆ. ಬಬಲೇಶ್ವರದ ಸುತ್ತಮುತ್ತ ಜನತೆಗೆ ಈ ಆತಂಕ ಆಗಾಗ ಕಂಡರೂ ಅದೇನು ಕೃಪೆಯೋ ಬೆಟ್ಟದಷ್ಟು ದೊಡ್ಡದಾಗಿ ಬಂದ ಕಷ್ಟ, ಬೆಟ್ಟನಷ್ಟಾಗಿ ಕರಗಿ ಹೋಗುತ್ತಿತ್ತು. ತುಂಬು ನಂಬಿಕೆಯಿಂದ ಜೀವನ ಸಾಗಿಸುತ್ತಿದ್ದ ಜನತೆ ಈ ನೆಮ್ಮದಿಯ ಬದುಕಿಗೆ ಶ್ರೀ ಗುರುಪಾದಸ್ವಾಮಿಗಳೇ ಕಾರಣವೆಂದು ನಂಬಿದ್ದರು. ಅವರ ಬಗ್ಗೆ ಎಣೆಯಿಲ್ಲದ ಭಕ್ತಿ-ಗೌರವಗಳು, ಅದು ಅವರ ನರ-ನಾಡಿಗಳಲ್ಲಿ ಸದಾ ಹರಿಯುವ ಜೀವ ಸ್ರೋತವಾಗಿ ಹೋಗಿತ್ತು.

### ಧಾನ್ಯ ಹಂಚಿದ್ದು :

ಒಂದು ವರ್ಷ ಸಮೃದ್ಧವಾದ ಮಳೆಯನ್ನು ಕಂಡ ಜನ ಉತ್ಸಾಹದಿಂದ ಬಿತ್ತಿಗೆಗೆ ಆರಂಭಿಸಿದರು. ಅವರ ದೃಷ್ಟಿ ಬಹುಮಟ್ಟಿಗೆ ಹಣದ ಬೆಳೆಗಳಾದ ಗೋಧಿ, ಹತ್ತಿಗಳ ಕಡೆಗೆ ಒಲಿಯಿತು. ಅದರಲ್ಲಿ ಕೆಲವರು ಹೇಗಾದರಾಗಲಿ ಆಹಾರ ಬೆಳೆಯೇ ಉತ್ತಮವೆಂದು ಕೈಗೊಂಡವರೂ ಇದ್ದರು. ಸ್ವಾಮಿಗಳಿಗೆ ಏನು ಹೊಳೆಯಿತೋ ಏನೋ ಮಠದ ಜಮೀನಿನಲ್ಲೆಲ್ಲ ಆಹಾರ ಧಾನ್ಯಗಳನ್ನೇ ಬಿತ್ತಿಸಿದರು. ಬೆಳೆ ತೂಗಿ ಬಾಗಿತು. ಊಹೆಗೆ ಮೀರಿದ ಉತ್ಪಾದನೆಯಾಯಿತು. ಮಠದ ಉಗ್ರಾಣ ತುಂಬಿ ಕೆಲ ಹಗೆಗಳಲ್ಲಿ ಸಂಗ್ರಹಿಸಿಡಲಾಯಿತು. ಆದರೆ ಮುಂದಿನ ಸಲ ಕಾರಹುಣ್ಣಿಮೆಯು ಕಾಲಿರಿಸಿದರೂ ಮಳೆಯ ಸುಳಿವೇ ಕಾಣಲಿಲ್ಲ. ಮುಂಗಾರಿ ಬಿತ್ತಿಗೆ ಮುಗ್ಗರಿಸಿತು. ಬೆಳೆದಿದ್ದ ಅಷ್ಟಿಷ್ಟು ಧಾನ್ಯ ತೀರಿಹೋಯಿತು. ರೈತರು ಕಂಗಾಲಾದರು. ಜೀವನ ಸಮಸ್ಯೆಯಾಯಿತು. ಅದು ಈಗಿನಂತಹ ಸಂಪರ್ಕ ಸಾಧನಗಳಿದ್ದ ಕಾಲವಲ್ಲ. ಬೆಳೆದ ಕಡೆಯಿಂದ ಆಹಾರಧಾನ್ಯ ತರುವುದು ಪ್ರಯಾಸದ ಕೆಲಸ. ಇಂತಹ ಸಂದರ್ಭದಲ್ಲಿ ಬಡ ಜನರು ಅನ್ಯಮಾರ್ಗವಿಲ್ಲದೆ ಮಠದ ಕಡೆಗೆ ದೃಷ್ಟಿ ಹರಿಸಿದರು. ಸ್ವಾಮಿಗಳಿಗೂ ಪರಿಸ್ಥಿತಿಯ ಅರಿವಾಗಿತ್ತು. ಆಧ್ಯಾತ್ಮ ಚಿಂತನೆಯ ಜೊತೆಜೊತೆಗೇ ಸಾಮಾಜಿಕ ಸಮಸ್ಯೆಗಳನ್ನು ಅಧ್ಯಯನ ಮಾಡುತ್ತಿದ್ದ ಅವರ

ಮನ ಕರಗಿತು. ಊರಿನ ಮುಖಂಡರನ್ನೆಲ್ಲ ಕರೆಸಿದರು, ವಿಚಾರಮಾಡಿದರು. ಮುಖ್ಯವಾಗಿದ್ದ ಆಹಾರ ಮತ್ತು ಮೇವಿನ ವಿಷಯವನ್ನು ವಿವರವಾಗಿ ಚರ್ಚಿಸಿ ಮಠದಲ್ಲಿ ಸಂಗ್ರಹಿಸಿಟ್ಟಿದ್ದ ಆಹಾರಧಾನ್ಯ ಮತ್ತು ಮೇವನ್ನು ಹಂಚುವ ನಿರ್ಣಯ ತೆಗೆದುಕೊಳ್ಳಲಾಯಿತು. ಜೊತೆಗೆ ನೂರಾರು ಗಾಡಿಗಳನ್ನು ಮಾಡಿಕೊಂಡು ಮೇವಿನ ಸಂಗ್ರಹಕ್ಕಾಗಿ ಹೊರಡುವ ವ್ಯವಸ್ಥೆ ಮಾಡಲಾಯಿತು. ಸ್ವಾಮೀಗಳ ಈ ಆಸಕ್ತಿಯನ್ನು ಕಂಡ ಉಳ್ಳವರು ತಾವೇ ಸ್ವತಃ ಮುಂದೆ ಬಂದು ಧಾನ್ಯ ಮತ್ತು ಮೇವನ್ನು ಬಡವರಿಗಾಗಿ ನೀಡಿದರು. ಹೀಗಾಗಿ ಬಬಲೇಶ್ವರದಲ್ಲಿ ಕಾಲಿರಿಸಿದ್ದ ಬರಗಾಲದ ಬವಣೆ ಮಾಯವಾಯಿತು.

ಮಠ, ಗುರುಪೀಠ, ಸ್ವಾಮಿ ಇವು ತುಂಬ ವಿಸ್ತಾರವಾದ ಅರ್ಥವನ್ನೊಳಗೊಂಡ ಪದಗಳು. ಅವುಗಳ ಸುತ್ತ ಇರುವ ಪರಿವೇಶ ದೊಡ್ಡದು. ಅದನ್ನು ಅರ್ಥಮಾಡಿಕೊಂಡು ಮುಂದುವರಿದಾಗ ಮಾತ್ರ ಈ ಪದಗಳು ಸಾರ್ಥಕ್ಯವನ್ನು ಪಡೆಯುತ್ತವೆ. ಅಂತಹ ಸಾರ್ಥಕತೆಯನ್ನು ಬಬಲೇಶ್ವರದ ಮಠ ಪಡೆಯಿತು. ಇದಕ್ಕೆಲ್ಲ ಮೂಲ ಕಾರಣ ಸ್ವಾಮಿಗಳಿಗೆ ಜನಜೀವನದ ಸಮಸ್ಯೆಗಳ ಬಗ್ಗೆ ಇದ್ದ ಕಳಕಳಿಯ ಆಸಕ್ತಿ. ಯಾವ ಚಿಕ್ಕ ವಿಷಯವಾದರೂ ಅದನ್ನು ಎಂದೂ ಅವರು ಉಪೇಕ್ಷೆ ಮಾಡಿದವರಲ್ಲ. ದೊಡ್ಡ ವಿಷಯಗಳ ಬಗ್ಗೆ ನಿರ್ಣಯ ತೆಗೆದುಕೊಳ್ಳುವಾಗಲಂತೂ ಅವರು ಅದನ್ನು ತುಂಬ ಗಂಭೀರವಾಗಿ ಚರ್ಚಿಸುತ್ತಿದ್ದರು. ಅದಕ್ಕೆ ಮುಂಚೆ ಅದನ್ನು ಮನದ ಮೂಸೆಯಲ್ಲಿ ಪುಟಕ್ಕೆ ಹಾಕುತ್ತಿದ್ದರು. ಮೇಲ್ನೋಟಕ್ಕೆ ಸುಮ್ಮನಿದ್ದಂತೆ ಕಂಡರೂ ಜಾಗ್ರತ, ಸ್ವಪ್ನ, ಸುಷುಪ್ತಿ ಈ ಎಲ್ಲ ಅವಸ್ಥೆಗಳಲ್ಲೂ ಅವರ ಮನಸ್ಸು ಸದಾ ಲೋಕ ಹಿತವನ್ನೇ ಕುರಿತು ಚಿಂತಿಸುತ್ತಿತ್ತು. ಈ ಚಿಂತನೆಯೇ ಅವರನ್ನು ದಿನದಿನಕ್ಕೆ ಮಹತ್ತಿಗೆ ಒಯ್ಯುವ ಮೆಟ್ಟಿಲಾಯಿತು.

# ೫. ಮಾಯಾತೀತರು

ಸಣ್ಣ ಶ್ಯಾಂವಿಗಿ ಒಲ್ಲ ಎಣ್ಣೀ ಹೋಳಿಗಿ ಒಲ್ಲ
ಹೆಣ್ಣ ಬಾಸ್ಯಾರ ನೆರಳೊಲ್ಲ ಗುರುಪಾದಸ್ವಾಮಿ
ಸನ್ನೇಶ್ಯಾಗಾರ ಸಣ್ಣವರ

—ಜನಪದಗೀತೆ.

**ಕಲಾದಗಿ ಬೆಟ್ಟ:**

ಬಬಲೇಶ್ವರದ ಮಠ ಆ ಭಾಗಕ್ಕೆಲ್ಲ ಒಂದು ಪ್ರಮುಖ ಧಾರ್ಮಿಕ ಕೇಂದ್ರ ವಾಯಿತು. ಸುತ್ತಲಿನ ಹತ್ತೆಂಟು ಮಠಗಳ ಮರಿಗಳು ಶ್ರೀ ಗುರುಪಾದ ಸ್ವಾಮಿಗಳಿಂದ ಅನುಗ್ರಹ ಪಡೆದು, ಶಿವದೀಕ್ಷೆ ಸ್ವೀಕರಿಸಿ ಧರ್ಮ, ತತ್ವ ನಿಷ್ಠೆಗಳೊಂದಿಗೆ ಕಾಯಕ ನಿಷ್ಠೆಯನ್ನು ಅಳವಡಿಸಿಕೊಂಡು ಮುಂದುವರಿಯುತ್ತಿದ್ದರು. ಗುರುಪಾದ ಸ್ವಾಮಿಗಳಿಂದ ಹಾಗೆ ಅನುಗ್ರಹೀತರಾದವರಲ್ಲಿ ಕಲಾದಗಿಯ ಶ್ರೀ ಗುರುಲಿಂಗ ಶಿವಾಚಾರ್ಯ ಸ್ವಾಮಿಗಳು ಒಬ್ಬರು. ಕಲಾದಗಿಯ ಜನ ಮತ್ತು ಮಠದ ಬಗ್ಗೆ ಗುರುಪಾದ ಸ್ವಾಮಿಗಳಿಗೆ ಹೆಚ್ಚಿನ ಪ್ರೀತಿ. ತಮ್ಮ ಬಗ್ಗೆ ಇಷ್ಟು ಅಭಿಮಾನ ಇಟ್ಟುಕೊಂಡಿರುವ ಗುರುಪಾದ ಸ್ವಾಮಿಗಳನ್ನು ಒಮ್ಮೆ ತಮ್ಮಲ್ಲಿಗೆ ಬರಮಾಡಿಕೊಳ್ಳಬೇಕೆಂಬ ಹಂಬಲ ಅಲ್ಲಿಯ ಜನತೆಗೆ ಬಹಳ ದಿನಗಳಿಂದ ಕಾಡುತ್ತಿತ್ತು. ಅದಕ್ಕೆ ಒಂದು ಸಂದರ್ಭವನ್ನು ಕಾಯುತ್ತಿದ್ದರು. ಶ್ರೀ ಗುರುಲಿಂಗಶಿವಾಚಾರ್ಯ ಸ್ವಾಮಿಗಳ ಪಟ್ಟಾಭಿಷೇಕೋತ್ಸವ ಅಂತಹ ಸಂದರ್ಭವನ್ನು ಒದಗಿಸಿತು. ಕಲಾದಗಿಯ ಕೆಲವು ಮುಖಂಡರು ಬಬಲೇಶ್ವರಕ್ಕೆ ಬಂದು ಶ್ರೀ ಗುರುಪಾದ ಸ್ವಾಮಿಗಳನ್ನು ಕಂಡು ತಮ್ಮ ಬಹು ದಿನದ ಬಯಕೆಯನ್ನು ಅವರಲ್ಲಿ ನಿವೇದಿಸಿಕೊಂಡು ತಮ್ಮ ಪಾದ ಸ್ಪರ್ಶದಿಂದ ಕಲಾದಗಿಯನ್ನು ಪಾವನಗೊಳಿಸಬೇಕೆಂದು ಬೇಡಿಕೊಂಡರು. ಮೊದಲಿನಿಂದಲೂ ಕಲಾದಗಿಯ ವಿಚಾರದಲ್ಲಿ ತಮಗಿದ್ದ ಅಭಿಮಾನದ ಜೊತೆಗೆ ಶ್ರೀ ಗುರುಲಿಂಗ ಶಿವಾಚಾರ್ಯರ ಪಟ್ಟಾಭಿಷೇಕೋತ್ಸವದ ಸಂಗತಿಯೂ ಸೇರಿದುದರಿಂದ ಸ್ವಾಮಿಗಳು ಅಲ್ಲಿಗೆ ಆಗಮಿಸಲು ಒಪ್ಪಿಗೆ ನೀಡುವದು ತಡವಾಗಲಿಲ್ಲ. ಮಿತ ಪರಿವಾರದೊಂದಿಗೆ ಒಂದು ದಿವಸದ ಮಟ್ಟಿಗೆ ಕಲಾದಗಿಗೆ ಬರುವುದಾಗಿ ಭರವಸೆ ನೀಡಿದರು. ಸ್ವಾಮಿಗಳ ಅನುಮತಿಯಂತೆ ದಿವಸವು ನಿಶ್ಚಯವಾಯಿತು. ಕಲಾದಗಿಯ ಜನರು ಹಬ್ಬದ ಸಿದ್ಧತೆಗೆ ತೊಡಗುವ ಸಂಭ್ರಮದಿಂದ ವ್ಯವಸ್ಥೆಗಳ ಕಡೆಗೆ ಗಮನಿಸಿದರು. ಸ್ವಾಮಿಗಳು ಬಂದು

ಹೋಗುವವರೆಗೆ ಇಡಿ ಊರಿನ ಜನರು ತಮ್ಮ ಸ್ವಂತ ಕೆಲಸ ಕಾರ್ಯಗಳನ್ನು ಬದಿ ಗೊತ್ತಿ ನಿಂತರು.

ಇತ್ತ ಬಬಲೇಶ್ವರದಲ್ಲಿ ಸ್ವಾಮಿಗಳು ತಮ್ಮ ಶಿಷ್ಯರಲ್ಲೊಬ್ಬರಾದ ಮುರಿಗೆಯ್ಯ ಎಂಬಾತನನ್ನು ಕರೆದು ಪ್ರವಾಸದ ವಿಷಯ ತಿಳಿಸಿ ಆತನು ಸೇರಿ ಮೂವರು ಮಾತ್ರ ಹೊಡಲು ಸೂಚಿಸಿದರು. ಸಂಚಾರ ಸೌಲಭ್ಯಗಳಿಲ್ಲದ ಆ ಕಾಲಕ್ಕೆ ತಕ್ಕಂತೆ, ಒಂದು ಎತ್ತಿನ ಮೇಲೆ ಸ್ವಾಮಿಗಳ ನಿತ್ಯದ ಕಾರ್ಯಕ್ಕೆ ಬೇಕಾದ ಪೂಜಾ ವಸ್ತು ಮುಂತಾದ ಪರಿಸರಗಳನ್ನು ತುಂಬಿ ಬೇರೆ ಕುದುರೆ, ಎತ್ತುಗಳ ಮೇಲೆ ಸ್ವಾಮಿಗಳು ಮತ್ತು ಸೇವಕರು ಕಲಾದಗಿಗೆ ಹೊರಟರು.

ಶ್ರೀ ಗುರುಪಾದ ಸ್ವಾಮಿಗಳು ಕಲಾದಗಿಗೆ ಹೊರಟ ವಿಷಯಊರಿಂದ ಊರಿಗೆ ಹಬ್ಬುವದು ತಡವಾಗಲಿಲ್ಲ. ಅದರಲ್ಲೂ ಮಾರ್ಗ ಮಧ್ಯದ ಗ್ರಾಮಗಳ ವರು ತಮ್ಮ ಊರಿನ ಮಾರ್ಗವಾಗಿ ಸ್ವಾಮಿಗಳು ಬರುವ ವಿಚಾರ ಕೇಳಿ ಅವರನ್ನು ಆಮಂತ್ರಿಸಿ ಸನ್ಮಾನ ಮಾಡಿ ಬೀಳ್ಕೊಡುವ ಕಾರ್ಯಕ್ರಮಗಳನ್ನು ಹಾಕಿಕೊಂಡರು. ಒಂದು ಊರಿನಲ್ಲಿ ಸ್ವಾಮಿಗಳು ಆತಿಥ್ಯ ಸ್ವೀಕರಿಸಿ ಹೊರಡುವ ಮುನ್ನವೇ ಮುಂದಿನ ಊರಿನವರ ಆಮಂತ್ರಣ ಸಿದ್ಧವಾಗಿರುತ್ತಿತ್ತು. ಸ್ವಾಮಿಗಳು ಈ ಬಗ್ಗೆ ಎಷ್ಟೇ ನಿರಾಸಕ್ತ ರಾಗಿದ್ದರೂ ಭಕ್ತ ಜನರ ಮನಸ್ಸಿಗೆ ವಿರುದ್ಧವಾಗಿ ನಡೆಯುವುದು ಅವರಿಗೆ ಕಷ್ಟ ವಾಯಿತು, ಹೀಗೆ ಭಕ್ತರ ಮನದಿಚ್ಛೆಯಂತೆ ಅಲ್ಲಲ್ಲಿ ವಸತಿ ಮಾಡಿ ಹೊರಟ ಸ್ವಾಮಿಗಳ ಸಂಗಡ ಕಲಾದಗಿಗೆ ಒಂದು ದೊಡ್ಡ ಪರಿವಾರವೇ ಬಂದಿತು. ಇದು ಕಲಾದಗಿಯ ಜನರಿಗೆ ಮತ್ತಷ್ಟು ಆನಂದವನ್ನುಂಟು ಮಾಡಿತು.

ಕಲಾದಗಿಯಲ್ಲಿ ಸ್ವಾಮಿಗಳನ್ನು ಬರಮಾಡಿಕೊಳ್ಳುವ ಕಾರ್ಯಕ್ರಮ ತುಂಬ ವ್ಯವಸ್ಥಿತವಾಗಿ, ವೈಭವದಿಂದ ನಡೆಯಿತು. ಒಂದು ದಿನದ ಆ ಕಾರ್ಯಕ್ರಮ ಜನತೆಯಲ್ಲಿ ಯಾವುದೋ ಮಹತ್ಕಾರ್ಯವನ್ನು ಮಾಡಿ, ಧನ್ಯರಾದ ನೆಮ್ಮದಿಯನ್ನು ತಂದುಕೊಟ್ಟಿತು. ಪಟ್ಟಾಭಿಷೇಕ ಮಹೋತ್ಸವ ಸ್ವಲ್ಪವೂ ಎಡರಿಲ್ಲದೆ ಸ್ವಾಮಿಗಳ ನೇತೃತ್ವದಲ್ಲಿ ಪೂರೈಸಿದುದು ಶ್ರೀ ಗುರುಲಿಂಗ ಶಿವಾಚಾರ್ಯರಿಗಂತೂ ಅವ್ಯಕ್ತವಾದ ಆನಂದಕ್ಕೆ ಎಡೆಮಾಡಿತು. ಶಿವಪೂಜೆ, ಧಾರ್ಮಿಕ ವಿಚಾರ ಚರ್ಚೆ, ದಾಸೋಹ ಕಾರ್ಯಗಳೆಲ್ಲ ವಿಧಿ ಬದ್ಧವಾಗಿ ಮುಗಿದು ಸ್ವಾಮಿಗಳು ಹೊರಡಲು ಅನುವಾದರು.

ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಬಂದ ಕೃಷ್ಣಾತಟಾಕದ ಹಿರಿಯೂರಿನ ಶ್ರೀಮಂತನೊಬ್ಬ ಸ್ವಾಮಿಗಳಿಗೆ ಶಿರಸಾಷ್ಟಾಂಗ ನಮಸ್ಕಾರ ಮಾಡಿ, ಬಬಲೇಶ್ವರ ಮಾರ್ಗ ಮಧ್ಯದಲ್ಲಿರುವ ತನ್ನ ಊರಿನಲ್ಲಿ ಒಂದು ರಾತ್ರಿ ವಸತಿಮಾಡಿ ಹೋಗ ಬೇಕೆಂದು ಅನನ್ಯ ಭಕ್ತಿಯಿಂದ ಸ್ವಾಮಿಗಳಲ್ಲಿ ಬಿನ್ನವಿಸಿಕೊಂಡ. ಜೊತೆಯಲ್ಲಿ ಬಂದಿದ್ದ ಆ ಊರಿನ ಇತರರೂ ಆ ಬೇಡಿಕೆಗೆ ತಮ್ಮ ಕೋರಿಕೆಯನ್ನು ಕೂಡಿಸಿದರು.

ಸ್ವಾಮಿಗಳು ಒಪ್ಪಿಕೊಳ್ಳುವುದು ಅನಿವಾರ್ಯವಾಯಿತು. ಆಗ ಆ ವ್ಯಕ್ತಿಗೆ ಆದ ಆನಂದ ಅಷ್ಟಿಷ್ಟಲ್ಲ. ಕೂಡಲೇ ಹೊರಟು ಊರು ತಲುಪಿ ಸ್ವಾಮಿಗಳು ಬರುವ ವಿಷಯವನ್ನು ತಿಳಿಸಿ ಎಲ್ಲ ಬಗೆಯ ಏರ್ಪಾಡುಗಳನ್ನು ಮಾಡತೊಡಗಿದ.

ಮೊದಲೇ ಮಾಡಿದ್ದ ವ್ಯವಸ್ಥೆಯಂತೆ ಊರ ಮುಂದೆ ಹಾಕಿದ್ದ ಮಂಟಪದ ಹತ್ತಿರ ಸ್ವಾಮಿಗಳನ್ನು ಬರಮಾಡಿಕೊಳ್ಳಲು ಊರಿನ ಪ್ರಮುಖರೊಡನೆ ಆ ವ್ಯಕಿ ಕಾಯುತ್ತ ನಿಂತ. ಸ್ವಾಮಿಗಳು ನಿರೀಕ್ಷಿಸಿದ್ದ ವೇಳೆಗೆ ಸರಿಯಾಗಿ ಆಗಮಿಸಿದರು. ಅಪಾರ ಭಕ್ತಿ ಗೌರವಗಳಿಂದ ಸ್ವಾಮಿಗಳನ್ನು ಸ್ವಾಗತಿಸಿ ಶ್ರೀಮಂತನ ಮನೆಗೆ ಕರೆತರ ಲಾಯಿತು. ಮನೆಯಲ್ಲಿ ಸಂಜೆಯ ಪೂಜೆಗೆ ಎಲ್ಲ ವ್ಯವಸ್ಥೆಯಾಗಿತ್ತು. ದೊಡ್ಡ ಮನೆಯ ಮಧ್ಯ ಪಡಸಾಲೆಯಲ್ಲಿ ಪೀಠದ ಮೇಲೆ ಸ್ವಾಮಿಗಳು ಕುಳಿತರು. ಗುಂಪು ಗುಂಪಾಗಿ ಧಾವಿಸಿದ ಜನರು ಸ್ವಾಮಿಗಳ ದರ್ಶನ ಪಡೆದು ನಮಸ್ಕರಿಸಿ ಹೋಗುತ್ತಿದ್ದರು.

ರಾತ್ರಿ ಸುಮಾರು ಎಂಟು ಗಂಟೆಯ ವೇಳೆಗೆ ಸ್ವಾಮಿಗಳು ಶಿವಪೂಜೆಯನ್ನು ಮುಗಿಸಿಕೊಂಡು, ಪ್ರಸಾದ ಸ್ವೀಕರಿಸಿದರು. ಹೊಲದ ಕೆಲಸಕ್ಕೆ ಹೋಗಿ ತಡವಾಗಿ ಹಿಂದಿರುಗಿದ್ದ ಹೆಣ್ಣು ಮಕ್ಕಳು ಸ್ವಾಮಿಗಳ ದರ್ಶನಕ್ಕಾಗಿ ಬಂದರು. ಶ್ರೀಮಂತನ ಪತ್ನಿ ನಿಂಬಾ ಅವರನ್ನೆಲ್ಲಾ ಒಳಕರೆದು ಸ್ವಾಮಿಗಳ ದರ್ಶನ ಮಾಡಿಸಿ ಕಳಿಸುತ್ತಿದ್ದಳು. ಆ ದಿನ ಸಂಜೆಯಿಂದ ಆಕೆ ಸ್ವಾಮಿಗಳ ಕೈಂಕರ್ಯಕ್ಕಾಗಿ ತಾನೇ ಸ್ವತಃ ನಿಂತಿದ್ದಳು. ಸ್ವಾಮಿಗಳ ಅನಿರ್ವಚನೀಯವಾದ ಬಾಹ್ಯ ಸೌಂದರ್ಯ ಆಕೆಯ ಮನಸ್ಸಿನಲ್ಲಿ ಪೂರ್ವವಾಗಿ ನೆಲೆ ನಿಂತಂತೆ ತೋರಿತು. ರಾತ್ರಿಯಾಯಿತು ಶ್ರೀಮಂತನು ಸ್ವಾಮಿಗಳ ಹತ್ತರ ಕುಳಿತು ಲೋಕಾಭಿರಾಮವಾಗಿ ಕೆಲವು ಘಳಿಗೆ ಮಾತನಾಡಿ ಕೃತಾರ್ಥನಾದ. ನಂತರ ಮಾರನೆಯ ದಿನದ ದಾಸೋಹದ ಅಡಿಗೆಯ ವ್ಯವಸ್ಥೆಯ ಕಡೆಗೆ ಅವನ ಮನಸ್ಸು ಹರಿಯಿತು. ದೊಡ್ಡ ಮನೆಯ ವಿಶಾಲವಾದ ಹಿತ್ತಲಲ್ಲಿ ಅಡಿಗೆಗೆ ಒಲೆ ಹೊತ್ತಿಸಿದ್ದರು. ಕೆಲವು ಜನರು ಮಿಂದು - ಮಡಿಯುಟ್ಟು ಅಡಿಗೆಗೆ ಸಿದ್ಧರಾಗಿದ್ದರು.

ಸ್ವಾಮಿಗಳ ವಿಶ್ರಾಂತಿಗೆ ಮನೆಗೆ ಹತ್ತಿಕೊಂಡಂತೆ ಒಂದು ಪ್ರತ್ಯೇಕ ಕೋಣೆ ಯನ್ನು ಶೆರವು ಮಾಡಿ ಮೆತ್ತನೆಯ ಸ್ವಚ್ಛವಾದ ಬಿಳಿಯ ಗಾದಿಯನ್ನು ಸಿದ್ಧಪಡಿಸಿ ಶ್ರೀಮಂತನೇ ಸ್ವತಃ ಸ್ವಾಮಿಗಳನ್ನು ಕೋಣೆಗೆ ಕರೆದುಕೊಂಡು ಹೋಗಿ ಹಿತ್ತಲಲ್ಲಿ ನಡೆಯುತ್ತಿದ್ದ ಅಡಿಗೆಯ ಕಾರ್ಯದ ಮೇಲ್ವಿಚಾರಣೆಗೆ ಹೋದ. ಸ್ವಾಮಿಗಳಿದ್ದ ಕೋಣೆಗೆ ಎರಡು ಬಾಗಿಲು. ಒಂದು ಹೊರಗಿನ ಪಡಸಾಲೆಗೆ ಹೊಂದಿಕೊಂಡಿತ್ತು. ಪಡಸಾಲೆಯಲ್ಲಿ ಬಾಗಿಲ ಹೊಸ್ತಿಲಿಗೆ ತಲೆಕೊಟ್ಟು ಸೇವಕ ಮುರಿಗೆಯ್ಯ ನಿದ್ರಿಸುತ್ತಿದ್ದ. ಇನ್ನೊಂದು ಬಾಗಿಲು ನಡು ಮನೆಗೆ ಹೊಂದಿಕೊಂಡಿತ್ತು. ಸ್ವಾಮಿಗಳ ಹೊರತು ಮನೆಯ ಎಲ್ಲರೂ ಹಿತ್ತಲಲ್ಲಿದ್ದರು. ನಡುರಾತ್ರಿಯ ವೇಳೆಗೆ ಆ ಮನೆಯಲ್ಲಿ

ಚಿಕ್ಕ ಮಕ್ಕಳನ್ನೂ ಸ್ವಾಮಿಗಳನ್ನೂ ಬಿಟ್ಟು ಮತ್ತೆ ಯಾರೂ ಇರಲಿಲ್ಲ. ಸ್ವಾಮಿಗಳು ನಿದ್ರೆಯಲ್ಲಿ ಲೀನವಾಗಿದ್ದರು.

ಯಾವ ವ್ಯಕ್ತಿಗೆ ಯಾವ ಘಳಿಗೆಯಲ್ಲಿ ಮನಸ್ಸು ಹಿಡಿತ ತಪ್ಪಿ ವ್ಯವಹರಿಸುತ್ತದೆ, ಅನಿಷ್ಟ ಕಾರ್ಯಗಳಿಗೆ ಕೈ ಹಾಕುತ್ತವೆ ಎಂಬದನ್ನು ಹೇಳ ಬರುವುದಿಲ್ಲ. ಸ್ವಾಮಿಗಳು ಮನೆಯನ್ನು ಪ್ರವೇಶಿಸಿದ ಮರುಕ್ಷಣದಲ್ಲೇ ಶ್ರೀಮಂತನ ಮಡದಿಯ ಮನಸ್ಸು ಸ್ವಾಮಿಗಳಲ್ಲಿ ನೆಲೆಗೊಂಡು ಹೋಗಿತ್ತು. ನಿಷ್ಠೆಯ ಬ್ರಹ್ಮಚರ್ಯವನ್ನು ಪಾಲಿಸಿ ಕ್ರಮವಾದ ಜೀವನವನ್ನು ಪಾಲಿಸಿದ್ದ ಸ್ವಾಮಿಗಳ ಅಂಗ ಸೌಂದರ್ಯಕ್ಕೆ ಅವರ ಪರಿಶುದ್ಧ ಅಂತರಂಗದಿಂದ ಮತ್ತಷ್ಟು ಕಳೆ ತುಂಬಿತ್ತು. ಸ್ವಲ್ಪ ಚಂಚಲ ಮನಸ್ಸಿನ ಯಾವ ಹೆಣ್ಣೂ ಆ ಮೋಹಕ ಸೌಂದರ್ಯಕ್ಕೆ ಮರುಳಾಗದೆ ಇರಲು ಸಾಧ್ಯವಿರಲಿಲ್ಲ. ಆದರೆ ಪೂಜೆ-ದಾಸೋಹಗಳಿಗೆಂದು ಭಕ್ತಿ ಪುರಸ್ಸರವಾಗಿ ಆಹ್ವಾನಿಸಿದ್ದ ಸ್ವಾಮಿಗಳ ಬಗೆಗೆ ಮನೆಯೊಡತಿಯ ಮನಸ್ಸು ಪಲ್ಲಟವಾದುದು ದುರ್ದೈವದ ಸಂಗತಿ. ಮನೆಯ ಜನರೆಲ್ಲ ಹಿತ್ತಲಲ್ಲಿ ನಾಳೆಯ ಅಡಿಗೆಯ ಸಿದ್ಧತೆಯಲ್ಲಿದ್ದುದು ಮನೆಯ ಒಳಗೆ ಯಾರೂ ಇಲ್ಲದಿದ್ದುದು ಆಕೆಯ ಆಸೆಯ ಬೆಂಕಿಗೆ ಎಣ್ಣೆ ಹೊಯ್ದಂತಾಯಿತು. ಕಾಮದ ಸೆಳವಿಗೆ ಸಿಕ್ಕಿದ ಆಕೆ ತಾನು ಏನು ಮಾಡುತ್ತಿದ್ದೇನೆ, ಮುಂದೆ ಯಾವ ಪರಿಣಾಮದಲ್ಲಿ ಈ ಕೃತ್ಯ ಪರ್ಯವಸಾನಗೊಳ್ಳುತ್ತದೆ ಎಂಬುದೊಂದನ್ನೂ ಚಿಂತಿಸದೆ ಸ್ವಾಮಿಗಳು ಮಲಗಿದ್ದ ಕೋಣೆಯ ಬಾಗಿಲನ್ನು ಮೆಲ್ಲಗೆ ಸರಿಸಿ ಒಳ ಹೊಕ್ಕು ಸಣ್ಣಗೆ ಉರಿಯುತ್ತಿದ್ದ ದೀಪವನ್ನು "ಪಾಪ ಮಾಡಿದವಳು ದೀಪವನ್ನು ಬಾಯಲ್ಲಿ ಉದುವಿದಳು" ಎಂಬ ಗಾದೆ ಮಾತಿನಂತೆ ದೀಪವಾರಿಸಿ ಹಿಂದು ಮುಂದು ನೋಡದೆ ಸುಷುಪ್ತಿಯಲ್ಲಿದ್ದ ಸ್ವಾಮಿಗಳ ಮೈಮೇಲೆ ಕೈಯಿಟ್ಟಳು. ಕೂಡಲೆ ಎಚ್ಚರಗೊಂಡ ಸ್ವಾಮಿಗಳ ಕೈಗೆ ಕತ್ತಲಲ್ಲಿ ಕಂಕಣ ಕೈಗಳ ಸ್ಪರ್ಶವಾಗಿ ಝುಗ್ಗನೆ ಎದ್ದು ಕುಳಿತು "ಮುರಿಗೆಯ್ಯ, ಮುರಿಗೆಯ್ಯ" ಎಂದು ಕೂಗುವಷ್ಟರಲ್ಲಿ ಆ ವ್ಯಕ್ತಿ ಕತ್ತಲಲ್ಲೆ ಬಾಗಿಲು ತೆಗೆದು ನಡು ಮನೆಗೆ ಸೇರಿತು.

ಮಧ್ಯ ರಾತ್ರಿಯಲ್ಲಿ ಸ್ವಾಮಿಗಳ ಅನಿರೀಕ್ಷಿತ ಕರೆಯನ್ನು ಆಲಿಸಿದ ಮುರಿಗೆಯ್ಯನಿಗೆ ಭಯ-ಆಶ್ಚರ್ಯಗಳು ಒಮ್ಮೆಲೆ ಉಂಟಾದವು. ನಿತ್ಯ ರಾತ್ರಿ ಹಾಸಿಗೆ ಸಿದ್ಧಪಡಿಸಿ ತಂಬಿಗೆಯಲ್ಲಿ ನೀರನ್ನು ಇಟ್ಟು ಸ್ವಾಮಿಗಳನ್ನು ಬೀಳ್ಕೊಟ್ಟಮೇಲೆ ಮತ್ತೆ ಅವರ ದರ್ಶನವಾಗುತ್ತಿದ್ದುದು ಮುಂಜಾವಿನಲ್ಲೆ. ಆದರೆ ಇಂದು ಇದ್ದಕ್ಕಿದ್ದಂತೆಯೇ ಬಂದ ಸ್ವಾಮಿಗಳ ಕರೆ ಮುರಿಗೆಯ್ಯನಿಗೆ ಅನುಮಾನ ತಂದಿತು. ಏನೋ ಅಕಾರ್ಯ ಸಂಭವಿಸಿತೆಂದು ಊಹಿಸಲು ಆತನಿಗೆ ತಡವಾಗಲಿಲ್ಲ. ಕೂಡಲೆ ದೀಪ ಹಿಡಿದು ಕೋಣೆ ಪ್ರವೇಶಿಸಿ "ಏನಾಯಿತು ಸ್ವಾಮಿ" ಎಂದು ಗಾಬರಿಯಿಂದ ಪ್ರಶ್ನಿಸಿದ. "ಏನಾಗುವದೇನು ಹುಳ ಮುಟ್ಟಿತು, ಏಳು ಹೊರಡೋಣ" ಎಂದ ಸ್ವಾಮಿಗಳ ಮಾತಿನರ್ಥ ಯಾರಿಗೂ ಹೊಳೆಯಲಿಲ್ಲ. ಮರುಘಳಿಗೆಯಲ್ಲೇ ಹಿತ್ತಲಲ್ಲಿದ್ದ ಯಜಮಾನನಾದಿಯಾಗಿ

ಜನರು ಸೇರಿದರು. "ಯಾವ ಹುಳ ಎಲ್ಲಿದೆ" ಎಂದು ಎಲ್ಲರು ಹುಡುಕಲಾರಂಭಿಸಿದರು. "ಹುಳ ಎಲ್ಲಿ ಕಚ್ಚಿತು ಸ್ವಾಮಿ" ಎಂದು ಮುರಿಗೆಯ್ಯ ಸ್ವಾಮಿಗಳ ಹಸ್ತಪಾದಗಳ ಮೇಲೆ ಎರಡೂ ಕೈಗಳನ್ನು ಸವರಿ ಪರೀಕ್ಷಿಸ ತೊಡಗಿದ. ಆಗ ಸ್ವಾಮಿಗಳು "ಕಚ್ಚಲಿಲ್ಲ, ಮುಟ್ಟಿತು ಅಷ್ಟೆ, ವಿಷ ಜಂತು. ನಾವಿಲ್ಲಿರಲಾಗದು ಕುದುರೆಗೆ ತಡಿ ಹಾಕು ಹೊರಡೋಣ" ಎಂದವರೇ ಬೆತ್ತವನ್ನು ಹಿಡಿದು ಮನೆಯ ಮೆಟ್ಟಲಿಳಿದು ಹೊರ ಬಂದು ನಿಂತರು. ಆ ಕಾಲಕ್ಕೆ ಗುಂಪುಸೇರಿದ ಜನರಿಗೆ ದಿಕ್ಕು ತೋಚದಾಯಿತು. ಯಜಮಾನನಿಗಂತೂ ಒಂದು ಘಳಿಗೆ ಇಡೀ ವಾತಾವರಣವೇ ಮಂಜಾಗಿ ತಾನೆಲ್ಲಿದ್ದೇನೆ, ಏನಾಗಿದೆ ಎಂಬುದು ಹೊಳೆಯಲಿಲ್ಲ. ಸ್ವಾಮಿಗಳ ಪಾದಗಳನ್ನು ಘಟ್ಟಿಯಾಗಿ ಹಿಡಿದು ಗಳಗಳನೆ ಅಳಲಾರಂಭಿಸಿ, ಏನು ತಪ್ಪಿದ್ದರೂ ದೊಡ್ಡ ಮನಸ್ಸಿನಿಂದ ಹೊಟ್ಟೆಯಲ್ಲಿ ಹಾಕಿಕೊಂಡು ನಾಳೆಯ ದಾಸೋಹವನ್ನು ಮುಗಿಸಿಕೊಂಡು ಹೊರಡ ಬೇಕೆಂದು ಬೇಡಿದ. ಆತನ ದೀನ ಸ್ಥಿತಿಯನ್ನು ಕಂಡ ಮುರಿಗೆಯ್ಯ ಸ್ವಾಮಿಗಳ ಬಳಿಗೆ ಬಂದು "ನಾಳೆ ಗಣಾರಾಧನೆಗೆ ಆಮಂತ್ರಣ ಹಿಡಿದಿರುವಿರಿ. ಈ ಕತ್ತಲಲ್ಲಿ ಹೋಗುವದಾದರೂ ಹೇಗೆ? ದಯಮಾಡಿ ಒಪ್ಪಿರಿ" ಎಂದ ಮಾತಿಗೆ ಸ್ವಾಮಿಗಳು "ಬಿನ್ನಹ ಈಡೇರಿದೆ? ರಾತ್ರಿ ಶಿವಪೂಜೆಯಾಯಿತು. ಅಲ್ಲಿಯವರೆಗೆ ಎಲ್ಲ ಶುದ್ಧವಿತ್ತು. ಮಧ್ಯ ರಾತ್ರಿಯ ಮೇಲೆ ಅಶುದ್ಧವಾಯಿತು. ಇಂಥ ಕಡೆ ಇರುವುದು ಕ್ಷೇಮವಲ್ಲ. ರಾತ್ರಿಯ ಪಯಣ ತಂಪಾಗಿದ್ದು ಆಯಾಸ ಕಾಣುವುದಿಲ್ಲ. ಒಟ್ಟಿನಲ್ಲಿ ಯಾರಿಗೆ ಯಾರು ಹೊಣೆ? ಎಲ್ಲ ಶಿವನಿಚ್ಛೆ. ಇನ್ನು ಹೊರಡೋಣ, ತಡಮಾಡುವುದು ಬೇಡ" ಎಂದವರೇ ಬಾಗಿಲಲ್ಲೇ ಕಟ್ಟಿದ್ದ ಕುದುರೆಯನ್ನೇರಿ ಹೊರಟೇ ಬಿಟ್ಟರು. ಮುರಿಗೆಯ್ಯ ಮತ್ತು ಉಳಿದ ಸೇವಕರು ಮರು ಮಾತನಾಡದೇ ಸ್ವಾಮಿಗಳನ್ನು ಹಿಂಬಾಲಿಸಿದರು.

ಕತ್ತಲಲ್ಲಿ ಕಣ್ಮರೆಯಾಗಿಹೋದ ಸ್ವಾಮಿಗಳನ್ನು ನೋಡುತ್ತ ನಿಂತಿದ್ದ ಯಜಮಾನ ಮತ್ತು ನೆರೆದ ಜನರ ಕಿವಿಗೆ ಇದ್ದಕ್ಕಿದ್ದಂತೆಯೇ ಮನೆಯೊಳಗಿಂದ ವಿಚಿತ್ರ ಆಕ್ರಂದನ ಕೇಳಿ ಬಂದು ಬೆಚ್ಚಿಬಿದ್ದವರಂತೆ ಒಳಗೆ ಹೋದರು.

ಅದೊಂದು ಕರುಳಿರಿಯುವ ದೃಶ್ಯ. ಹಾಸಿಗೆಯ ಮೇಲೆ ಬಿದ್ದು ಅಸಾಧ್ಯವಾದ ನೋವಿನಿಂದ ನರಳುತ್ತಿದ್ದ ಯಜಮಾನನ ಹೆಂಡತಿಯೇ ಅಂದು ರಾತ್ರಿ ಸ್ವಾಮಿಗಳ ನಿರ್ಗಮನಕ್ಕೆ ಕಾರಣವೆಂದು ಊಹಿಸುವುದು ಅಲ್ಲಿದ್ದ ಯಾರಿಗೂ ತಡವಾಗಲಿಲ್ಲ. ಆ ಸ್ಥಿತಿಯಲ್ಲಿ ಅಸತ್ಯವನ್ನು ಮರೆಮಾಚುವ ಮನಸ್ಸೂ ಆಕೆಗಿರಲಿಲ್ಲ. ಪತಿಯನ್ನು ಕಂಡವಳೇ ಆತನ ಪಾದ ಹಿಡಿದು ಗೋಳೆಂದು ಅಳತೊಡಗಿದಳು. ಅಲ್ಲಿದ್ದವರೆಲ್ಲ ಒಬ್ಬೊಬ್ಬರಾಗಿ ಹೋದ ಮೇಲೆ ತಾನು ಮಾಡಿದ ಅಕಾರ್ಯವನ್ನು ವಿವರಿಸಿ ಕೂಡಲೇ ಬಬಲೇಶ್ವರಕ್ಕೆ ಹೋಗಿ ಕ್ಷಮೆಯಾಚಿಸಿ ಸ್ವಾಮಿಗಳನ್ನು ಮರಳಿ ಕರೆತರುವಂತೆ ಬೇಡಿದಳು.

ಆಕೆಯ ಅಂಗಾಂಗವೆಲ್ಲ ಅಸಾಧ್ಯ ನೋವಿನಿಂದ ಉರಿಯುತ್ತಿತ್ತು. ಆಗಿಹೋದ ಅನಿಷ್ಟ ನಿವಾರಣೆ ಸ್ವಾಮಿಗಳಿಂದ ಮಾತ್ರ ಸಾಧ್ಯವೆಂದು ಯೋಚಿಸಿದ

ಯಜಮಾನ ಅಲ್ಲಿಂದ ಹೋದವನೇ ತನ್ನ ಹತ್ತಿರದ ಮೂರು ನಾಲ್ಕು ಜನ ಬಂಧುಗಳೊಡನೆ ಗಾಡಿಯಲ್ಲಿ ಕುಳಿತು ಬಬಲೇಶ್ವರಕ್ಕೆ ಹೊರಟ.

ಆ ಗ್ರಾಮದಿಂದ ಬಬಲೇಶ್ವರ ೩೦ ಮೈಲಗಳ ದೂರದಲ್ಲಿದೆ. ರಾತ್ರಿ ಕುದುರೆ ಏರಿ ಹೊರಟ ಸ್ವಾಮಿಗಳು ಬೆಳಗಿನ ಜಾವ ಮಠವನ್ನು ತಲುಪಿ ಬೆಳಗಿನ ಪೂಜೆಗೆ ಸಿದ್ಧವಾಗುತ್ತಿದ್ದರು. ಆಗ ಸುಮಾರು ಎಂಟು ಘಂಟೆ. ರಾತ್ರಿ ನಡೆದ ಅಹಿತ ಘಟನೆ ಅವರ ಮನಸ್ಸನ್ನು ಕಲಕಿದ್ದರೂ ಅದನ್ನು ಸ್ಥಿಮಿತಕ್ಕೆ ತಂದುಕೊಳ್ಳುವ ಸಂಯಮ ಅವರಲ್ಲಿದ್ದುದರಿಂದ ಎಂದಿನ ಲವಲವಿಕೆಯಿಂದ ತುಂಬಿದ್ದರು. ಪೂಜೆ ಮುಗಿಯಿತು. ಮಠದ ಪಡಸಾಲೆಯಲ್ಲಿದ್ದ ಆಸನದಮೇಲೆ ಕುಳಿತರು. ಮೂರು ದಿನಗಳಿಂದ ಮಠವನ್ನು ಬಿಟ್ಟು ಹೊರಗಿದ್ದುದರಿಂದ ಆ ದಿನ ಮುಂಜಾನೆಯೇ ಅನೇಕ ಜನ ಸಂದರ್ಶಕರು ಕಾದು ಕುಳಿತಿದ್ದರು. ಅವರ ಕ್ಷೇಮ ಸಮಾಚಾರ ವಿಚಾರಿಸಲು ತೊಡಗುವ ವೇಳೆಗೆ ನಾಲ್ಕಾರು ಜನರನ್ನು ಹೊತ್ತ ಎತ್ತಿನ ಗಾಡಿ ಮಠದ ಮುಂಭಾಗದಲ್ಲಿ ಬಂದು ನಿಂತಿತು. ಅವಸರದಲ್ಲಿ ಬಂದವರೆಂಬ ಭಾವ ಗಾಡಿಯಲ್ಲಿದ್ದ ಎಲ್ಲರ ಮುಖದಲ್ಲಿ ಎದ್ದು ಕಾಣುತ್ತಿತ್ತು. ಅವರು ಯಾರೆಂಬುದನ್ನು ಗುರುತಿಸುವುದು ಸ್ವಾಮಿಗಳಿಗೆ ತಡವಾಗಲಿಲ್ಲ. ಮೊದಲು ಯಜಮಾನ ಗಾಡಿಯಿಂದಿಳಿದು ಬಂದು ಸ್ವಾಮಿಗಳಿಗೆ ನಮಸ್ಕರಿಸಿ ಮೌನವಾಗಿ ನಿಂತ. ಆತನ ಕಣ್ಣುಗಳಲ್ಲಿ ನೀರು ಧಾರಾಕಾರ ವಾಗಿ ಹರಿಯತೊಡಗಿತು. ಜೊತೆಗೆ ಬಂದವರೂ ತಲೆ ತಗ್ಗಿಸಿ ನಿಂತರು. ಅಕಾರ್ಯಕ್ಕೆ ಕ್ಷಮಾಯಾಚನೆ ಅವರ ಮುಖದಲ್ಲಿ ತುಂಬಿತ್ತು. ದೈನ್ಯತೆಯನ್ನು ಬಿಟ್ಟರೆ ಬೇರೇನೂ ಅವರಲ್ಲಿ ಕಾಣುತ್ತಿರಲಿಲ್ಲ.

ಅವರ ಮೌನವನ್ನು ಮುರಿದು ಸ್ವಾಮಿಗಳೇ ಮುಂದುವರಿದು ನಿಮ್ಮ ಅಂತರಂಗದ ಅರ್ಥವಾಯಿತು. ಆದರೆ "ಕೈ ಮೀರಿ ಹೋಗಿದೆ" ಎಂದರು. ಮಾತಿನ ಅಂತರ್ಯ ಅರ್ಥವಾಗದೆ ಯಜಮಾನ "ಕೃಪೆಮಾಡಿ ಉದ್ಧಾರ ಮಾಡಬೇಕು ಆಕೆ ಮಕ್ಕಳ ತಾಯಿ. ಆ ಯಾತನೆ ತಪ್ಪಿದರೆ ಮಾತ್ರ ಬದುಕಲು ಸಾಧ್ಯ" ಎನ್ನುವಷ್ಟರಲ್ಲೇ ಸ್ವಾಮಿಗಳು "ಪ್ರಾಣ ಪಕ್ಷಿ ಹಾರಿ ಹೋದ ಮೇಲೆ ಎಲ್ಲಿಯ ಯಾತನೆ? ಬೇಗ ಹೋಗಿ ಮುಂದಿನ ಕಾರ್ಯ ಕೈಕೊಳ್ಳಿರಿ" ಎಂದರು. ಬಂದಿದ್ದವರಿಗೆ ಮುಂದೇನು ಮಾತನಾಡಬೇಕೆಂಬುದು ತೋಚದಾಯಿತು. ಬಂದ ದಾರಿ ಹಿಡಿದು ಬಂಡಿ ಹತ್ತಿದರು.

ಗುರುಪಾದ ಸ್ವಾಮಿಗಳ ಜೀವನದಲ್ಲಿ ಇದೊಂದು ಅಹಿತವಾದ ಘಟನೆ ಮಿಂಚಿನಂತೆ ಸುಳಿದು ಹೋಯಿತು. ಆದರೆ ಒಬ್ಬ ಚಂಚಲ ಸ್ವಭಾವದ ಹೆಣ್ಣಿನ ಕ್ಷಣಿಕ ಆಸೆಯಿಂದ ಒಂದು ದೊಡ್ಡ ಮನೆತನದ ಗೌರವಕ್ಕೆ ಮಸಿಬಳಿದಂತಾಯಿತು. ಈ ಘಟನೆಯ ಬಗ್ಗೆ ಆ ಗ್ರಾಮದ ಸುತ್ತಲಿನ ಜನರು ದೀರ್ಘವಾಗಿ ಚಿಂತಿಸಿದರೂ ಕಡೆಗೆ ಉಳಿದದ್ದು ಸ್ವಾಮಿಗಳ ಹಿರಿತನವೊಂದೇ.

# ೬. ಮಹಾತ್ಮರ ಮಹಿಮೆ

ಕ್ಯಾವಿಯ ಉಟ್ಟ್ಯಾರ ಕ್ಯಾವಿಯು ಹೊತ್ತ್ಯಾರ
ಮಾವಿನ ಮರಕ ಮಲಗ್ಯಾರ ಗುರುಪಾದೇಶ್ವರ
ಮಾಯ ನಾಗ್ಯಾರ ಮಠದಾಗ

—ಜನಪದಗೀತೆ.

**ಕ್ಷೇತ್ರ ಯಾತ್ರೆ:**

ಗುರುಪಾದ ಸ್ವಾಮಿಗಳು ಬಬಲೇಶ್ವರದ ಮಠವನ್ನು ಒಂದು ಆಧ್ಯಾತ್ಮಿಕ ಮತ್ತು ಸಾಂಸ್ಕೃತಿಕ ಅಧ್ಯಯನ ಕೇಂದ್ರವಾಗಿ ರೂಪಿಸಿದ ಮೇಲೆ ಸುಕ್ಷೇತ್ರದ ಹಾಗೂ ಸತ್ಪುರುಷರು ಮತ್ತು ಗುರುಪೀಠಗಳ ದರ್ಶನ ಮಾಡಿಕೊಂಡು ಬರಬೇಕೆಂದು ಆಲೋಚಿಸಿದರು. ಸ್ವಾಮಿಗಳ ಈ ಯೋಚನೆ ಭಕ್ತರಿಗೂ ಹಿಡಿಸಿತು. ಅದರಂತೆ ಮೊದಲು ಪ್ರಸಿದ್ಧವಾದ ಶ್ರೀಶೈಲ ಮಹಾಕ್ಷೇತ್ರವನ್ನು ಸಂದರ್ಶಿಸಿ ಬರಲು ತೀರ್ಮಾನಿಸಿದ ಸ್ವಾಮಿಗಳು ಭಕ್ತರ ಮಿತಪರಿವಾರದೊಂದಿಗೆ ಶ್ರೀಶೈಲಕ್ಕೆ ಹೊರಟರು. ಬಬಲೇಶ್ವರದಿಂದ ಹೊರಟ ಸ್ವಾಮಿಗಳು ಶ್ರೀಶೈಲ ತಲುಪುವುದರೊಳಗೆ ಮಾರ್ಗ ಮಧ್ಯದ ಅನೇಕ ಸ್ಥಳಗಳನ್ನು ಸಂದರ್ಶಿಸಿದರು. ಶ್ರೀಶೈಲ ಮಹಿಮೆಯನ್ನು ಅರಿತಿದ್ದ ಸ್ವಾಮಿಗಳಿಗೆ ಆ ಕ್ಷೇತ್ರ ದರ್ಶನದಿಂದ ಅನಿರ್ವಚನೀಯವಾದ ಶಾಂತಿ ಲಭಿಸಿತು. ಪಾತಾಳ ಗಂಗೆಯಲ್ಲಿ ಮಿಂದು ಮಲ್ಲಿಕಾರ್ಜುನ ಹಾಗೂ ಭ್ರಮರಾಂಭಿಕೆಯ ದರ್ಶನ ಪಡೆದು ವೀರಶೈವ ಪಂಚಪೀಠಗಳಲ್ಲೊಂದಾದ ಜಗದ್ಗುರು ಪಂಡಿತಾರಾಧ್ಯರ ಪೀಠದರ್ಶನ ಭಾಗ್ಯದಿಂದ ಪುನೀತರಾಗಿ ಯಾತ್ರೆಯ ಸಂತೃಪ್ತಿ ಹೊಂದಿದರು.

ಅಲ್ಲಿಂದ ಹೊರಟ ಗುರುಪಾದ ಸ್ವಾಮಿಗಳು ಚಿಕ್ಕಮಂಗಳೂರು ಜಿಲ್ಲೆಯ ಶ್ರೀಮದ್ ರಂಭಾಪುರಿ ಪೀಠಕ್ಕೆ ತೆರಳಿ ಶ್ರೀ ಜಗದ್ಗುರುಗಳನ್ನು ಸಂದರ್ಶಿಸಿದರು. ಆ ಪೀಠ ಮತ್ತು ಪರಂಪರೆಯ ಬಗ್ಗೆ ತಮಗಿದ್ದ ಭಕ್ತಿ ಗೌರವಗಳ ಸಂಕೇತವಾಗಿ ಒಂದು ಶ್ರೇಷ್ಠ ಜಾತಿಯ ಕುದುರೆ, ಒಂದು ಬೆಳ್ಳಿಯ ತಂಬಿಗೆ ಹಾಗೂ ತಾಟನ್ನು ಗುರುಗಳಿಗೆ ಕಾಣಿಕೆಯಾಗಿ ಅರ್ಪಿಸಿದರು.

ಈ ಮೊದಲೇ ಗುರುಪಾದ ಸ್ವಾಮಿಗಳ ವ್ಯಕ್ತಿತ್ವದ ಬಗ್ಗೆ ತಿಳಿದಿದ್ದ ಜಗದ್ಗುರುಗಳು ಅವರಿಗೆ ಕೆಲವು ಬಿರುದುಗಳನ್ನು ಮಠದ ಸಂಕೇತವಾಗಿ ಧ್ವಜವನ್ನು ಅನುಗ್ರಹಿಸಿದರು.

ಬಬಲೇಶ್ವರದ ಮಠವು ವೀರಶೈವ ಜಗದ್ಗುರು ಶ್ರೀಮದ್ ರಂಭಾಪುರಿ ಪೀಠಕ್ಕೆ ಸೇರಿದ ೩೩ನೆಯ ಮಠವಾಗಿದೆ. ಮಠದ ಗುರುತಿನ ಬಿಲ್ಲೆಯ ಮೇಲೆ "ಗುರುಪೀಠ ಸಂಸ್ಥಾನ ಶ್ರೀರಂಭಾಪುರಿ ವೀರಸಿಂಹಾಸನ ನಂ. ೩೩" ಎಂದು ದೇವನಾಗರಿ ಲಿಪಿಯಲ್ಲಿ ಕೆತ್ತಿದೆ. ವಿಶೇಷ ಸಮಾರಂಭಗಳಲ್ಲಿ ಈಗಲೂ ಮಠದ ಕೈಂಕರ್ಯ ಮಾಡುವವರು ಆ ಬಿಲ್ಲೆಗಳನ್ನು ಹಚ್ಚಿಕೊಳ್ಳುವ ಪದ್ಧತಿ ಇದೆ.

ರಂಭಾಪುರಿ ಪೀಠದ ಸಂದರ್ಶನದ ತರುವಾಯ ಮಲೆನಾಡಿನ ಆಚಿನವರೆಗೆ ಹೋಗಿ ಗೋಕರ್ಣ ಹಾಗೂ ಉಳವಿ ಪುಣ್ಯ ಕ್ಷೇತ್ರಗಳ ದರ್ಶನ ಮಾಡಿಕೊಂಡು ಗುರುಪಾದ ಸ್ವಾಮಿಗಳು ಮರಳಿ ಬಬಲೇಶ್ವರಕ್ಕೆ ಬಂದರು. ಯಾವ ಸಂಚಾರ ಸೌಲಭ್ಯಗಳಿರದ ಆ ಕಾಲದಲ್ಲಿ ಇಂತಹ ತೀರ ದೂರದ ಸ್ಥಾನಗಳನ್ನು ಸಂದರ್ಶಿಸಿ ಬಂದುದೊಂದು ಮಹತ್ವದ ಕಾರ್ಯವೇ ಸರಿ.

## ಜಡಿಯಪ್ಪನವರ ಭೆಟ್ಟಿ :

ಮುಮುಕ್ಷುಗಳ ಆಶ್ರಯ ಸ್ಥಳವಾದ ಶ್ರೀಶೈಲದಲ್ಲಿ ಮೈಸೂರ ಕಡೆಯ ಜಡಿಯಪ್ಪನೆಂಬ ಒಬ್ಬ ಯೋಗಿ ಹಲವಾರು ವರುಷ ತಪಶ್ಚೈರ್ಯ ಕೈಗೊಂಡು ಶಿವಯೋಗ ಪಡೆದವರು. ಅವರ ಆಧ್ಯಾತ್ಮ ನಿಷ್ಠೆಯ ನಿದರ್ಶನವಾಗಿ ಜಡಿಯಪ್ಪನ ಕೊಳ್ಳ ಎಂಬ ತಾಣವು ಅಲ್ಲಿ ಇದೆ. ಅವರು ಬಯಲಾದುದು ಅಲ್ಲಿಯೆ. ಈ ವ್ಯಕ್ತಿ ತಮ್ಮ ಜೀವಿತ ಕಾಲದ ಅಂತ್ಯದ ದಿನಗಳಲ್ಲಿ ದೇಶದ ನಾನಾ ಭಾಗಗಳಲ್ಲಿ ಸಂಚರಿಸಿ ಮಹಾತ್ಮರನ್ನು ಸಂದರ್ಶಿಸಿ ಪುನೀತರಾಗುವ ಮಹೋದ್ದೇಶದಿಂದ ಹೊರಟರು. ಹಾಗೆ ಸಂಚಾರ ಮಾಡುತ್ತ ಶಿವಯೋಗಿ ಗುರುಪಾದ ಸ್ವಾಮಿಗಳ ಹೆಸರು ಕೇಳಿ ಬಾಗಲಕೋಟೆಯ ಮಾರ್ಗವಾಗಿ ಬಬಲೇಶ್ವರಕ್ಕೆ ಬಂದರು. ಅವರು ಬರುವ ದಿನ ಗುರುಪಾದ ಸ್ವಾಮಿಗಳು ಮಠದಲ್ಲಿ ಗೌಡರು, ಶಾನಭೋಗರು ಮೊದಲಾದ ಪ್ರಮುಖ ಭಕ್ತಾದಿಗಳೊಂದಿಗೆ ಮಾತನಾಡುತ್ತ ಕುಳಿತಿರುವಾಗ ಅವರ ದಿವ್ಯ ದೃಷ್ಟಿಗೆ ಅಂದು ಮಹಾತ್ಮರೊಬ್ಬರು ಅಲ್ಲಿಗೆ ಬರುವರೆಂಬ ಅರಿವಾಯಿತು. ಮಾತನಾಡು ತ್ತಿದ್ದವರು ಇದ್ದಕಿದ್ದಂತೆಯೇ ಎದ್ದು, "ಕಾಖಂಡಿಕಿ ದಾರಿಯಲ್ಲಿ ಜ್ಯೋತಿಯೊಂದು ಬರುತ್ತಿದೆ, ಬರಮಾಡಿಕೊಳ್ಳೋಣ ಬನ್ನಿರಿ" ಎಂದು ಆ ಮಾರ್ಗವಾಗಿ ಭಕ್ತಾದಿ ಗಳೊಂದಿಗೆ ನಡೆದರು. ಕಾಖಂಡಿಕಿ ಇರುವುದು ಬಬಲೇಶ್ವರದಿಂದ ಆರು ಮೈಲು ದೂರದಲ್ಲಿ. ಬಬಲೇಶ್ವರದಿಂದ ಒಂದು ಮೈಲ ಹೋಗುವುದರೊಳಗೆ ವೃದ್ಧ ಜಂಗಮ ಜಡಿಯಪ್ಪನವರು ಬಬಲೇಶ್ವರದ ಹಾದಿ ಹಿಡಿದು ಬರುತ್ತಿರುವುದು ಗೋಚರವಾ ಯಿತು. ಅವರ ಸಮಾಗಮ ತುಂಬ ಪರಿಚಿತವೆಂಬಂತೆ ಸಹಜವಾಗಿ ಕೂಡಿತು. ಪರಸ್ಪರ ಆಲಿಂಗಿಸಿ ಬಹುದಿನಗಳ ನಂತರ ಕಂಡ ಪರಿಚಿತರೆಂಬಂತೆ ಮಾತನಾಡಿದರು. ಜಡಿಯಪ್ಪನವರು ಗುರುಪಾದ ಸ್ವಾಮಿಗಳ ಜೊತೆ ಬಬಲೇಶ್ವರಕ್ಕೆ ಬಂದರು.

ಮೂರು ದಿನಗಳ ಕಾಲ ಮಠದಲ್ಲೇ ಬಿಡಾರ ಮಾಡಿದರು. ಅವರ ಪೂಜೆ–ಪ್ರಸಾದ ಗಳಿಗೆ ಎಲ್ಲ ರೀತಿಯ ವ್ಯವಸ್ಥೆಯಾಯಿತು. ಇಬ್ಬರು ಮಹಾತ್ಮರ ಸಮಾಗಮ ಅನೇಕ ಆಧ್ಯಾತ್ಮ ವಿಚಾರಗಳ ಚರ್ಚೆಗೆ ಅನುವು ಮಾಡಿಕೊಟ್ಟಿತು. ಮೂರು ದಿನಗಳು ನಿರಂತರವಾಗಿ ನಡೆದ ಚರ್ಚೆ, ವಿಚಾರ ವಿನಿಮಯ ಬಬಲೇಶ್ವರ ಆಸ್ತಿಕ ಜನರಿಗೆ ಆಧ್ಯಾತ್ಮ ವಿಚಾರಗಳ ರಸದೂಟವನ್ನೇ ಒದಗಿಸಿದವು.

"ವೀರಶೈವ ದರ್ಶನವಾದ ಷಟ್‌ಸ್ಥಲ ಶಾಸ್ತ್ರವೂ, ಸಿದ್ಧಾಂತವೂ ಆಗಿ, ಅದು ಸಾಧನ ಮಾರ್ಗವಾಗಿದೆ. ಶಿವಯೋಗ ಅಥವಾ ಲಿಂಗಾಂಗ ಸಾಮರಸ್ಯವೇ ಅದರ ಪರಮ ಸಿದ್ಧಿ" ಎಂಬ ಮಹಾ ತತ್ವವನ್ನು ಗುರುಪಾದ ಸ್ವಾಮಿಗಳು ಜಡಿಯಪ್ಪನವರಿಗೆ ಮನವೊಪ್ಪುವಂತೆ ವಿವರಿಸಿದರು. ಅವರ ವಿವರಣೆಯಿಂದ ಸಂತೃಪ್ತರಾದ ಜಡಿಯಪ್ಪ ನವರು ಬಬಲೇಶ್ವರ ಮಠದ ಸಂಪರ್ಕದಿಂದ ತಮಗಾದ ಲಾಭವನ್ನು ಮನಸಾರೆ ವ್ಯಕ್ತಪಡಿಸಿದರು. ಜಡಿಯಪ್ಪನವರೂ ಸಹ ಶಿವಯೋಗದ ಪರಮಸಿದ್ಧಿಯನ್ನು ಪಡೆಯುವುದರಲ್ಲಿದ್ದ ಮಹಾಜೀವವಾದುದರಿಂದ ಅಂತಹ ಸೂಕ್ಷ್ಮ ವಿಚಾರಗಳನ್ನು ಗ್ರಹಿಸುವುದು ಕಷ್ಟವಾಗಲಿಲ್ಲ. ಜೊತೆಗೆ ಶಿವಗೀತೆಗಳನ್ನು ಭಾವಪೂರ್ಣವಾಗಿ ಹಾಡುವ ಶಾರೀರವೂ ಅವರಿಗೆ ಸಿದ್ಧಿಸಿತ್ತು. ಬೆಂಗಳೂರಿನ ಸರ್ಪಭೂಷಣ ಶಿವ ಯೋಗಿಗಳ ಕೈವಲ್ಯದ ಕೆಲವು ಪದಗಳನ್ನು ಸೊಗಸಾಗಿ ಹಾಡಿ ಬಬಲೇಶ್ವರದ ಗುರು ಮತ್ತು ಭಕ್ತ ವೃಂದವನ್ನು ಭಕ್ತಿಗಂಗೆಯಲ್ಲಿ ಮೀಯಿಸಿದರು.

ಹೀಗೆ ಬಬಲೇಶ್ವರದ ಮಠ ಕ್ರಮೇಣ ತನ್ನ ಪ್ರಖ್ಯಾತಿಯನ್ನು ನಾಡಿನ ಹತ್ತು ಕಡೆಗೂ ಪಸರಿಸಿತು. ಮೇಲ್ಮಟ್ಟದ ವಿಚಾರಗಳಲ್ಲಿ ಆಸಕ್ತರಾದ ಮಹಾತ್ಮರು ಇಲ್ಲಿಗೆ ಬಂದು ಹೋಗುವುದು ಸಾಮಾನ್ಯವಾಯಿತು. ಇದಕ್ಕೆ ಮೂಲ ಕಾರಣ ಮಠಾಧಿ ಪತಿಗಳಾದ ಶ್ರೀ ಗುರುಪಾದ ಸ್ವಾಮಿಗಳು ಇಹ–ಪರ ಚಿಂತನೆಗಳ ಬಗ್ಗೆ ಸಂಪಾದಿಸಿ ಕೊಂಡಿದ್ದ ಪ್ರಭುತ್ವ ಹಾಗೂ ಅಂತಹ ವಿಚಾರಗಳ ವಿನಿಮಯ ಮತ್ತು ಚರ್ಚೆಗಳಲ್ಲಿ ಬೆಳೆಸಿಕೊಂಡಿದ್ದ ಆಸಕ್ತಿ.

## ದಿವ್ಯ ದೃಷ್ಟಿ :

ಅಥಣಿಯ ಮುರುಗೇಂದ್ರ ಮಹಾಸ್ವಾಮಿಗಳು ಚಿಕ್ಕವರಿದ್ದಾಗ ಒಮ್ಮೆ ಬಬಲೇಶ್ವರದ ಗಚ್ಚಿನ ಮಠದಲ್ಲಿ ನಡೆದ ಸಮಾರಂಭಕ್ಕೆ ಆಗಮಿಸಿದ್ದರು. ಅಥಣಿ ಯಿಂದ ಬಂದವರೆಲ್ಲ ಮಠಕ್ಕೆ ಆಗಮಿಸಿ ಗುರುಪಾದ ಸ್ವಾಮಿಗಳ ಪಾದ ಮುಟ್ಟಿ ನಮಸ್ಕರಿಸಿದರು. ಅವರ ಸಂಗಡ ಬಂದ ಓರ್ವ ಚಿಕ್ಕ ಬಾಲಕನೂ ಸ್ವಾಮಿಗಳಿಗೆ ನಮಸ್ಕರಿಸಿದನು. ಆ ಬಾಲಕನನ್ನು ನೋಡಿದ ಕೂಡಲೇ ಸ್ವಾಮಿಗಳಿಗೆ ತಮ್ಮ ದಿವ್ಯ ಚಕ್ಷುವಿನ ಮುಂದೆ ಮಹಾವ್ಯಕ್ತಿಯೊಂದು ಹಾದು ಹೋದಂತಾಯಿತು. ಬಾಲಕನ ತಲೆಯ ಮೇಲೆ ಕೈಯಿಟ್ಟು ಮನಸಾರೆ ಹರಸಿದರು. ಜೊತೆಗೆ ಬಂದಿದ್ದ ಹಿರಿಯ

ವ್ಯಕ್ತಿಗಳ ಸಂಗಡ, "ಇವನೊಬ್ಬ ಮಹಾಶಿವಯೋಗಿಯಾಗಿ ಭಕ್ತ ಜನಕ್ಕೆ ಬೆಳಕು ನೀಡಿ ಸಮಾಜೋದ್ಧಾರನಾಗುತ್ತಾನೆ" ಎಂದು ನುಡಿದರು. ಅವರ ಮಾತು ಸುಳ್ಳಾಗಲಿಲ್ಲ. ಮುಂದೆ ಆ ಬಾಲಕ ಅಥಣಿಯ ಮುರಗೇಂದ್ರ ಮಹಾಶಿವಯೋಗಿ ಯಾಗಿ ಪಾವನ ಜೀವನ ನಡಿಸಿ ಪ್ರಖ್ಯಾತನಾದ.

ಗುರುಪಾದ ಸ್ವಾಮಿಗಳ ವಯಸ್ಸು ಕಳೆದಂತೆ ಅವರ ನುಡಿ ಮಂತ್ರವಾಗತೊಡ ಗಿತು. ವ್ಯಕ್ತಿಯ ಮುಖ ನೋಡಿ ಭವಿಷ್ಯ ನುಡಿಯುವ ಶಕ್ತಿ ಅವರಿಗೆ ಸಿದ್ಧಿಸ ತೊಡಗಿತು.

**ಬಬಲಾದಿಮಠಕ್ಕೆ ಭೆಟ್ಟಿ :**

ಗುರುಪಾದ ಸಾಮಿಗಳು ಒಮ್ಮೆ ಕಲಾದಗಿಯ ಕಡೆಗೆ ಪ್ರವಾಸಕ್ಕೆ ಹೋದವರು ಸಂಚಾರ ಮುಗಿಸಿ ಭಕ್ತ ವೃಂದದೊಂದಿಗೆ ಬಬಲೇಶ್ವರದ ಕಡೆಗೆ ಹೊರಟಿದ್ದರು. ಮಧ್ಯದಲ್ಲಿ ಬಬಲಾದಿಯ ಹತ್ತಿರ ಗುರುಪಾದ ಸ್ವಾಮಿಗಳು ಹೋಗುತ್ತಿದ್ದುದನ್ನು ಕಂಡ ಅಲ್ಲಿಯ ಸಿದ್ಧಪುರುಷರಾದ ಸದಾಶಿವಸ್ವಾಮಿಗಳು ಅವರಕಡೆಗೆ ಬಂದು "ಕಳ್ಳ ಹೇಳದೆ ಹೊರಟಿದ್ದಾನೆ" ಎಂದು ನುಡಿದರು. ಆ ಮಾತು ಲಾಘವದಿಂದ ಆಡಿದುದಲ್ಲ, ಗುರುಪಾದ ಸ್ವಾಮಿಗಳನ್ನು ಅವರ ವ್ಯಕ್ತಿತ್ವ ವರ್ಚಸ್ಸುಗಳನ್ನು ಚೆನ್ನಾಗಿ ಬಲ್ಲವರಾಗಿ ಆಡಿದ ಮಮತೆಯ ನುಡಿ. ಆ ಕಾರಣದಿಂದಲೇ ಅವರಾಡಿದ ಮಾತು ಗುರುಪಾದ ಸ್ವಾಮಿಗಳಿಗೆ ಬೇಸರವನ್ನುಂಟು ಮಾಡಲಿಲ್ಲ. ಪ್ರತಿಯಾಗಿ ಅವರು ಮುಗುಳ್ನಗುತ್ತ "ಕಳ್ಳನ ಹಾದಿ ಕಳ್ಳನಿಗಲ್ಲದೆ ಬೇರೆ ಯಾರಿಗೆ ಹೇಗೆ ತಿಳಿಯಬೇಕು ?" ಎಂದು ಹೇಳಿ ಅವರ ಬಳಿ ಬಂದರು. ಪರಸ್ಪರ ಮಾತುಕತೆಗಳಾದವು. ಸದಾಶಿವ ಸ್ವಾಮಿಗಳು ಗುರುಪಾದ ಸ್ವಾಮಿಗಳನ್ನು ತಮ್ಮ ಮಠಕ್ಕೆ ಕರೆದುಕೊಂಡು ಹೋಗಿ ತಕ್ಕ ರೀತಿಯಲ್ಲಿ ಸತ್ಕರಿಸಿದರು. ಕೆಲವು ಘಳಿಗೆ ಮಠದಲ್ಲಿ ವಿಶ್ರಮಿಸಿಕೊಂಡು ಮುಂದೆ ಬಬಲೇಶ್ವರ ಕಡೆಗೆ ಪ್ರಯಾಣ ಬೆಳೆಸಿದರು.

ಬಬಲಾದಿ ಮಠವು ಒಂದು ಸಿದ್ಧಾಟಿಕೆಯ ಮಠ. ಆ ಮಠದ ಸದಾಶಿವ ಸ್ವಾಮಿ ಗಳು ಆ ಕಾಲಕ್ಕೆ ಒಳ್ಳೆಯ ಖ್ಯಾತಿ ಪಡೆದವರು. ಈ ಮಠದ ಒಂದು ಶಾಖೆಯು ಸಾರವಾಡದಲ್ಲಿದ್ದು ಅಲ್ಲಿ ಜಕ್ಕಯ್ಯ ಸ್ವಾಮಿಗಳೆಂಬುವರು ಮೂಲ ಮಠದ ಪರಂಪರೆ ಯನ್ನು ಬೆಳಗಿ ಬಯಲಾದವರು.

ಇಂತಹ ಮಠ ಮಾನ್ಯಗಳ ಮತ್ತು ಮಹಾಪುರುಷರ ಬಗ್ಗೆ ಶ್ರೀ ಗುರುಪಾದ ಸ್ವಾಮಿಗಳಿಗೆ ಅಗಾಧವಾದ ಆಸಕ್ತಿ; ಅನನ್ಯವಾದ ಗೌರವ. ಅವರೆಂದೂ ಇಂತಹ ಕೇಂದ್ರಗಳ ಬಗೆಗೆ ಉಪೇಕ್ಷೆ ಮಾಡಿದವರಲ್ಲ.

ಬಬಲೇಶ್ವರದಿಂದ ಐದು ಮೈಲ ದೂರವಿರುವ ಹರಳೇಶ್ವರ ಒಂದು ಪುರಾತನ ಪುಣ್ಯ ಕ್ಷೇತ್ರ. ಅಲ್ಲಿ ಜನವಸತಿ ಇಲ್ಲ. ಪೂರ್ವದಲ್ಲಿ ಚನ್ನಬಸವಣ್ಣನವರು ಕಲ್ಯಾಣ

ದಿಂದ ಉಳವಿ ಕಡೆಗೆ ಹೊರಟಾಗ ಇಲ್ಲಿ ನಿಂತು ಪೂಜಾನುಷ್ಠಾನಗೈದು ಹೋದರೆಂದು ನಂಬಿಕೆ. ಮಳೆಗಾಲ, ಬಿಸಿಲು, ಛಳಿಗಾಲವೆನ್ನದೆ ವರ್ಷದ ಎಲ್ಲಾ ಕಾಲದಲ್ಲೂ ಬತ್ತದೇ ಇರುವ ಜಲ ಸಮೃದ್ಧಿ ಇಲ್ಲಿನ ಮಹಿಮೆಗೆ ಮತ್ತಷ್ಟು ಮಹತ್ವವನ್ನು ಕೊಟ್ಟಿದೆ. ಹರಳೇಶ್ವರ ಚಿಕ್ಕಗುಂಡವೆಂದು ಪ್ರಸಿದ್ಧವಾದ ಈ ತೀರ್ಥಕ್ಷೇತ್ರದ ಮಹಿಮೆ ಆ ಭಾಗಕ್ಕೆ ಖ್ಯಾತಿ ಪಡೆದಿದೆ.

## ಪ್ರಸಾದ ಮಹಿಮೆ :

ಒಂದು ಸಲ ಗುರುಪಾದ ಸ್ವಾಮಿಗಳು ತಮ್ಮ ಶಿಷ್ಯವೃಂದದೊಂದಿಗೆ ಹರಳೇಶ್ವರ ಕ್ಷೇತ್ರಕ್ಕೆ ಹೋದರು. ಬಹು ದಿನಗಳಿಂದ ಕ್ಷೇತ್ರದ ಬಗ್ಗೆ ಕೇಳಿ ಮನಸ್ಸಿನಲ್ಲಿ ಮೂಡಿದ್ದ ಆ ಮಹಿಮಾ ತಾಣವನ್ನು ಕಂಡ ಸ್ವಾಮಿಗಳಿಗೆ ಅನಿರ್ವಚನೀಯವಾದ ಆನಂದವಾಯಿತು. ಅವರು ಇತ್ತೀಚೆಗೆ ಅಂತಹ ಪುಣ್ಯ ಕ್ಷೇತ್ರಗಳಿಗೆ ವ್ಯವಸ್ಥಿತವಾದ ಪರಿಸರಗಳೊಡನೆ ಹೊರಡುತ್ತಿದ್ದರು. ಅಂತೆಯೇ ಪೂಜೆ – ಪ್ರಸಾದಗಳನ್ನು ತೀರಿಸಿಕೊಂಡು ಹೋಗುವ ಉದ್ದೇಶದಿಂದಲೇ ಅಲ್ಲಿಗೂ ಹೋಗಿದ್ದರು. ಜನಸಂಪರ್ಕದಿಂದ ದೂರವಿದ್ದು ಪ್ರಾಕೃತಿಕಸೌಂದರ್ಯದ ಹಿನ್ನೆಲೆಯಲ್ಲಿ ಕಂಗೊಳಿಸುವ ತೀರ್ಥಕ್ಷೇತ್ರದಲ್ಲಿ ಮಿಂದು ಶಿವಪೂಜೆ ಗೈದರು.

ಸ್ವಾಮಿಗಳ ಜೊತೆ ಬಂದಿದ್ದ ಭಕ್ತವೃಂದ ಅಂದಿನ ಪ್ರಸಾದಕ್ಕಾಗಿ ಸೀಮಿತ ಪ್ರಮಾಣದ ಬುತ್ತಿಯನ್ನು ತಂದಿತ್ತು. ಸಾಮಿಗಳು ಹರಳೇಶ್ವರ ತೀರ್ಥಕ್ಕೆ ಬಂದಿರುವ ಸುದ್ದಿ ಸುತ್ತಲಿನ ಜನರಿಗೆ ಹರಡುವುದು ತಡವಾಗಲಿಲ್ಲ. ಇನ್ನೇನು ಸ್ವಾಮಿಗಳು ಶಿಷ್ಯರೊಡನೆ ಪ್ರಸಾದ ಸ್ವೀಕರಿಸಲು ಕುಳಿತುಕೊಳ್ಳಬೇಕೆನ್ನುವ ಹೊತ್ತಿಗೆ ಜನರು ಮುರುಕಳಿಸಿ ಬಂದು ಸೇರಿದರು. ತೀರ್ಥಕ್ಷೇತ್ರದಲ್ಲಿ ಮಿಂದು, ಪೂಜಾ ಕಾರ್ಯ ಮುಗಿಸಿ ಪ್ರಸಾದ ಸ್ವೀಕಾರ ವೇಳೆಗೆ ಬಂದ ಜನಸ್ತೋಮವನ್ನು ಕಂಡು ಸ್ವಾಮಿಗಳಿಗೆ ಒಂದು ಘಳಿಗೆಯ ಮಟ್ಟಿಗೆ ಮನಸ್ಸಿನಲ್ಲಿ ಆತಂಕ ತಲೆಹಾಕಿದರೂ ಮರುಕ್ಷಣದಲ್ಲೇ ಅದು ಮಾಯವಾಗಿ ಇರುವ ಪ್ರಸಾದವನ್ನೇ ಬಂದಿರುವವರಿಗೆಲ್ಲರಿಗೂ ಬಡಿಸುವ ಪ್ರೇರಣೆಯಾಯಿತು. ಅದರಂತೆ ಭಕ್ತರಿಗೆ ಸೂಚನೆ ನೀಡಿದರು. ಅವರಿಗೆ ಸ್ವಾಮಿಗಳ ಈ ನಿಲುವು ಅರ್ಥವಾಗಲಿಲ್ಲ. ಆದರೂ ನಿರ್ದೇಶನವನ್ನು ಅನುಸರಿಸಿದರು. ಅದೇನು ಮಹಿಮೆಯೋ ಹತ್ತಾರು ಜನರಿಗೆಂದು ತಂದಿದ್ದ ಪ್ರಸಾದ ನೂರಾರು ಜನರಿಗಾಗಿ ಬಡಿಸಲು ಮೀರುವಷ್ಟು ಅಕ್ಷಯವಾಗುತ್ತ ಬಂದಿತು. ಇದು ಶ್ರೀ ಗುರುಪಾದ ಸ್ವಾಮಿಗಳ ಮತ್ತೊಂದು ಮಹಿಮೆಯಾಯಿತು. ವಿಷಯ ಕೇಳಿದ ಮೇಲೆ ಅವಾಕ್ಕಾದ ಭಕ್ತ ಜನರು ಮೂಕ ವಿಸ್ಮಯರಾದರು. ಅವರವರ ಊರುಗಳಿಗೆ ತಲುಪುವ ಹಾದಿಯಲ್ಲಿ ಅಂದು ಸ್ವಾಮಿಗಳ ಪ್ರಸಾದದ ಮಹಿಮೆಯನ್ನು ಮನಸಾರೆ ಕೊಂಡಾಡಿದರು.

**ಮೂಕಿ ಮಾತನಾಡಿದಳು :**

ಬಬಲೇಶ್ವರದಲ್ಲಿ ಕಬ್ಬಿನ ಎಂಬ ಉಪನಾಮದ ಮನೆತನವಿದೆ. ಗುರುಪಾದ ಸ್ವಾಮಿಗಳ ಕಾಲದಿಂದಲೂ ಆ ಮನೆತನವಿದ್ದು ಇತ್ತೀಚೆಗೂ ಆ ವಂಶಸ್ಥರು ಬಬಲೇಶ್ವರದಲ್ಲಿರುವರು. ಈ ಮನೆತನದ ಬಸಲಿಂಗಮ್ಮ ಎಂಬಾಕೆ ಹುಟ್ಟು ಮೂಕಿ. ಈ ವಿಷಯ ಎಲ್ಲರಿಗೂ ತಿಳಿದದ್ದು. ಹುಟ್ಟು ಮೂಕಿಯಾದವಳ ಬಾಳು ಇನ್ನೆಷ್ಟು ಹರ್ಷವಾಗಿರಬಹುದು? ತನ್ನ ಕರ್ಮವೆಂಬ ನಂಬಿಕೆಯಿಂದ ಆಕೆಯೂ ಮನಸ್ಸಿಗೆ ಸಮಾಧಾನ ತಂದುಕೊಂಡು ಬದುಕಬೇಕೆಂಬ ಆಸೆಯನ್ನೇ ಕಳೆದುಕೊಂಡು ಅಂತೂ ಜೀವಿಸಿದ್ದಳು.

ಹೀಗಿರಲು ಒಂದು ದಿನ ಗುರುಪಾದ ಸ್ವಾಮಿಗಳು ಬಸಲಿಂಗಮ್ಮನ ಮನೆಯ ಮುಂದೆ ಹಾದು ಹೋಗುವಾಗ, ಅವರಿಗೆ ಅದೇನು ಪ್ರೇರಣೆಯಾಯಿತೊ ಒಂದು ಹೆಜ್ಜೆ ನಿಂತು "ಬಸಲಿಂಗವ್ವ ಹೊರಗೆ ಬಾ" ಎಂದು ಸಹಜವಾಗಿ ಕರೆದರು. ಈ ಮಾತು ಒಳಗಿದ್ದ ಬಸಲಿಂಗಮ್ಮನಿಗೆ ಕೇಳಿಸಿದುದೇ ತಡ ಮಾರುತ್ತರವಾಗಿ "ಬಂದೆ ಅಪ್ಪಾ" ಎಂದು ಲಗುಬಗೆಯಿಂದ ಹೊರಗೆ ಬಂದಳು. ಬಾಗಿಲ ಬಳಿ ನಿಂತಿದ್ದ ಸ್ವಾಮಿಗಳನ್ನು ಕಂಡ ಆಕೆ ಬೆಕ್ಕಸ ಬೆರಗಾಗಿ ಪಾದಗಳಿಗೆ ನಮಸ್ಕರಿಸಿದಳು. ಸುತ್ತ ನಿಂತ ಜನರು ಈ ಅತಿಮಾನುಷ ಘಟನೆಯನ್ನು ನೋಡಿ ತಮ್ಮ ಕಣ್ಣನ್ನೇ ತಾವು ನಂಬದಾದರು. ಸ್ವಾಮಿಗಳು ಆಕೆಯನ್ನು ಒಮ್ಮೆ ಕೃಪಾದೃಷ್ಟಿಯಿಂದ ನೋಡಿ ಹರಸಿ ಮುಂದೆ ಹೊರಟು ಹೋದರು.

ಈ ಸುದ್ದಿ ಊರಿನಲ್ಲಿ ಹರಡುವುದು ತಡವಾಗಲಿಲ್ಲ. ಸ್ವಾಮಿಗಳ ಮಹಿಮಾವಳಿಯನ್ನು ಕೊಂಡಾಡಿದ ಜನರು ಅಂತಹ ಮಹಾಪುರುಷರು ಬದುಕಿರುವ ಪರಿಸರದಲ್ಲಿ ತಾವು ಬದುಕಿರುವುದು ಪೂರ್ವ ಜನ್ಮದ ಸುಕೃತವೆಂದೇ ಭಾವಿಸಿದರು.

**ಸತ್ಯದ ಸದುಪದೇಶ :**

ಬಬಲೇಶ್ವರದ ಬಳಿಯಿರುವ ತಿಗಣಿಬಿದರಿ ಎಂಬದೊಂದು ಚಿಕ್ಕ ಗ್ರಾಮ. ದೇವನಗೌಡರು ಆ ಊರಿನ ಗೌಡರು; ಹಿರಿಯ ಮುಖಂಡರು. ದೊಡ್ಡ ಮನೆತನದ ಅಂತಸ್ತು. ಐಶ್ವರ್ಯ, ಗೌರವಗಳ ಜೊತೆಗೆ ಭಗವದ್ಭಕ್ತಿ ಸಚ್ಚಾರಿತ್ರ್ಯಗಳನ್ನು ರೂಢಿಸಿಕೊಂಡಿದ್ದ ಗೌಡರ ವರ್ಚಸ್ಸು ಮತ್ತಷ್ಟು ಹೆಚ್ಚಿತ್ತು.

ದೇವನಗೌಡರು ಬಬಲೇಶ್ವರ ಮಠಕ್ಕೆ ನಡೆದುಕೊಳ್ಳುತ್ತಿದ್ದ ಭಕ್ತರಲ್ಲೊಬ್ಬರು. ಯಾವ ಕೆಲಸ ಕಾರ್ಯಗಳಿಗೆ ಕೈಹಾಕುವುದಕ್ಕೂ ಮುನ್ನ ಸ್ವಾಮಿಗಳನ್ನು ಕಂಡು, ಅವರ ಕೃಪಾಶೀರ್ವಾದ ಪಡೆಯುತ್ತಿದ್ದುದು ಅವರ ಪರಿಪಾಠವಾಗಿತ್ತು. ಸ್ವಾಮಿಗಳ ಉಪದೇಶ, ನಿರ್ದೇಶಗಳಲ್ಲಿ ಗೌಡರಿಗೆ ಅಚಲವಾದ ನಂಬಿಕೆ; ಶ್ರದ್ಧೆ.

ಸ್ವಾಮಿಗಳ ವ್ಯಕ್ತಿತ್ವವನ್ನು ಹತ್ತಿರದಿಂದ ಹತ್ತಾರು ವರ್ಷಗಳಿಂದ ಚೆನ್ನಾಗಿ ಅರಿತಿದ್ದ ಗೌಡರಿಗೆ ಸ್ವಾಮಿಗಳಿಂದ ಉಪದೇಶವನ್ನು ಪಡೆಯಬೇಕೆಂಬ ಹಂಬಲ ಕಾಡುತ್ತಿತ್ತು. ಮಠಕ್ಕೆ ಹೋದಾಗಲೆಲ್ಲ, ಸ್ವಾಮಿಗಳು ಶಾಂತ ಸ್ಥಿತಿಯಲ್ಲಿದ್ದಾಗ ಆ ಬಗ್ಗೆ ಪ್ರಸ್ತಾಪ ಮಾಡುತ್ತಿದ್ದರು. ಗೌಡರ ಬೇಡಿಕೆಗೆ ಸ್ವಾಮಿಗಳು ಇಲ್ಲವೆನ್ನುತ್ತಿರಲಿಲ್ಲ. ಆದರೂ ಕೇಳಿದಾಗಲೆಲ್ಲ, "ಮುಂದೆ ನೋಡೋಣ ಸ್ವಲ್ಪ ಸಾವಕಾಶ ಮಾಡಿರಿ" ಎಂದು ಹೇಳುತ್ತಿದ್ದರು. ಗೌಡರೂ ಸುಮ್ಮನಾಗುತ್ತಿದ್ದರು. ಹೀಗೆ ಕೆಲವು ವರ್ಷಗಳು ಕಳೆದವು. ಗೌಡರು ಮಾತ್ರ ಆಸಕ್ತಿಯನ್ನು ಕಳೆದುಕೊಳ್ಳಲಿಲ್ಲ. ಎಂದಿನ ಉತ್ಸಾಹ–ನಂಬಿಕೆಗಳಿಂದ ಮಠಕ್ಕೆ ನಡೆದುಕೊಳ್ಳುತ್ತಿದ್ದರು.

ಒಂದು ದಿನ ಗುರುಪಾದಸ್ವಾಮಿಗಳು ದೇವನಗೌಡರನ್ನು ಮಠಕ್ಕೆ ಬರುವಂತೆ ಕರೆ ಕಳುಹಿಸಿದರು. ತಾವೇ ಹೇಳಿಕಳಿಸಿರುವಾಗ ವಿಶೇಷವಿರಬೇಕೆಂದು ತಿಳಿದ ಗೌಡರು ಅತ್ಯಂತ ಸಂತೋಷದಿಂದ ಬಂದರು. ತಮ್ಮ ಊಹೆಯಂತೆ ಸ್ವಾಮಿಗಳು ಆ ದಿನ ತಾವು ಬಹುದಿನಗಳಿಂದ ಕೇಳುತ್ತಿದ್ದ ಉಪದೇಶವನ್ನು ನೀಡಲು ನಿರ್ಧರಿಸಿದ್ದರು. ಸ್ವಾಮಿಗಳ ಈ ನಿರ್ಧಾರ ಗೌಡರಿಗೆ ಅಮಿತವಾದ ಆನಂದವನ್ನುಂಟು ಮಾಡಿತು. ಆ ದಿನ ಮಠದಲ್ಲಿ ಗೌಡರು ಮತ್ತು ಸ್ವಾಮಿಗಳ ಹೊರತಾಗಿ ಹೊರಗಿನ ಬೇರೆ ಯಾರೂ ಇರಲಿಲ್ಲ, ಸ್ವಾಮಿಗಳು ಮಾನವ ಜೀವನದ ಮಹತ್ತರವಾದ ಜವಾಬ್ದಾರಿಗಳನ್ನು ವಿವರಿಸಿ, ದೈವ ಸೃಷ್ಟಿಯಲ್ಲಿ ಉನ್ನತ ಜೀವಿಯಾದ ಮಾನವನ ಜವಾಬ್ದಾರಿಗಳನ್ನು ನಿರ್ವಹಿಸುವಲ್ಲಿ ಎಂತಹ ಎಚ್ಚರ ಸಮಾಧಾನಗಳನ್ನು ಹೊಂದಿರಬೇಕೆಂಬ ಅರಿವನ್ನು ಮನದಟ್ಟು ಮಾಡಿದರು. ವಿವೇಕ ರಹಿತವಾದ ನಿರ್ಣಯಗಳು ಎಂತಹ ಅಕಾರ್ಯಕ್ಕೆ ಎಡೆಮಾಡಿಕೊಟ್ಟು ಅನರ್ಥಕ್ಕೆ ಕಾರಣವಾಗುತ್ತವೆ ಎಂಬುದನ್ನು ತಿಳಿ ಹೇಳಿದರು. ಮುಂದುವರಿದು ಸ್ವಾಮಿಗಳು ಸತ್ಯಸಂಧ ಬದುಕು ತನಗಷ್ಟೇ ಅಲ್ಲ ಪರಿಸರಕ್ಕೂ ಎಷ್ಟು ಶೋಭೆ ತರುತ್ತದೆ ಎಂಬುದನ್ನು ಸ್ಪಷ್ಟಪಡಿಸಿದ ಮೇಲೆ ಗೌಡರನ್ನು ಕುರಿತು, "ನೀವು ಕೇಳುತ್ತಿದ್ದಂತೆ ನಾನು ನಿಮಗೆ ನೀಡಬೇಕೆಂದಿರುವ ಉಪದೇಶವೆಂದರೆ, ಯಾವ ಸಂದರ್ಭದಲ್ಲೂ ಸುಳ್ಳಾಡದಿರಿ. ಇದು ಜೀವನದಲ್ಲಿ ಶ್ರೇಯಸ್ಸನ್ನು ತರುವ ಮಹಾ ಸೂತ್ರ" ಎಂದು ಹೇಳಿದರು.

ಸ್ವಾಮಿಗಳ ಒಂದೊಂದು ನುಡಿಯನ್ನು ಕಡು ನಿಷ್ಠೆಯಿಂದ ಆಲಿಸುತ್ತಿದ್ದ ಗೌಡರು ಸ್ವಾಮಿಗಳ ಉಪದೇಶವನ್ನು ಶಿರಸಾವಹಿಸಿ ಸ್ವೀಕರಿಸಿ ಚ್ಯುತಿಬರದಂತೆ ಪಾಲಿಸುವುದಾಗಿ ಆಶ್ವಾಸನೆ ನೀಡಿ ಅಡ್ಡಬಿದ್ದರು. ಸ್ವಾಮಿಗಳು ಕೈಹಿಡಿದೆತ್ತಿ ಆಶೀರ್ವದಿಸಿ ಬೀಳ್ಕೊಟ್ಟರು.

ಮೊದಲೇ ಪಕ್ವವಾಗಿದ್ದ ಗೌಡರ ಮನಸ್ಸಿನಲ್ಲಿ ಸ್ವಾಮಿಗಳ ಉಪದೇಶದ ಬೀಜ ನಾಟಿತು. ಅಂದಿನಿಂದ ಅವರು ತಮ್ಮ ಜೀವನದಲ್ಲಿ ಮತ್ತಷ್ಟು ನಿಷ್ಠೆ, ನಿಯಮಗಳನ್ನು ರೂಢಿಸಿಕೊಳ್ಳತೊಡಗಿದರು.

ದೇವನಗೌಡರಿಗೆ ವಯಸ್ಸಾಗುತ್ತ ಬಂದಂತೆ ಸಾಂಸಾರಿಕ ಜವಾಬ್ದಾರಿಗಳನ್ನು ಕಳಕೊಳ್ಳತೊಡಗಿದರು. ಗ್ರಾಮದ ಗೌಡಿಕೆಯನ್ನು ಹಿರಿಯ ಮಗ ಭೀಮನಗೌಡನಿಗೆ ವಹಿಸಿಕೊಟ್ಟಿದ್ದರು. ಆತ ಇನ್ನೂ ಬಿಸಿ ರಕ್ತದ ಯುವಕ. ದುಡುಕು ಜಾಸ್ತಿ. ಜೊತೆಗೆ ಅಧಿಕಾರದ ದರ್ಪ. ಹೀಗಾಗಿ ಒಮ್ಮೊಮ್ಮೆ ಆತನ ವರ್ತನೆ ಗ್ರಾಮದ ಜನತೆಗೆ ಸರಿಕಾಣುತ್ತಿರಲಿಲ್ಲ. ಆದರೂ ದೇವನಗೌಡರ ವ್ಯಕ್ತಿತ್ವದ ಹಿನ್ನೆಲೆಯಲ್ಲಿ ಆ ಕೊರತೆಗಳನ್ನು ಮರೆಯುತ್ತಿದ್ದರು.

ಒಮ್ಮೆ ಯಾವುದೋ ಕ್ಷುಲ್ಲಕ ಕಾರಣಕ್ಕಾಗಿ ಭೀಮನಗೌಡ ಓಲೇಕಾರನನ್ನು ಬಡಿಗೆಯಿಂದ ಹೊಡೆದ. ಗ್ರಹಚಾರವೆಂಬಂತೆ ಆ ಏಟಿಗೆ ಆತ ಸತ್ತೇ ಹೋದ. ಈ ಘಟನೆ ನಡೆದಾಗ ದೇವನಗೌಡರು ಹತ್ತಿರದಲ್ಲೇ ಇದ್ದರು. ಅಮಾನುಷ ವಾದ ಈ ದುಷ್ಕೃತ್ಯ ಗೌಡರಿಗೆ ಸಹಿಸಲಾರದ ವೇದನೆಯನ್ನುಂಟುಮಾಡಿತು. ಅವರು ಉಪದೇಶ ಪಡೆದ ಕೆಲ ದಿನಗಳಲ್ಲಿ ಈ ಘಟನೆ ಆದುದನ್ನು ಇಲ್ಲಿ ಸ್ಮರಿಸ ಬಹುದಾಗಿದೆ.

ಒಂದು ಕಡೆ ಮಗನ ಮೇಲಿನ ಮಮತೆಯ ಬಂಧನ. ಮತ್ತೊಂದು ಕಡೆ ಊರಿನ ಹಿತದೃಷ್ಟಿಯ ಸ್ಪಂದನ. ಹೀಗಾಗಿ ಅವರ ಮನಸ್ಸು ಡೋಲಾಯಮಾನ ಕ್ಕೊಳಗಾಯಿತು. ಸ್ವಾಮಿಗಳಲ್ಲಿ ಮನಸ್ಸಿನ ತಳಮಳವನ್ನು ನಿವೇದಿಸಿಕೊಂಡರು. ಮಾನವ ವಿವೇಕ ಶೂನ್ಯನಾದಾಗ ಆಗುವ ಮೃಗೀಯ ಕೃತ್ಯಗಳ ಬಗ್ಗೆ ದೀರ್ಘವಾಗಿ ವಿವರಿಸಿದ ಸ್ವಾಮಿಗಳು ಗೌಡರ ಮನಸ್ಸಿಗೆ ಶಾಂತಿ ತುಂಬಿದರು.

ಈ ದುರ್ಘಟನೆ ಸುಲಭದಲ್ಲಿ ಸುಮ್ಮನಾಗಲಿಲ್ಲ. ಸತ್ತವರ ಮನೆಯವರು ಸುಮ್ಮನಾದರೂ ಸುತ್ತಲಿನ ಜನ ಸುಮ್ಮನಿರುವುದಿಲ್ಲ. ತಿಗಣಿಬಿದರಿಯ ಜಹಗೀರು ದಾರರಿಗೂ ದೇವನಗೌಡರ ಮನೆಯವರಿಗೂ ಪೂರ್ವದಿಂದಲೂ ವೈಮನಸ್ಸಿತ್ತು. ದೇವನಗೌಡರ ಸಾತ್ವಿಕ ಸ್ವಭಾವ ಜಹಗೀರುದಾರರಿಗೆ ಹೊಟ್ಟೆಯುರಿಯುಂಟು ಮಾಡಿತ್ತು. ಯಾವುದಾದರೂ ಕಾರಣದಿಂದ ಗೌಡರನ್ನು ಬೀದಿಗೆಳೆಯಬೇಕೆಂಬ ಸಂಚನ್ನು ಜಹಗೀರುದಾರರು ನಡೆಸುತ್ತಲೇ ಇದ್ದರು. ಈಗ ಅದಕ್ಕೆ ಒಳ್ಳೇ ಅವಕಾಶ ಸಿಕ್ಕಿತು. ಓಲೇಕಾರನ ಮನೆಯವರನ್ನು ಎತ್ತಿಕಟ್ಟಿ ಕೋರ್ಟಿನಲ್ಲಿ ಖಟ್ಲೆ ಹೂಡ ಲಾಯಿತು. ವಿಚಿತ್ರವೆಂದರೆ, ಕೊಲೆಯಾದ ಪ್ರಸಂಗದ ಸಾಕ್ಷಿ ಹೇಳಲು ದೇವನ ಗೌಡರನ್ನೇ ಸೂಚಿಸಿದ್ದು. ಮಗನ ಅಕಾರ್ಯದ ಬಗ್ಗೆ ತಂದೆ ಕೋರ್ಟಿನಲ್ಲಿ ಸಾಕ್ಷಿ ಹೇಳಬೇಕಾದ ಈ ಸಂದರ್ಭ ಗೌಡರ ಸತ್ವ ಪರೀಕ್ಷೆಯ ಕಾಲವಾಯಿತು.

ಮೊದಲೇ ಸಾತ್ವಿಕರು. ಜೊತೆಗೆ ಸ್ವಾಮಿಗಳ ಸದುಪದೇಶದಿಂದ ಪ್ರಭಾವಿತ ರಾದವರು, ಅಲ್ಲದೆ ಮಗನು ಮಾಡಿದ ದುಷ್ಕೃತ್ಯವನ್ನು ಕಣ್ಣಾರೆ ಕಂಡವರು ಗೌಡರು. ನ್ಯಾಯಾಲಯದಲ್ಲಿ ಸಾಕ್ಷಿ ಹೇಳುವಾಗ ಹಿಂಜರಿಯಲಿಲ್ಲ. ಸತ್ಯವನ್ನೇ

ನುಡಿದರು. ಗೌಡರ ಈ ನಿಲುವು ಪ್ರತಿಪಕ್ಷದವರಿಗೆ ಹರ್ಷವನ್ನುಂಟು ಮಾಡಿದರೂ ಭೀಮನಗೌಡರ ಕಡೆಯ ವಕೀಲರು ಈ ಸಾಕ್ಷಿಗೆ ಬೇರೆ ಅರ್ಥ ಕೊಟ್ಟು ವಾದಿಸಿದರು. ದೇವನಗೌಡರಿಗೆ ಇಬ್ಬರು ಹೆಂಡತಿಯರು. ಭೀಮನಗೌಡ ಹಿರಿಯ ಹೆಂಡತಿಯ ಮಗ. ಗೌಡರಿಗೆ ಕಿರಿಯ ಹೆಂಡತಿಯ ಮೇಲೆ ಮಮತೆಯಿದೆ. ಆದ್ದರಿಂದ ಬೇಕೆಂದೇ ಸುಳ್ಳು ಸಾಕ್ಷಿ ನೀಡಿದ್ದಾರೆ ಎಂದು ವಾದವನ್ನು ಮುಂದಿಟ್ಟರು. ದುರ್ದೈವವೆಂಬಂತೆ ನ್ಯಾಯಾಲಯದಲ್ಲಿ ಈ ವಾದಕ್ಕೆ ಮನ್ನಣೆ ದೊರೆಯಿತು. ಖಟ್ಲೆ ಮುಕ್ತಾಯ ವಾಯಿತು. ಆದರೆ ದೇವನಗೌಡರ ಸತ್ಯ ಸಾಕ್ಷಿ ಮಾತ್ರ ಜನರ ಮನಸ್ಸಿನಲ್ಲಿ ದೃಢವಾಗಿ ನಿಂತಿತು.

ಸ್ವಾಮಿಗಳಿಂದ ನಿಷ್ಠೆಯ ಉಪದೇಶ ಸ್ವೀಕರಿಸಿದ ಗೌಡರು ಎಂತಹ ಸಂದರ್ಭ ದಲ್ಲೂ ಸುಳ್ಳಾಡುವುದಿಲ್ಲ ಎಂಬುದನ್ನು ಸ್ಥಿರ ಮಾಡಿಕೊಟ್ಟರು. ಈ ಸಂದರ್ಭದಲ್ಲಿ ಶ್ರೀ ಗುರುಪಾದ ಸ್ವಾಮಿಗಳಿಗೆ ಆದ ಸಮಾಧಾನ ಅಷ್ಟಿಷ್ಟಲ್ಲ.

**ಗಂಗಾವತರಣ :**

ಬಬಲೇಶ್ವರದ ಮಠದಲ್ಲಿ ಪ್ರತಿ ವರ್ಷ ಶ್ರಾವಣ ಮಾಸದಲ್ಲಿ ಪುರಾಣ ಪ್ರವಚನ ಕಾರ್ಯಕ್ರಮ ಅವಿಚ್ಛಿನ್ನವಾಗಿ ನಡೆದುಕೊಂಡು ಬಂದ ಕಾರ್ಯಕ್ರಮ. ಪುರಾಣ ಪ್ರವಚನ ಕಾರ್ಯ ಮುಗಿದ ಮೇಲೆ ಭಾದ್ರಪದ ಮಾಸದ ಮೊದಲನೆ ಸೋಮವಾರ ಮಹಾ ಗಣಾರಾಧನೆಯ ಕಾರ್ಯ. ಈ ಕಾರ್ಯಕ್ರಮವನ್ನು ಆರಂಭಿಸಿದವರು ಶ್ರೀ ಗುರು ಪಾದ ಸ್ವಾಮಿಗಳ. ಅಂದಿನಿಂದ ನಿರಂತರವಾಗಿ ಈ ಕಾರ್ಯ ನಡೆದು ಬಂದಿದೆ. ಬರಗಾಲದ ಬವಣೆ ಈ ಸತ್ಕಾರ್ಯಕ್ಕೆ ಎಂದೂ ಅಡ್ಡ ಬಂದಿಲ್ಲ. ಎಷ್ಟೋ ಸಲ ತೀವ್ರ ದುರ್ಭಿಕ್ಷ ಸಂಭವಿಸಿದಾಗಲೂ ಕಾರ್ಯಕ್ರಮದ ವೇಳೆಗೆ ಸರಿಯಾಗಿ ಎಲ್ಲವೂ ವ್ಯವಸ್ಥಿತವಾಗಿ ಸಜ್ಜುಗೊಳ್ಳುತ್ತಿತ್ತು.

ಹೀಗೇ ಒಂದು ವರ್ಷ ಎಂದಿನಂತೆ ಪುರಾಣ ಕಾರ್ಯಕ್ರಮ ಆರಂಭವಾಯಿತು. ಎಲ್ಲ ಏರ್ಪಾಟುಗಳು ಭರದಿಂದ ಸಾಗಿದುವು. ಧನ, ಧಾನ್ಯ, ಜನ ಬೆಂಬಲ ಮೇಲಿಂದ ಮೇಲೆ ತುಂಬಿ ಬಂದಿತು. ಪುರಾಣ ಕಾರ್ಯಕ್ರಮ ಮುಗಿದು ಎಂಟು, ಹತ್ತು ಸಾವಿರ ಜನಕ್ಕೆ ಅನ್ನ ಸಂತರ್ಪಣೆಯ ಮಹಾ ಗಣಾರಾಧನೆಯ ಏರ್ಪಾಟು ನಡೆಯಬೇಕಾಗಿದೆ. ಆದರೆ ಎಲ್ಲಕ್ಕೂ ಮೂಲವಾದ ನೀರಿನ ಕೊರತೆಯಾಯಿತು. ಮಠದ ಆವರಣದಲ್ಲಿದ್ದ ಸೇದುವ ಬಾವಿಯಲ್ಲಿ ಒಂದು ಕೊಡ ಮುಳುಗಲು ಆಳದಷ್ಟು ಮಾತ್ರ ನೀರು ನಿಂತಿದೆ. ಇದು ತೀವ್ರವಾದ ಆತಂಕವನ್ನು ತಂದೊಡ್ಡಿತು. ಸುತ್ತಲಿನ ಬಾವಿಗಳಿಂದ ನೀರನ್ನು ಹೊತ್ತು ತರುವ ಯೋಚನೆಯನ್ನು ಮಾಡಲಾಯಿತು. ಆದರೆ ಬತ್ತದ ತೊರೆ ಯಂತಿದ್ದ ಮಠದ ಆವರಣದ ಬಾವಿಯ ನೀರಿನ ಅನುಕೂಲಕ್ಕೂ ದೂರದಿಂದ ಸಂಗ್ರಹಿಸಬೇಕಾದ ತೊಂದರೆಗೂ ಅಜಗಜಾಂತರ. ನೀರಿನ ಈ ಆತಂಕ ಸ್ವಾಮಿಗಳನ್ನು

ತಟ್ಟಿತು. ಎಂದೂ ಧೃತಿಗೆಡದವರು ಇಂದೂ ಧೈರ್ಯವಾಗಿಯೇ ಇದ್ದರು. "ನಾಳೆಯು ಗಣಾರಾಧನೆಯು ಉಳಿದ ಸಿದ್ಧತೆಗಳು ನಡೆಯುತ್ತಿರಲಿ" ಎಂದು ನಂಬಿಕೆ ಕೊಟ್ಟು, ಬಾವಿಯ ಬಳಿ ಬಂದು ಒಮ್ಮೆ ನೋಡಿದರು. ತಳದಲ್ಲಿ ಸ್ವಲ್ಪ ಮಾತ್ರ ಕಾಣುತ್ತಿರುವ ನೀರು ಅವರಿಗೆ ಅಕ್ಷಯ ನಿಧಿಯಂತೆ ಕಂಡಿತು.

ಮಠದಿಂದ ಎರಡು ತೆಂಗಿನಕಾಯಿ, ಪೂಜಾ ಸಾಮಗ್ರಿ, ಐದು ಜನ ಮುತ್ತೈದೆಯರಿಂದ ಐದು ತಂಬಿಗೆ ನೀರು ತರಿಸಿದರು. ತಾವೇ ಸ್ವತಃ ಕಾಯಿಗಳನ್ನು ಒಡೆದು ತೆಂಗಿನ ತಿಳಿ ನೀರನ್ನು ಬಾವಿಗೆ ಹಾಕಿ, ಮುತ್ತೈದೆಯರಿಂದ ಐದು ತಂಬಿಗೆ ನೀರನ್ನು ಬಾವಿಗೆ ಹಾಕಿಸಿದರು. ಮಂಗಳಾರತಿ ಮಾಡಿದರು. ಅದೇನು ಮಾಯೆಯೋ? ಪೂಜೆ ಮಾಡಿ ಹಿಂದು ಮುಂದಾಗುವುದರೊಳಗೆ ಹಾಲಿನಂತಹ ಜಲ ಮೇಲೇರಿ ಬಂದಿತು. ಜನರ ಮುಖದಲ್ಲಿ ಹರ್ಷದ ಹೊಳೆಯೇ ಹರಿಯಿತು. ಬತ್ತಿದ ಬಾವಿ ಯಿಂದ ಉಕ್ಕಿಬಂದ ಜಲವನ್ನು ದಾಸೋಹದ ಕಾರ್ಯಕ್ಕಾಗಿ ಧಾರಾಳವಾಗಿ ಬಳಸಿದರು.

ನಿರಾಶೆಯ ಕಾರ್ಮೋಡದ ಅಂಚಿನಲ್ಲೂ ಆಶೆಯ ಬೆಳ್ಳಿ ರೇಖೆಯನ್ನು ಕಾಣುವ ಶ್ರೀ ಗುರುಪಾದ ಸ್ವಾಮಿಗಳ ಪ್ರಭೆ ಈ ಪ್ರಸಂಗದಿಂದ ಮತ್ತಷ್ಟು ಪ್ರಜ್ವಲಿಸಿತು.

### ಮಜ್ಜಿಗೆಯಲ್ಲಿ ನೀರು :

ಬಬಲೇಶ್ವರದ ಮಠ ಭಕ್ತಿ ಕಾಯಕದಲ್ಲಿ ಹೇಗೆ ಪ್ರಸಿದ್ಧವೋ ಹಾಗೆಯೇ ಬೇಸಾಯ ಕಾಯಕದಲ್ಲೂ ಪ್ರಸಿದ್ಧ. ಮಠದ ಜಮೀನಿನಲ್ಲಿ ತುಂಬಿ ಬೆಳೆಯುವ ಬೆಳೆಯು ಆ ಭಾಗಕ್ಕೆ ಹೆಸರುವಾಸಿ, ಇದಕ್ಕೆ ಕಾರಣ ಸ್ವಾಮಿಗಳೇ ಕಾರ್ಯದಲ್ಲಿ ವಹಿಸುತ್ತಿದ್ದ ಸ್ವಯಂ ಆಸಕ್ತಿ. ಬೇಸಾಯದ ಬದುಕಿಗೆ ಹೊಂದಿಕೊಂಡಂತೆ ಸಮೃದ್ಧ ವಾದ ಎಮ್ಮೆ, ಆಕಳುಗಳ ಹೈನು ಮಠದ ಒಂದು ಅಮೂಲ್ಯವಾದ ಸಂಪತ್ತಾಗಿ ವೃದ್ಧಿಯಾಗಿತ್ತು. ಉತ್ಪತ್ತಿಯಾದ ಹಾಲು, ಮೊಸರು, ಮಜ್ಜಿಗೆ, ಬೆಣ್ಣೆ ಯಾವುದೇ ಇರಲಿ ಮಠಕ್ಕೆ ಬಂದ ಅತಿಥಿಗಳಿಗೆ, ಹಾಗೂ ಊರವರಿಗೆ ಧಾರಾಳವಾಗಿ ಬಳಕೆಯಾಗು ತ್ತಿತ್ತು. ಅಡಿಗೆ ಮನೆಯಲ್ಲಿ ಕೆಲಸ ಮಾಡುವವರಿಗಂತೂ ಮಜ್ಜಿಗೆ ನೀಡುವುದೇ ಒಂದು ಕೆಲಸವಾಗಿ ಹೋಗುತ್ತಿತ್ತು. ಸಾಮಾನ್ಯವಾಗಿ ಅಡಿಗೆ ಮನೆಯಲ್ಲಿದ್ದ ಒಬ್ಬ ಮುದುಕಿ ಈ ಕೆಲಸಕ್ಕಾಗಿಯೇ ನಿಂತಿರುತ್ತಿದ್ದಳು.

ಒಂದು ದಿನ ಒಬ್ಬ ಹೆಣ್ಣು ಮಗಳು ಮಜ್ಜಿಗೆಗಾಗಿ ಮಠಕ್ಕೆ ಬಂದಳು. ಆ ದಿನ ಮುದುಕಿ ಯಾವ ವಿಚಾರದಲ್ಲಿದ್ದಳೋ ಏನೋ ಆಕೆಗೆ ನೀರು ಮಜ್ಜಿಗೆಯನ್ನು ನೀಡಿದಳು. ಅದನ್ನು ಸ್ವೀಕರಿಸಿದ ಹೆಣ್ಣು ಮಗಳು ಮಠದಿಂದ ಮರಳಿ ಹೋಗುವಾಗ ಮುದಿಕಿಯನ್ನು ಮನವಾರೆ ಮೂದಲಿಸುತ್ತ ಹೋದಳು. ಈ ಮಾತುಗಳು ಗುರುಪಾದ

ಸ್ವಾಮಿಗಳ ಕಿವಿ ಮೇಲೆ ಬಿದ್ದವು. ಮನಸ್ಸಿಗೆ ನೋವಾಯಿತು. ಆದರೆ ಈ ಬಗ್ಗೆ ಯಾರೊಡನೆಯೂ ಏನೂ ಮರು ಮಾತನಾಡಲಿಲ್ಲ.

ಮಧ್ಯಾಹ್ನವಾಯಿತು ಸ್ನಾನ ಶಿವಪೂಜೆಯ ನಂತರ ಪ್ರಸಾದ ಸ್ವೀಕರಿಸಲು ಸಿದ್ಧರಾದರು. ಪ್ರತಿನಿತ್ಯ ಪ್ರಸಾದದ ಕೂಡ ಮಜ್ಜಿಗೆ ಸ್ವೀಕರಿಸುವುದು ಸ್ವಾಮಿಗಳ ಸಾಂಪ್ರದಾಯ ಅದರಂತೆ ಪ್ರಸಾದ ಅರ್ಪಿಸುವವರು ಮಜ್ಜಿಗೆಯನ್ನು ತಂದು ಇಟ್ಟರು. ಆದರೆ ಸ್ವಾಮಿಗಳು ಎಂದಿನಂತೆ ಸ್ವೀಕರಿಸದೆ ನೀರನ್ನು ಬೆರಸಿ, ನೀರು ಮಜ್ಜಿಗೆ ಮಾಡಿ ಸ್ವೀಕರಿಸಿದರು. ಸ್ವಾಮಿಗಳ ಈ ಬದಲಾವಣೆಯ ಹಿಂದಿದ್ದ ಅರ್ಥ ಅಲ್ಲಿದ್ದ ಮುಸ್ಸಿಗೆ ಮುದುಕಿಗೆ ಮನವರಿಕೆಯಾಗುವುದು ತಡವಾಗಲಿಲ್ಲ. ತಾನು ಮಾಡಿದ ತಪ್ಪಿಗೆ ಇದು ಫಲವೆಂದುಕೊಂಡು ಪಶ್ಚಾತ್ತಾಪದ ಉರಿಯಲ್ಲಿ ಬೆಂದು ಹೋದಳು. ಈ ಸಂಗತಿಯನ್ನು ಸ್ವಾಮಿಗಳಲ್ಲಿ ಹೇಳಿಕೊಳ್ಳಲು ಸಹ ಆಕೆಗೆ ಧೈರ್ಯ ಬರಲಿಲ್ಲ. ಸ್ವಾಮಿಗಳು ಕೂಡ ಪ್ರಶ್ನಿಸಲಿಲ್ಲ. ಅಂದಿನಿಂದ ಸ್ವಾಮಿಗಳು ಮುಂದೆ ಎಂದೂ ಗಟ್ಟಿ ಮಜ್ಜಿಗೆಯನ್ನು ಸ್ವೀಕರಿಸಲಿಲ್ಲ.

ಗುರುಪಾದ ಸ್ವಾಮಿಗಳು ತಮ್ಮ ಸನಿಹದಲ್ಲಿದ್ದ ಯಾರಾದರೂ ಕರ್ತವ್ಯ ಪಾಲನೆಯಲ್ಲಿ ಎಡವಿದರೆ ಅದನ್ನು ನೇರವಾಗಿ ಹೇಳದೆ ಪರೋಕ್ಷವಾಗಿ ಅರಿವು ಮಾಡಿಕೊಟ್ಟು ಅವರು ಸರಿದಾರಿಗೆ ಬರುವಂತೆ ಪ್ರೇರಣೆ ನೀಡುತ್ತಿದ್ದರು. ತಮ್ಮ ಸೇವಕರ ಬಗೆಗಂತೂ ಎಂದೂ ಅವರು ಒಂದು ಬಿರುಸು ಮಾತನಾಡಿದವರಲ್ಲ. ಆಗ ಅವರ ದೃಷ್ಟಿ ಕೂಡ ಮಂದವಾಗಿದ್ದವೆಂಬ ಮಾತನ್ನು ಇಲ್ಲಿ ಸ್ಮರಿಸಬಹುದಾಗಿದೆ.

**ಮನೆ ಮಠ ಒಂದೆ :**

ಬಬಲೇಶ್ವರ ಗೌಡರ ಮುಖ್ಯ ಮನೆತನದಲ್ಲಿ ಹಿಂದಿನಿಂದ ಇಂದಿನವರೆಗೆ ವೀರನಗೌಡ, ಲಿಂಗನಗೌಡ ಎಂಬ ಹೆಸರುಗಳು ಪರಂಪರಾಗತವಾಗಿ ಸಾಗಿ ಬಂದಿವೆ; ಇದೊಂದು ಸತ್ ಸಾಂಪ್ರದಾಯ.

ಲಿಂ. ಗುರುಪಾದ ಸ್ವಾಮಿಗಳ ಕಾಲದಲ್ಲಿ ಇದ್ದ ಲಿಂಗನಗೌಡರಿಗೆ ಮಕ್ಕಳಿರಲಿಲ್ಲ. ಅವರ ಧರ್ಮಪತ್ನಿಯಾದ ರಾಮವ್ವಗೌಡತಿಯು ಗಂಡು ಮಗುವಿಗಾಗಿ ಗುರುಪಾದ ಸ್ವಾಮಿಗಳಲ್ಲಿ ತನ್ನ ಮನಸ್ಸಿನ ಬಯಕೆಯನ್ನು ಬಿನ್ನವಿಸಿಕೊಂಡಳು.

ಗುರುಗಳಾದ ಗುರುಪಾದ ಸ್ವಾಮಿಗಳು ಕರುಣೆಯಿಂದ "ಗಂಡು ಮಗುವಾದರೆ ಮಠಕ್ಕೆ ಕೊಡುವೆಯಾ?" ಎಂಬುದಾಗಿ ಕೇಳಿದರು. ಹೇಗಾದರೂ ಮಕ್ಕಳಾದರೆ ಸಾಕೆಂದು ಅದಕ್ಕೆ ಆಕೆಯು ಸಮ್ಮತಿಸಿದಳು.

ಆಗ ಗುರುಪಾದ ಸ್ವಾಮಿಗಳು 'ಆಗಲಿ' ಎಂದು ಆಕೆಗೆ ಆಶೀರ್ವದಿಸಿದರು. ಆಕೆಯು ಹರುಷಚಿತ್ತಳಾಗಿ ಮನೆಗೆ ಹೊರಟು ಹೋದಳು.

ಮುಂದೆ ಕೆಲ ಕಾಲದ ಬಳಿಕ ಆಕೆಗೊಂದು ಗಂಡು ಮಗುವಿನ ಜನನವಾಯಿತು. ಆ ಮಗುವಿಗೆ "ಬಾಪುಗೌಡ" ಎಂಬ ನಾಮಕರಣ ಮಾಡಲಾಯಿತು ; ಬಾಪುಗೌಡ ಜನಿಸಿ ನಾಲ್ಕೈದು ವರುಷ ಗತಿಸಿದರೂ ಮಾತೆಯು ಹಿಂದೆ ಗುರುಪಾದ ಸ್ವಾಮಿಗಳಿಗಿತ್ತ ಆಶ್ವಾಸನೆಯನ್ನು ಕಾರ್ಯಗತಗೊಳಿಸದೆ ಮೌನವಾಗಿ ಮನೆಯಲ್ಲಿ ಕುಳಿತುಬಿಟ್ಟಳು. ಆಗ ಗುರುಪಾದ ಸ್ವಾಮಿಗಳು ರಾಮವ್ವಗೌಡತಿಯನ್ನು ಮಠಕ್ಕೆ ಕರೆಯಿಸಿ ಹಿಂದೆ ಇತ್ತ ಆಶ್ವಾಸನೆಯ ನೆನಪನ್ನು ಆಕೆಗೆ ಮಾಡಿಕೊಟ್ಟರು. ಆಗ ಆಕೆಯು "ಇರುವ ಒಬ್ಬ ಮಗುವನ್ನು ಮಠಕ್ಕೆ ಕೊಟ್ಟರೆ ನನ್ನ ವಂಶ ವೃದ್ಧಿಯಾಗುವದು ಹೇಗೆ ?" ಎಂಬ ಶಂಕೆಯನ್ನು ವ್ಯಕ್ತಪಡಿಸಿದಳು.

ಗುರುಪಾದ ಸ್ವಾಮಿಗಳು ಆಕೆಯ ಮನದಿಂಗಿತವನ್ನು ಅರಿತು "ಮನೆ-ಮಠ ಎರಡೂ ಒಂದೇ" ಎಂಬುದಾಗಿ ಹೇಳಿಬಿಟ್ಟರು. ಇದರ ಪರಿಣಾಮವಾಗಿ ಆ ಗೌಡರ ಮನೆತನಕ್ಕೆ ಮೂರು ತಲೆಗಳವರೆಗೆ ಮಕ್ಕಳೇ ಆಗಲಿಲ್ಲೆಂಬುದು ಬಬಲೇಶ್ವರದಲ್ಲಿ ಎಲ್ಲರೂ ಆಡುವ ಮನೆ ಮಾತಾಗಿದೆ.

ಬಾಪುಗೌಡರು ದೊಡ್ಡವರಾದರು, ಮದುವೆಯೂ ಆಯಿತು, ಆದರೆ ಅವರಿಗೆ ಮಕ್ಕಳಾಗಲಿಲ್ಲ. ಅವರು ಕೊನೆಗೆ ಲಿಂಗನಗೌಡರೆಂಬವರನ್ನು ದತ್ತಕವಾಗಿ ತೆಗೆದು ಕೊಂಡರು. ಈ ಲಿಂಗನಗೌಡರಿಗೂ ಮಕ್ಕಳಾಗಲಿಲ್ಲ. ಆಗ ಅವರು ವೀರನಗೌಡರೆಂಬವ ರನ್ನು ದತ್ತಕ ತೆಗೆದುಕೊಂಡರು. ಅವರಿಗೂ ಮಕ್ಕಳಾಗಲಿಲ್ಲ ; ಕೊನೆಗೆ ಅವರು ೧೯೧೪ ರಲ್ಲಿ ತೀರಿಕೊಂಡರು.

ಈ ವೀರನಗೌಡರು ಒಳ್ಳೇ ಸಾತ್ವಿಕರು, ಶಾಂತ ಸ್ವಭಾವದರು, ಒಳ್ಳೇ ಸುಸ್ವ ರೂಪಿಗಳಾಗಿದ್ದರೆಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಈ ಭಾಗದಲ್ಲಿ ಇವರಷ್ಟು ಜನಪ್ರಿಯ ಗೌಡರು ಹಿಂದೆ ಯಾರೂ ಆಗಿಲ್ಲ. ಮುಂದೆ ಆದಾರೆಂದು ಹೇಳಲು ಬರಲಾರದು.

ಇವರ ನಂತರ ವೀರನಗೌಡರ ಪ್ರಥಮ ಪತ್ನಿಯರಾದ ಶ್ರೀಮತಿ ಪಾರ್ವತಮ್ಮ ಅವರು ತಮ್ಮ ತವರು ಮನೆಯಾದ ತಾಳೀಕೋಟೆ ಪಾಟೀಲ ಮನೆತನದ ತಮ್ಮ ತಮ್ಮ ನಾದ ಮಲ್ಲನಗೌಡರ ದತ್ತಕ ತೆಗೆದುಕೊಂಡರು. ಇವರಿಗೆ ಮಾತ್ರ ವೀರನಗೌಡ (ಅಪ್ಪಾ ಸಾಹೇಬ) ಬಾಪೂಗೌಡ (ಬಾಳಾ ಸಾಹೇಬ) ಲಿಂಗನಗೌಡ (ತಾತ್ಯಾ ಸಾಹೇಬ) ಎಂಬ ಮೂವರು ಮಕ್ಕಳಾಗಿರುವರೆಂಬ ಮಾತನ್ನು ಇಲ್ಲಿ ಗಮನಿಸಬೇಕಾಗಿದೆ.

### ಮಹಾ ತ್ಯಾಗಮೂರ್ತಿ :

ಒಂದು ವರುಷ ಬಬಲೇಶ್ವರ ಭಾಗದಲ್ಲಿ ಮಳೆ ಎಳಸಿದ್ದರಿಂದ ಜನರು ಭೀಕರ ಬರಗಾಲದ ಕಷ್ಟಕ್ಕೊಳಗಾದರು, ಆದರಲ್ಲಿ ಬಡವರ ಬವಣೆಯನ್ನು ಹೇಳಲು ಬಾರ ದಂತಹ ಪರಿಸ್ಥಿತಿ ಪ್ರಾಪ್ತವಾಯಿತು.

ಆಗ ಗುರುಪಾದ ಸ್ವಾಮಿಗಳ ಮನ ಕರಗಿತು. "ನನಗಾಗಿ ಮಠ ಅಲ್ಲ, ಮಠ ಇರುವದು ಮಂದಿಗಾಗಿ." ಎಂಬ ಮಾತನ್ನು ಮನಗಂಡು ಮಠದ ಸರ್ವ ಚರಾಸ್ತಿಯನ್ನೆಲ್ಲ ಬಡಬಗ್ಗರಿಗೆ ದಾನವಾಗಿ ನೀಡಬೇಕೆಂದು ನಿರ್ಧರಿಸಿದರು.

ಊರಲ್ಲಿಯ ಹಿರಿಯರನ್ನೆಲ್ಲ ಮಠಕ್ಕೆ ಕರೆಯಿಸಿ ತಾವು ಮಾಡಿದ ನಿರ್ಧಾರವನ್ನು ನಿವೇದಿಸಿದರು. ಅದನ್ನು ಕೇಳಿ ಎಲ್ಲರೂ ಅವಾಕ್ಕಾಗಿ ಮೌನವಾಗಿ ಕುಳಿತುಬಿಟ್ಟರು.

ಆಗ ಗುರುಪಾದ ಸ್ವಾಮಿಗಳು ತಾವೇ ಮುಂದಾಗಿ "ನಾಳಿನ ಸೋಮವಾರ ದಿವಸ" ಈ ಮಹಾಕಾರ್ಯ ನೆರವೇರಿಸುವಂತೆ ಸೂಚಿಸಿದರು.

ಆ ದಿನ ಊರ ಹಿರಿಯರೆಲ್ಲ ಕೂಡಿ ಮಠದ ಮುಂದಿನ ವಿಸ್ತಾರವಾದ ಪಟಾಂಗಣದಲ್ಲಿ ದೊಡ್ಡ ದೊಡ್ಡ ಗುಡಾರಗಳನ್ನು ಹಾಯಿಸಿ, ಮಠದ ನಾಲ್ಕೈದು ಹಗೆಗಳಲ್ಲಿಯ ಧಾನ್ಯಗಳನ್ನೆಲ್ಲ ತಂದು ಒಂದೆಡೆಗೆ ಹಾಕಿಸಿದರು. ಇನ್ನು ಮಂತ್ತೊಂದೆಡೆ ಮಠದಲ್ಲಿಯ ವಸ್ತು-ಒಡವೆ, ಹಾಸಿಗೆ-ಹೊದಿಕೆ, ಹಂಡೆ-ಬಾಂಡೆ ಮೊದಲಾದವುಗಳನ್ನೆಲ್ಲ ತಂದು ಇಡಿಸಲಾಯಿತು.

ಗುರುಪಾದ ಸ್ವಾಮಿಗಳು ಆ ದಿನ ಬೆಳಗಿನ ಲಿಂಗ ಪೂಜೆ ಪೂರೈಸಿಕೊಂಡು ಅದೇ ವೇಷದಲ್ಲಿ ಕೈಯಲ್ಲಿ ಬೆತ್ತ ಹಿಡಿದುಕೊಂಡು ಮಠದ ಹೆಬ್ಬಾಗಿಲದ ಒಂದು ಬದಿಗೆ ಬಂದು ನಿಂತರು.

ಈ ವಿಷಯವನ್ನು ಡಂಗುರ ಮೂಲಕ ಊರಲ್ಲಿ ಮುಂಚಿತವಾಗಿ ತಿಳಿಸಲಾಗಿತ್ತು; ನೆರೆ ಹಳ್ಳಿಗಳಿಗೆ ಹೇಳಿ ಕಳಿಸಲಾಗಿತ್ತು. ಹೀಗಾಗಿ ಸಾವಿರಾರು ಬಡ ಜನರು ಮಠದ ಮುಂದೆ ಸೇರಿದ್ದರು.

ಊರ ಹಿರಿಯರು ಬಂದ ಬಡವರ ಸ್ಥಿತಿಗತಿಯನ್ನು ವಿಚಾರಿಸಿ ಧಾನ್ಯ ಅಳೆದು ಕೊಡಲು ಪ್ರಾರಂಭಿಸಿದರು. ಹಾಗೂ ಉಳಿದ ಅವಶ್ಯಕ ಪದಾರ್ಥಗಳನ್ನು ಕೂಡ ಒದಗಿಸಹತ್ತಿದರು.

ಬೆಳಗಿನಿಂದ ಸಂಜೆಯವರೆಗೆ ಈ ಮಹಾ ಕಾರ್ಯ ನಡೆದು ಮುಕ್ತಾಯವಾಯಿತು. ಆಗ ಗುರುಪಾದ ಸ್ವಾಮಿಗಳು ಖಾಲಿಯಾದ ಮಠದ ಒಳಗೆ ಹೋಗಿ ಮಠದ ಸೇವಕರಿಂದ ಮಠವನ್ನೆಲ್ಲ ನೀರಿನಿಂದ ತೊಳಿಸಿ ತೃಪ್ತಿ ಹೊಂದಿದರು.

ಆ ಮೇಲೆ ಕುಂಬಾರ ಮನೆಯಿಂದ ಹೊಸ ಹರವಿ, ಕೊಡ, ಮಂಗಿ, ಮುಂಚಟ್ಟಳಗಳನ್ನು ತರಿಸಿ ಸ್ನಾನ, ಶಿವಾರ್ಚನೆ ಪೂರೈಸಿದರು. ಅಷ್ಟರಲ್ಲಿ ಮಠದ ಭಕ್ತರು ಕಳಿಸಿದ ಎಡೆಯಿಂದ ಪ್ರಸಾದ ಸ್ವೀಕರಿಸಿ ಸಂತೋಷಭರಿತರಾದರು.

ಮುಂದೆ ಒಂದು ವರುಷದಲ್ಲಿ ಮಠವು ಮೊದಲಿನಂತೆ ಪುನಃ ಸಂಪದ್ಭರಿತವಾಯಿತೆಂಬ ಮಾತನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಗುರುಪಾದ ಸ್ವಾಮಿಗಳು ತಮ್ಮ ದೀರ್ಘ ಕಾಲದ ಜೀವನದಲ್ಲಿ ಈ ರೀತಿ ಒಟ್ಟಿಗೆ ಮೂರು ಸಲ ಮಾಡಿರುವರೆಂಬ ಮಾತನ್ನು ಇಲ್ಲಿ ಗಮನಿಸಬಹುದಾಗಿದೆ.

ಈ ರೀತಿ ತ್ಯಾಗವನ್ನು ಮಾಡಿದ ಸ್ವಾಮಿಗಳ ಹೆಸರು ಹಿಂದಿನ ಇತಿಹಾಸದಲ್ಲಿ ಕಂಡುಬಂದಿಲ್ಲ; ಮುಂದೆ ಅಂತಹ ತ್ಯಾಗಮೂರ್ತಿ ಸ್ವಾಮಿಗಳು ಹುಟ್ಟಬಹುದೆಂದು ಹೇಳುವುದು ಕೂಡ ಬಿಗಿಯಾದ ಮಾತಾಗಿದೆ.

# ೭. ಮಹಾಲಿಂಗ ಮಿಲನ

ಬಬಲೇಸೂರ ಅಪಗೋಳ ಬಗಿ ನಮಗೆ ತಿಳೀಲಿಲ್ಲ
ನೆಲ ಭೂಂವಾರದಾಗ ಶಿವಪೂಜಿ ನಡಿವಾಗ
ಆಕಾಶದ ಘಂಟಿ ನುಡಿದಾವ

—ಜನಪದಗೀತೆ.

ಶ್ರೀ ಗುರುಪಾದ ಸ್ವಾಮಿಗಳ ವಯಸ್ಸು ಇಳಿದಂತೆ ಶರೀರದಲ್ಲಿ ಶಕ್ತಿ ಕಡಿಮೆಯಾಗುತ್ತಿದ್ದುದು ಅವರ ಗಮನಕ್ಕೆ ಬಂದಿತು. ಕ್ರಮೇಣ ಅವರು ಮಠವನ್ನು, ಬಬಲೇಶ್ವರವನ್ನೂ ಬಿಟ್ಟು ದೂರ ಪ್ರಯಾಣ ಮಾಡುವುದನ್ನು ನಿಲ್ಲಿಸಿದರು.

ಬಬಲೇಶ್ವರದ ಬೇಸಾಯದ ಕುಟುಂಬದಲ್ಲಿ ಜನಿಸಿ ಶಿವನಿಚ್ಛೆಯಂತೆ ಭಕ್ತಿ ಕಾಯಕವನ್ನು ಕೈಕೊಂಡು, ಮುಕ್ತಿ ಪದದ ದಾರಿಯನ್ನು ಸುಗಮ ಮಾಡಿಕೊಂಡು ಶಿವನೆಡೆಗೆ ಸಾಗಲು ಸಿದ್ಧರಾಗಿದ್ದ ಅವರು ಲೌಕಿಕ ವಿಚಾರಗಳನ್ನು ಎಂದೂ ಅಲ್ಲಗಳೆದವರಲ್ಲ; ತಳ್ಳಿಹಾಕಿದವರಲ್ಲ. ಗವಿ ಗುಹೆಗಳಲ್ಲಿ ಕುಳಿತು ಸಾಧನೆ ಮಾಡಿದವರಲ್ಲ. ಜನರ ಮಧ್ಯೆ ಬಾಳಿ ಜನತೆಯ ಕಷ್ಟ ಸುಖಗಳಲ್ಲಿ ಭಾಗಿಗಳಾಗಿ ಲೋಕದ ಸಂಕಟವನ್ನು ನಿವಾರಿಸುವ ಕಾರ್ಯದಲ್ಲಿ ತಮ್ಮ ಪಾಲಿನ ಕಾಣಿಕೆಯನ್ನು ನಿಷ್ಠೆಯಿಂದ ಸಲ್ಲಿಸಿ ಧನ್ಯರಾದವರು.

ಗುರುಪಾದ ಸ್ವಾಮಿಗಳು ಒಳ್ಳೆಯ ಆಜಾನ ಬಾಹು, ಸದೃಢಕಾಯ, ಬಿಳಿಯ ಬಣ್ಣ, ಕೊರಳಲ್ಲಿ ಲಿಂಗ ರುದ್ರಾಕ್ಷಿ ಧಾರಣ, ಹಣೆಯಲ್ಲಿ ತ್ರಿಪುಂಡ್ರ ಭಸ್ಮ, ಕೈಯಲ್ಲಿ ಬೆತ್ತ, ಟೊಂಕದಲ್ಲಿ ಕೌಪಿನ, ಮೈತುಂಬ ಹೊದೆದ ಸ್ವಚ್ಛವಾದ ಕಾವಿ ಹಚ್ಚಡ. ಇದಕ್ಕೆ ಶೋಭೆ ನೀಡುವ ನಿಚ್ಚಳ ಮನಸ್ಸಿನ ಹಿನ್ನೆಲೆಯಲ್ಲಿ ಸದಾ ಪ್ರಫುಲ್ಲವಾಗಿ ಶಾಂತ ಪ್ರಕಾಶದಿಂದ ಬೆಳಗುವ ಮುಖಾರವಿಂದ ನೋಡಿದವರ ಮನಸ್ಸಿನಲ್ಲಿ ಒಮ್ಮೆಗೇ ಗೌರವ ಭಾವವನ್ನು ಮೂಡಿಸುವಂಥದು. ಒಮ್ಮೆ ನೋಡಿದರೆ ಮತ್ತೊಮ್ಮೆ ನೋಡಬೇಕೆಂಬ ಹಂಬಲವನ್ನು ಮರುಕಳಿಸುವಂಥದು.

ಬಬಲೇಶ್ವರ ಗುರುಮಠದ ಬಾಗಿಲ ಎಡಬದಿಗೆ ಪಡಸಾಲಿಯಲ್ಲಿ ಕರಿ ಕಂಬಳಿಯ ಆಸನದ ಮೇಲೆ ಕುಳಿತು ಹತ್ತಾರು ಜನ ಭಕ್ತರೊಡನೆ ಭಕ್ತಿ, ಜ್ಞಾನ, ಕರ್ಮ, ವೈರಾಗ್ಯ, ಸಂಸಾರ, ಜೀವನ ಸಾರಾಸಾರ ಮುಂತಾದ ಹಲವಾರು ವಿಷಯಗಳನ್ನು ಚರ್ಚಿಸುವಾಗ,

ಚರ್ಚೆಯನಂತರ ಅವರ ಸಾರ ಸರ್ವಸ್ವವನ್ನು ತಮ್ಮದೇ ಆದ ಸ್ಪಷ್ಟವಾದ ಸರಳವಾದ, ಆದರೆ ಸ್ವಾಮಿಗಳಿಗೇ ವಿಶಿಷ್ಟವಾದ ಭಾಷೆಯಲ್ಲಿ ತಿಳಿಹೇಳುವಾಗ ಆ ಗಂಭೀರ ಭಾವ ಅವರೊಬ್ಬ ಲೋಕ ಕಲ್ಯಾಣದ ಜವಾಬ್ದಾರಿಯನ್ನು ಹೊತ್ತ ಸಿದ್ಧಪುರುಷ ಎಂಬುದನ್ನು ಸಾರಿಹೇಳುತ್ತಿತ್ತು.

ಶ್ರೀ ಗುರುಪಾದ ಸ್ವಾಮಿಗಳು ಪವಾಡ ಪುರುಷರೇನಲ್ಲ. ಜನ ಮೆಚ್ಚಲಿ ಎಂದು ಯಾವ ಚಮತ್ಕಾರ ಕಾರ್ಯಗಳಿಗೂ ಅವರು ಕೈಹಾಕಲಿಲ್ಲ. ಅದೇನು ಮಹಿಮೆಯೋ ಅವರು ಸಹಜವಾಗಿ ಆಡಿದ ಕೆಲವು ಮಾತುಗಳು ಮಂತ್ರವಾದುವು, ಸರಳವಾಗಿ ಕೈಗೊಂಡ ಕಾರ್ಯಗಳು ಘನ ಕೃತಿಗಳಾದವು. ಅಂದಿನ ಜನಕ್ಕೆ ಸ್ವಾಮಿಗಳ ಈ ಮಾತು ಕಾರ್ಯ ಸಹಜವೆಂದು ತೋರಿದವೇ ಹೊರತು ಪವಾಡವೆನಿಸಲಿಲ್ಲ. ಏಕೆಂದರೆ ಸ್ವಾಮಿಗಳು ಅವರೊಡನೆ ಅಷ್ಟರಮಟ್ಟಿಗೆ ಒಂದಾಗಿ ಬೆರೆತು ಬಾಳಿದರು.

ಸ್ವತಃ ಸಂಸಾರದಿಂದ ದೂರವಾದರೂ ಲೋಕ ಸಂಸಾರದ ಜವಾಬ್ದಾರಿಯನ್ನು ಹೊತ್ತವರಾಗಿ ದುಡಿದರು. ಇದಕ್ಕೆ ನಿದರ್ಶನವೆಂದರೆ ಅವರು ತಮ್ಮ ಹುಟ್ಟಿನಿಂದಲೇ ಕೂಡಿ ಬಂದಿದ್ದ ಬೇಸಾಯದ ಬಗ್ಗೆ ಇಟ್ಟುಕೊಂಡಿದ್ದ ಒಲವು. ಮಠದಲ್ಲಿದ್ದ ಯಾವ ದಿನವೂ ಗಿಡಕ್ಕೆ ನೀರೆರೆಯದೆ, ಕಳೆಕೀಳದೆ, ಅಗಿ ಮಾಡದೆ ಬಿಡಲಿಲ್ಲ, ಅದಕ್ಕಾಗಿ ದುಡಿದರು. ಸಂಜೆ ಯಥಾರೀತಿ ಅಧ್ಯಯನ, ಆಲೋಚನೆ. ಮಠವನ್ನೇ ಮಹಾ ವಿದ್ಯಾಲಯವನ್ನಾಗಿ ರೂಪಿಸಿಕೊಂಡ ಮಹೋನ್ನತ ಮಹಾ ಪುರುಷರು.

ತೊಂಬತ್ತು ನಾಲ್ಕು ವರ್ಷಗಳ ಅವರ ದೀರ್ಘ ಜೀವಿತಕಾಲದಲ್ಲಿ ಎಂದೂ ಅವರು ಪರಾವಲಂಬಿಗಳಾಗಲಿಲ್ಲ. ಸ್ವಾವಲಂಬನೆಯ ಸಂಕೇತವಾಗಿ ಬಾಳಿದರು. ಕಾಯಕ ತತ್ವವನ್ನು ಜೀವನದಲ್ಲಿ ಸಂಪೂರ್ಣವಾಗಿ ಅಳವಡಿಸಿಕೊಂಡು ಉಳಿದವರಿಗೆ ಮಾರ್ಗದರ್ಶಕರಾದರು.

ತಾವು ಜೀವಿಸಿದ್ದಾಗಲೇ ಮಠದ ಉತ್ತರಾಧಿಕಾರಿಯಾಗಿ ಶಾಂತವೀರ (೨) ಸ್ವಾಮಿಗಳನ್ನು ಆರಿಸಿದ್ದರು. ನಿಷ್ಠೆಯ ಜೀವನಕ್ಕೆ ಹೆಸರಾಗಿದ್ದ ಅವರು ಗುರುಪಾದ ಸ್ವಾಮಿಗಳ ಮುಂದೆಯೇ ಶಿವಪದಕ್ಕೆ ಸಾಗಿದರು. ಅದರಿಂದ ಅವರ ಮನಸ್ಸಿಗೆ ಒಂದು ರೀತಿ ದೊಡ್ಡ ಆಘಾತವಾದಂತಾಯಿತು. ಇವರು ಬಬಲೇಶ್ವರದ ಶ್ರೀ ಜ. ಅ. ಕೋರಿ ಅವರ ಮನೆತನದವರಾಗಿದ್ದರೆಂಬ ಮಾತನ್ನು ಇಲ್ಲಿ ಸ್ಮರಿಸಬಹುದಾಗಿದೆ. ನಂತರ ಉತ್ತರಾಧಿಕಾರಿಯಾಗಿ ಕುಬಕಡ್ಡಿ ರಾಜೋಟಿ ಸ್ವಾಮಿಗಳನ್ನು ಗೊತ್ತುಪಡಿಸಲಾಯಿತು.

ಮಠದ ನಿಯಮ – ನಿಷ್ಠೆ, ಸಂಪ್ರದಾಯ – ಸಮಾರಂಭಗಳು ತಾವು ಹಾಕಿಕೊಟ್ಟ ಹಾದಿಯಲ್ಲೇ ನಡೆಯುತ್ತಿದ್ದುದು ಸ್ವಾಮಿಗಳಿಗೆ ಹೆಚ್ಚಿನ ಸಮಾಧಾನವನ್ನು ತಂದುಕೊಟ್ಟಿತು. ತಾವು ಶಕ್ತಿಗುಂದಿ ಕುಳಿತಿದ್ದರೂ ಬಬಲೇಶ್ವರ ಮತ್ತು ಸುತ್ತಲಿನ ಭಕ್ತ ಜನರು ಮುಂದೆಯೂ ಈ ಪರಂಪರೆಯನ್ನು ಬೆಳೆಸುವರೆಂಬ ನಂಬಿಕೆಯನ್ನು ಉಂಟುಮಾಡಿತು.

ಕೊನೆಗಾಲದಲ್ಲಿ ಸ್ವಾಮಿಗಳಿಗೆ ಎಲ್ಲಕ್ಕಿಂತ ಮನಸ್ಸಿಗೆ ವೇದನೆ ಉಂಟುಮಾಡಿದ ವಿಷಯವೆಂದರೆ, ದೀರ್ಘ ಕಾಲ ತಮ್ಮ ಸೇವೆಯನ್ನು ಮಾಡಿ ತಮ್ಮ ಎದುರಿನಲ್ಲೇ ಶಿವೈಕ್ಯನಾದ ಮುರಿಗೆಯ್ಯನ ಅಗಲಿಕೆ. ಸ್ವಾಮಿಗಳಾದ ಅವರಿಗೆ ಇಂತಹ ಸಂಗತಿಗಳು ಮನಸ್ಸನ್ನು ಕಲಕಬಾರದು. ಆದರೂ ಆ ಜೀವಿಯ ನಿಯಮ, ನೀತಿ, ನಿಷ್ಠೆ, ಕಾರ್ಯತತ್ಪರತೆಗಳು ಸ್ವಾಮಿಗಳಿಗೆ ಬಹುವಾಗಿ ಹಿಡಿಸಿದ್ದವು. ಅನೇಕ ಸಲ ಸ್ವಾಮಿಗಳು ಮುರಿಗೆಯ್ಯನ ಬೆನ್ನು ತಟ್ಟಿ ನೀನೊಬ್ಬ ಆದರ್ಶ ಕರ್ಮಯೋಗಿ ಎಂದು ಹೇಳಿದ್ದುಂಟು. ಆ ಹೊಗಳಿಕೆಗೆ ಆತನನ್ನು ಕಾರ್ಯವಿಮುಖನನ್ನಾಗಿ ಮಾಡಲಿಲ್ಲವೆಂಬುದೇ ಸ್ವಾಮಿಗಳು ಆತನ ಬಗೆಗೆ ಇಟ್ಟುಕೊಂಡಿದ್ದ ವಿಶ್ವಾಸಕ್ಕೆ ಮೂಲ.

ಮಹಾತ್ಮರಾದವರ ಜೀವನ ಎಷ್ಟು ಕ್ರಮವಾಗಿ, ಆದರ್ಶವಾಗಿ, ನಿಷ್ಕಲ್ಮಷವಾಗಿ ನಡೆಯುತ್ತದೆಯೋ ಅವರ ಮುಂದಿನ ಜೀವನವೂ ಅಷ್ಟೇ ಸ್ಪಷ್ಟವಾಗಿ ಅವರಿಗೆ ಗೋಚರಿಸುತ್ತದೆ. ಲೌಕಿಕವಾಗಿ ಹತ್ತಾರು ಮೋಹ ಬಂಧನಗಳಿಗೆ ಸಿಲುಕಿದ ಸಾಮಾನ್ಯ ಜೀವಿಗೆ ಈ ಲೋಕವನ್ನು ತ್ಯಜಿಸುವುದೆಂದರೆ ಅಪಾರ ನೋವು; ಬಿಡಲಾರದ ಮೋಹ. ಆದರೆ ಬದುಕಿನಲ್ಲಿ ಅಧ್ಯಾತ್ಮದ ಅರ್ಥವನ್ನು ತಿಳಿಯಲು ಹೆಣಗಿ ಆ ಹಂತವನ್ನು ಮುಟ್ಟಲು ಹತ್ತಿರ ಹತ್ತಿರವಾದ ವಿಶೇಷ ಚೇತನಕ್ಕೆ ಈ ಜೀವನವನ್ನು ತೊರೆಯುವುದು ಕಿಂಚಿತ್ ನೋವನ್ನು ಉಂಟುಮಾಡದು. ಬದಲಾಗಿ ಈ ಜೀವನ ಮತ್ತೊಂದು ಮಹಾ ಜೀವನಕ್ಕೆ ಕೊಂಡೊಯ್ಯುವ ಮೆಟ್ಟಲಾಗಿ ಪರಿಣಮಿಸುತ್ತದೆ. ಪರಿಣಾಮವಾಗಿ ಇಂತಹ ಮಹಾ ಚೇತನ ಲೋಕ ಜೀವನದ ಕುಲುಮೆಯಲ್ಲಿ ಕಾದು ಕಲ್ಮಷವನ್ನು ಕಳೆದ ಚೊಕ್ಕ ಚಿನ್ನವಾಗಿ ರೂಪುಗೊಳ್ಳುತ್ತದೆ. ಆ ಮೇಲೆ ಕುಲುಮೆಯ ಸಂಪರ್ಕ ಬೇಕಿಲ್ಲ.

ಗುರುಪಾದ ಸ್ವಾಮಿಗಳ ವರ್ತನೆಯಲ್ಲಿ ಕೆಲವು ಬದಲಾವಣೆಗಳು ಕಾಣತೊಡಗಿದವು. ಅವರು ಹೆಚ್ಚು ಮಾತನಾಡುತ್ತಿರಲಿಲ್ಲ. ಮೌನವೇ ಅವರ ಮಂತ್ರವಾಗಿತ್ತು. ರಾತ್ರಿಯ ಪ್ರಸಾದವನ್ನು ತ್ಯಜಿಸಿ ಹಲವಾರು ವರ್ಷಗಳೇ ಆಗಿದ್ದವು. ಬಂದ ಭಕ್ತರ ಮಂಡೆಯ ಮೇಲೆ ಕೈಯಿಟ್ಟು ಹರಸುವುದನ್ನು ಬಿಟ್ಟರೆ ಬೇರೆ ವಿಷಯ ಪ್ರಸ್ತಾಪ ತುಂಬ ಅಪರೂಪವಾಗಿ ಹೋಗಿತ್ತು.

ಹೀಗಿರಲು ಶಾ. ಶ. ೧೭೬೪ರ ಆಷಾಢ ಕೃಷ್ಣ ಅಮಾವಾಸ್ಯೆಯ ದಿನ ಮುಚ್ಚಂಜೆಯಲ್ಲಿ ಮಠದ ಸೇವಕರನ್ನು ಕಳಿಸಿ ಬಬಲೇಶ್ವರದ ಪ್ರಮುಖರನ್ನು ಮಠಕ್ಕೆ ಬರಮಾಡಿಕೊಂಡರು. ಬಹಳ ದಿನಗಳಿಂದ ಇಂತಹ ಕರೆ ಕಾಣದಿದ್ದ ಭಕ್ತ ಜನ ಕೂಡಲೇ ಬಂದು ಕುತೂಹಲದಿಂದ ಸ್ವಾಮಿಗಳ ಬಳಿಗೆ ಸೇರಿದರು. ಆ ಕಾಲಕ್ಕಾಗಲೇ ಸ್ವಾಮಿಗಳು ಹಣ್ಣಾಗಿ ಹೋಗಿದ್ದರು. ಮಾತಿನಲ್ಲಿ ಸ್ಪಷ್ಟತೆ ಕಡಿಮೆ ಆಗಿತ್ತು. ಆದರೂ ಮಠದ ತುಂಬ ಕುಳಿತಿದ್ದ ಭಕ್ತ ವೃಂದವನ್ನು ಕಂಡು ಸ್ವಾಮಿಗಳಿಗೆ ಉತ್ಸಾಹ ಮರುಕಳಿಸಿ ಬಂದಿತು. ಅವರೇ ಮಾತನ್ನು ಆರಂಭಿಸಿದರು.

"ನೀವೆಲ್ಲ ಬಬಲೇಶ್ವರ ಮಠದ ನಿಷ್ಠೆಯ ಭಕ್ತರೆಂಬುದು ಈಗ ಸ್ಥಿರಪಟ್ಟಿದೆ. ಈ ಮಠದ ಶ್ರೇಯಸ್ಸು, ತೇಜಸ್ಸು ಎಲ್ಲವೂ ನಿಮ್ಮ ಸಹಕಾರದ ಫಲ. ಮುಂದೆ ಅದನ್ನು ಉಳಿಸಿ ಬೆಳಿಸುವ ಭಾರ ನಿಮ್ಮೆಲ್ಲರ ಮೇಲಿದೆ. ಈಗ ನಿಮ್ಮನ್ನು ಬರಮಾಡಿ ಕೊಂಡ ಉದ್ದೇಶವೆಂದರೆ ನನಗೆ ಶಿವನ ಅಪ್ಪಣೆಯಾಗಿದೆ. ಅವನ ಕರೆ ಬಂದಮೇಲೆ ಯಾರೂ ಒಂದು ಘಳಿಗೆ ತಡಮಾಡುವಂತಿಲ್ಲ. ಹೊರಡಬೇಕು. ನಾಳೆ ನಾವು ಈ ಶರೀರ ವಿಸರ್ಜನೆ ಮಾಡುವೆವು." ಎಂದು ಸ್ಪಷ್ಟವಾಗಿ ನುಡಿದರು.

ಈ ಮಾತುಗಳನ್ನು ಆಲಿಸುತ್ತ ಕುಳಿತಿದ್ದ ಜನರಿಗೆ ತಮ್ಮ ಕಣ್ಣು ಕಿವಿಗಳನ್ನೇ ನಂಬದಷ್ಟು ಅನುಮಾನವಾದಂತಾಯಿತು. ಆದರೂ ಸ್ವತಃ ಸ್ವಾಮಿಗಳು, ಜೀವ ಮಾನದಲ್ಲೇ ಎಂದೂ ಅಪಹಾಸ್ಯಕ್ಕಾದರೂ ಅಸತ್ಯ ನುಡಿಯದ ಮಹಾ ಪುರುಷರು. ಅವರ ಬಾಯಿಂದಲೇ ನೇರವಾಗಿ ಬಂದ ಮಾತುಗಳೆಂದರೆ ನಂಬಲೇಬೇಕಾಯಿತು.

ಹಾಗೆ ನುಡಿದ ಸ್ವಾಮಿಗಳು ಸ್ವಲ್ಪವೂ ಅಚಲರಾಗದೆ ಮಾರನೆಯ ದಿನ ಬೆಳಿಗ್ಗೆ ಮತ್ತೆ ಅವರಿಗೆಲ್ಲ ಬರಬೇಕೆಂದು ಹೇಳಿ ಮೇಲಕ್ಕೆದ್ದು ಗುರುಮಠದೊಳಗೆ ಹೋಗುವುದ ರಲ್ಲಿದ್ದಾಗ ನೆರೆದಿದ್ದ ಇಡೀ ಜನಸ್ತೋಮ ಧಾರಾಕಾರವಾಗಿ ಕಣ್ಣೀರು ಸುರಿಸುತ್ತ ಮೌನವಾಗಿ ಸ್ವಾಮಿಗಳಿಗೆ ವಂದಿಸಿತು.

ಮಠದಲ್ಲಿ ನಡೆದ ಈ ವಿಷಯ ಊರಿಗೆಲ್ಲ ಹರಡುವುದು ತಡವಾಗಲಿಲ್ಲ. ಅಕ್ಕ ಪಕ್ಕದ ಗ್ರಾಮಗಳಿಗೂ ಸುದ್ದಿ ಹಬ್ಬಿತು. ಕೆಲವರು ಸ್ವಾಮಿಗಳ ಅಗಲಿಕೆಯ ದುಃಖವನ್ನು ಕಣ್ಣೀರಿನಲ್ಲಿ ಸೂಚಿಸಿದರೆ, ಸ್ವಲ್ಪ ಬಲ್ಲವರು ಮಹಾತ್ಮರ ಜೀವನದ ಪರಿಯನ್ನು ಕುರಿತು ಚಿಂತಿಸಿದರು. "ಮರಣವೇ ಮಹಾನವಮಿ" ಎಂಬ ಶರಣರ ನುಡಿಯ ಅರ್ಥವನ್ನು ಮನನ ಮಾಡಿಕೊಂಡರು. ಆದರೂ ಬಬಲೇಶ್ವರ ಮತ್ತು ಸುತ್ತ ಮುತ್ತಲಿನ ಜನತೆಯ ನಿತ್ಯ ಜೀವನದಲ್ಲಿ ಒಂದಾಗಿ ಹೊಂದಿಕೊಂಡಿದ್ದ ಮಹಾ ಜೀವ ತಮ್ಮನ್ನು ಅಗಲುವುದೆಂಬ ಮಹಾ ವೇದನೆ ಎಲ್ಲರ ಮನಸ್ಸಿನಲ್ಲೂ ಮೂಡ ತೊಡಗಿತು.

ಮರುದಿನ ಬೆಳಿಗ್ಗೆ ಮಠದ ಒಳಗೆ ಹೊರಗೆ ಸ್ಥಳವಿದ್ದ ಎಲ್ಲ ಕಡೆ ಜನಸ್ತೋಮ ಕಿಕ್ಕಿರಿದು ನೆರೆಯಿತು. ಇದೊಂದು ಅಲೌಕಿಕವಾದ ಪ್ರಸಂಗವಾದುದರಿಂದ ಕುತೂ ಹಲ ಮರಿಗೆ ಮರಿಯಿಕ್ಕಿ ಮಡುಗಟ್ಟಿತು.

ಅಷ್ಟೊಂದು ಜನ ಸೇರಿದ್ದರೂ ಅಪೂರ್ವವಾದ ಮೌನ ವಾತಾವರಣವನ್ನು ಆಲಂಗಿಸಿತ್ತು. ಶಿವನೇ ವೃದ್ಧ ಜಂಗಮನಾಗಿ ಭುವಿಗೆ ಬಂದಿರುವನೋ ಎಂಬಂತೆ ಸ್ನಾನ ಮಾಡಿ ಸ್ವಾಮಿಗಳು ಬೆತ್ತದ ನೆರವಿನಿಂದ ಗುರುಮಠದ ಬಾಗಿಲ ಬಳಿ ಬಂದರು. ಸಭೆ ಮೌನವಾಗಿ, ಯಾಂತ್ರಿಕವಾಗಿ ತಲೆಬಾಗಿ ಮೇಲೆದ್ದು ಮತ್ತೆ ಕುಳಿತುಕೊಂಡಿತು.

ಸ್ವಾಮಿಗಳು ಒಮ್ಮೆ ಕತ್ತೆತ್ತಿ ಮೇಲೆ ನೋಡಿ, "ಇದು ನಮಗೆ ನಿಮ್ಮೆಲ್ಲರ ಕೊನೆಯ ದರ್ಶನ. ಈಗ ನಾವು ಇಹದ ಕಡೆಯ ಲಿಂಗಾರ್ಚನೆಗೆ ಕೂಡುವೆವು.

ಅದು ಉಳಿದಿರುವ ಐದು ಘಳಿಗೆ ಮಾತ್ರ. ಆರನೆಯ ಘಳಿಗೆಯ ನಂತರ ಗುರುಮಠದ ಬಾಗಿಲ ತೆರೆದು ನನ್ನ ಐಹಿಕ ದೇಹವನ್ನು ಕಂಬಳಾಸನ ಸಮೇತ ಹೊರ ತಂದು ಪ್ರಭಾವಲಯದ ಚೌಕಿಯಲ್ಲಿ ಕೂಡಿಸಿ ಸಮಾಧಿಗೊಳಿಸಬೇಕು. ಮೆರವಣಿಗೆ ಮಾಡ ಬೇಡಿರಿ. ಶಾಂತಚಿತ್ತದಿಂದ ಶಿವನಾಮ ಪಠಿಸಿರಿ." ಎಂದು ಹೇಳಿ ಕಡೆಯದಾಗಿ ತಮ್ಮ ವರದ ಹಸ್ತವನ್ನು ಮೇಲೆತ್ತಿ ಜನತೆಯನ್ನು ಆಶೀರ್ವದಿಸಿದರು. ಹಾಗೆಯೇ ಮೆಲ್ಲಗೆ ಹೆಜ್ಜೆಯಿಡುತ್ತ ಗುರುಮಠ ಪ್ರವೇಶಿಸಿ ಬಾಗಿಲು ಹಾಕಿಕೊಂಡರು.

ಈ ಒಂದೊಂದು ಘಳಿಗೆಯನ್ನು ಮಂತ್ರ ಮುಗ್ಧರಾಗಿ ನೋಡುತ್ತಿದ್ದ ಜನ ಸ್ವಾಮಿಗಳು ಒಳಗೆ ಪ್ರವೇಶಿಸುತ್ತಿದ್ದಂತೆ ಶಾಂತರೀತಿಯಲ್ಲಿ ಒಕ್ಕೊರಲಿನಿಂದ ಶಿವ ನಾಮ ಸ್ಮರಣೆಯನ್ನು ಆರಂಭಿಸಿತು. ಈ ಧ್ವನಿಯ ಮಧ್ಯೆ ಗುರುಮಠದೊಳಗಿಂದ ಸ್ವಾಮಿಗಳು ಪಠಿಸುತ್ತಿದ್ದ ಶಿವನಾಮ ಸ್ತೋತ್ರ, ಘಂಟಾನಾದ ಅಲೆಯಲೆಯಾಗಿ ಕೂಡಿ ಬಂದಿತು. ನಾಲ್ಕು ಘಳಿಗೆ ಕಳೆಯುವುದರೊಳಗೆ ಆ ಧ್ವನಿ ಕ್ಷೀಣವಾಗುತ್ತ ಬಂದಂತೆ ಅದರೊಂದಿಗೆ ಭಕ್ತರ ಭಜನೆಯ ಧ್ವನಿಯೂ ಕುಗ್ಗಿತು. ಆರನೆಯ ಘಳಿಗೆ ಪ್ರವೇಶಿಸುತ್ತಿದ್ದಂತೆ ಗುರುಮಠದೊಳಗಿನ ಧ್ವನಿ ಶೂನ್ಯವಾಯಿತು. ಅದನ್ನನುಸರಿಸಿ ಭಕ್ತರ ಧ್ವನಿ ಸ್ತಬ್ಧವಾಯಿತು. ಇಡೀ ವಾತಾವರಣ ಅವರ್ಣನೀಯವಾದ ಮೌನ ಸಾಗರದಲ್ಲಿ ಮುಳುಗಿ ಹೋಯಿತು.

ಆರನೆಯ ಘಳಿಗೆ ತುಂಬುತ್ತಿದ್ದಂತೆ ಗುರುಮಠದ ಬಾಗಿಲನ್ನು ತೆರೆಯಲಾಯಿತು. ಬಬಲೇಶ್ವರ ಮಠವನ್ನು ಕಟ್ಟಿ, ಬೆಳೆಸಿ ಪ್ರಬುದ್ಧ ಸ್ಥಿತಿಗೆ ತಂದು ಆದರ್ಶದ ಹಾದಿಯಲ್ಲಿ ಒಂದು ಮೈಲಗಲ್ಲಾಗಿ ನಿಲ್ಲಿಸಿದ ಶ್ರೀ ಗುರುಪಾದ ಸ್ವಾಮಿಗಳು ಇಹದ ಬದುಕನ್ನು ತ್ಯಜಿಸಿ ಪರವನ್ನು ಅಪ್ಪಿದರು. ಶೂನ್ಯ ಶೂನ್ಯವನ್ನು ಸೇರಿತು. ಭೌತಿಕ ಕಾಯ ಮಾತ್ರ ಇಹದ ಸಂಕೇತವಾಗಿ ಉಳಿದಿತ್ತು. ಎಡಗೈಯಲ್ಲಿ ಲಿಂಗ, ಬಲಗೈಯಲ್ಲಿ ಜಪಮಾಲೆ ಹಿಡಿದು ಬಲಗಡೆ ಸ್ವಲ್ಪ ವಾಲಿದ್ದ ಸ್ವಾಮಿಗಳ ಭೌತಿಕ ಶರೀರವನ್ನು ಕಂಬಳಾಸನದೊಂದಿಗೆ ನಾಲ್ಕು ಜನ ಭಕ್ತರು ಎತ್ತಿ ತಂದು ಪಡಸಾಲೆಯ ಪ್ರಭಾವಲಯದ ಚೌಕಿಯಲ್ಲಿ ಕೂಡಿಸಿದರು.

ಆ ದಿನ ಮಧ್ಯಾಹ್ನದ ವರೆಗೆ ಭಕ್ತ ಜನ ಅವಿರತವಾಗಿ ತಮ್ಮ ನೆಚ್ಚಿನ ಸ್ವಾಮಿ ಗಳಿಗೆ ಭಜನೆ, ಅರ್ಚನೆ, ಸಲ್ಲಿಸಿದರು. ಒಡೆದ ತೆಂಗಿನ ಕಾಯಿಗಳ ನೀರು ಹಳ್ಳವಾಗಿ ಹರಿಯಿತು. ಹಚ್ಚಿದ ದೂಪ, ದೀಪಗಳ ಧೂಮ ವಾತಾವರಣವನ್ನು ಮೋಡ ಕವಿದಂತೆ ಮಾಡಿತು. ನೆರೆದಿದ್ದವರ ಮನಸ್ಸಿನಲ್ಲಿ ಮೋಡ ಕವಿದಿದ್ದರೂ ಅದು ಸುಗಂಧದ ಮೋಡವೇ ಆಗಿತ್ತು. ಏಕೆಂದರೆ ಸ್ವಾಮಿಗಳ ಸಂದೇಶ, ಉಪದೇಶ ಬದುಕಿನ ಎಂತಹ ಕಾರ್ಮೋಡವನ್ನು ಕಳೆಯಬಲ್ಲ ಮಹಾ ಶಕ್ತಿಯಾಗಿತ್ತು.

ಆ ನಂತರ ವಿಧಿಪೂರ್ವಕವಾಗಿ ಶಿವಪಂಚಾಕ್ಷರಿ ಮಂತ್ರ ಪಠಣ ಹೊಂದಿಗೆ ಶಾಸ್ತ್ರಾನುಸಾರವಾಗಿ ಭೌತಿಕ ಶರೀರವನ್ನು ಚೌಕಿಯೊಂದಿಗೆ ಎತ್ತಿ ಆಗಲೇ

ಸಿದ್ಧಪಡಿಸಿದ್ದ ಕ್ರಿಯಾಸಮಾಧಿಯಲ್ಲಿ ಕೂಡ್ರಿಸಿ ಪಾದುಕೆ, ಆಸನ, ಪೂಜಾ ಸಾಮಾಗ್ರಿಗಳೊಂದಿಗೆ ಸಮಾಧಿ ಗೊಳಿಸಿದರು.

ಮಠದ ಮುಂದಿರುವ ಮಹಾ ಗದ್ದುಗೆಯಲ್ಲಿಯ ಮಧ್ಯದ ಗದ್ದುಗೆಯೇ ಗುರುಪಾದ ಸ್ವಾಮಿಗಳ ಗದ್ದುಗೆಯಾಗಿದೆ. ಎಡಗಡೆ ಇರುವುದು ಅವರ ಗುರುಗಳಾದ ಮೂಲ ಶಾಂತವೀರ ಸ್ವಾಮಿಗಳ ಗದ್ದುಗೆ, ಬಲಗಡೆ ಇರುವದು ಮೂರನೆಯವರಾದ ಶಾಂತವೀರ (೨) ಸ್ವಾಮಿಗಳ ಗದ್ದುಗೆ. ಆನಂತರ ಆಗಿಹೋದ ನಾಲ್ಕನೆಯವರಾದ ಶ್ರೀ ರಾಚೋಟೇಶ್ವರ ಸ್ವಾಮಿಗಳ ಹಾಗೂ ಐದನೆಯವರಾದ ಶ್ರೀ ಶಾಂತವೀರ (೩) ಸ್ವಾಮಿಗಳ ಗದ್ದುಗೆಗಳನ್ನು ಈ ದೊಡ್ಡ ಗದ್ದುಗೆಯ ಮುಂಭಾಗದಲ್ಲಿರುವವೆಂಬದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಮರೆಯಲಾಗದ ಮಹಾ ಪುರುಷರ ಮೂರ್ತಿಯನ್ನು ಮನದಲ್ಲಿ ಮೂಡಿಸಿಕೊಂಡು ಜನಸ್ತೋಮ ನಿದಾನವಾಗಿ ಕರಗಿತು.

ಶ್ರೀ ಗುರುಪಾದ ಸ್ವಾಮಿಗಳು ಶರೀರವನ್ನು ತ್ಯಜಿಸಿದ ಈ ಸನ್ನಿವೇಶ ಕೇಳುವವರಿಗೆ ಕಟ್ಟು ಕತೆಯಾಗಿ ಕಾಣಬಹುದು. ಆದರೆ ಇದು ಸತ್ಯಸಂಗತಿ• ತಾವು ಬಾಹ್ಯ ದೇಹವನ್ನು ತ್ಯಜಿಸುವ ಈ ವಿಚಾರವನ್ನು ನಿತ್ಯದ ವ್ಯವಹಾರದ ಮಾತಿನಷ್ಟು ಸಹಜವಾಗಿ ಸ್ವಾಮಿಗಳು ವಿವರಿಸಿದರು. ಲೌಕಿಕರಿಗೆ ಇದು ಆಶ್ಚರ್ಯವೆನಿಸಿದರೂ ಅವರ ಜೀವನದಲ್ಲಿ ಇದು ಸಹಜವಾಗಿ ನಡೆಯಿತು. ಜನಮನದಲ್ಲಿ ಅಚ್ಚಳಿಯದೆ ನೆನಪಾಗಿ ಉಳಿಯಿತು!

ಶ್ರೀ ಗುರುಪಾದ ಮಹಾ ಶಿವಯೋಗಿಗಳು ಜನಿಸಿದ್ದು ಶಾ. ಶ. ೧೬೭೦. ತೊಂಭತ್ತು ನಾಲ್ಕು ವರುಷ ದಿವ್ಯ ಜೀವನ ಸಾಗಿಸಿ, ಶ್ರಾ. ಶು. ಪ್ರತಿಪದೆ ಶಾ. ಶ. ೧೭೬೪ ರಲ್ಲಿ ಮಹಾಲಿಂಗದಲ್ಲಿ ಮಿಲಿನವಾದದ್ದು.

ಈಗ ಅವರು ಜನಿಸಿ ೨೨೮ ವರುಷ, ಲಿಂಗೈಕ್ಯವಾದುದು ೧೩೪ ವರುಷಗಳಾದವೆಂಬ ಮಾತನ್ನು ಇಲ್ಲಿ ಸ್ಮರಿಸಬಹುದಾಗಿಧೆ.

"ಶ್ರೀ ಗುರುಪಾದ ಶಿವಯೋಗಿಗಳು ತೊಂಭತ್ತು ನಾಲ್ಕನೆಯ ವಯಸ್ಸಿನಲ್ಲಿ ಶಕೆ ೧೭೬೪, ಶ್ರಾವಣ ಶುದ್ಧ ಪ್ರತಿಪದ ಸೋಮವಾರ ದೇವಾಜ್ಞಾಝುಲಾ" ಎಂಬುದಾಗಿ ಮರಾಠಿ ಭಾಷೆಯಲ್ಲಿದೆ. ಆಗ ಸರಕಾರಿ ರಿಕಾರ್ಡ ಮರಾಠಿ ಭಾಷೆಯಲ್ಲಿಡಲಾಗುತ್ತಿತ್ತು.

ಲಿಂ. ಗುರುಪಾದ ಸ್ವಾಮಿಗಳ ಗದ್ದಿಗೆಯ ಪೂಜೆಯು ದಿನಾಲು ಬೆಳಿಗ್ಗೆ, ಸಂಜೆಗೆ ಈ ರೀತಿ ಎರಡು ಸಲ ಪ್ರತಿ ದಿನ ನಿಯಮಿತವಾಗಿ ನಡೆಯುತ್ತಿದೆ. ಈ ಗದ್ದಿಗೆಗೆ ದಿನಾಲು ಎಲ್ಲ ಜಾತಿಯ ಸಾವಿರಾರು ಜನರು ಭಕ್ತಿ ಭಾವದಿಂದ ನಡೆದುಕೊಳ್ಳುವರು: ಬಬಲೇಶ್ವರದಲ್ಲಿ ತಮ್ಮ ಮಕ್ಕಳಿಗೆ ತಾಯಂದಿರು 'ಗುರುಪಾದ' ಎಂಬ ಹೆಸರಿಡುವದು ವಾಡಿಕೆಯಾಗಿದೆ.

ಗುರುಪಾದ ಸ್ವಾಮಿಗಳು ತಾವಿದ್ದಾಗಿನಿಂದ ಪ್ರಾರಂಭಿಸಿದ, ಪ್ರತಿ ವರುಷ ಶ್ರಾವಣ ಮಾಸದಲ್ಲಿ ಪುರಾಣ ಪ್ರವಚನ, ಭಾದ್ರಪದ ಮಾಸದಲ್ಲಿ ನಡೆಯುವ ಗಣಾರಾಧನೆಯು ಈ ವರೆಗೆ ಅವಿಚ್ಛಿನ್ನವಾಗಿ ನಡೆಯುತ್ತ ಬಂದಿದೆ. ಬಬಲೇಶ್ವರ ಮಠದಲ್ಲಿ ನಡೆಯುವ ಈ ಧಾರ್ಮಿಕ ಕಾರ್ಯ ಕ್ರಮಕ್ಕೆ ವಿಶೇಷ ಮಹತ್ವವಿರುವದು.

ಇವರ ಚರಿತ್ರೆಯು ಅವರ ಹಿಂದಿನ ಪುರಾಣವನ್ನು ಕೆಲಮಟ್ಟಿಗೆ ಆಧಾರಿತ ವಾಗಿದ್ದರೂ ಅವರ ಕಾಲದಲ್ಲಿದ್ದ ಶ್ರೀಮತಿ ಗಂಗವ್ವ ಪುರಾಣಿಕ ಮಠ, ಗುರುಪಾದಪ್ಪ ಬಿರಾದಾರ ಬುಳ್ಳವಗೋಳ, ಮಲ್ಲಪ್ಪ ಶಿವಕ್ಕಗೋಳ ಇವರೇ ಮೊದಲಾದವರಿಂದ ಈಗಿನ ಶ್ರೀ ಶಾಂತವೀರ ಸ್ವಾಮಿಗಳು ಸ್ವತಃ ಕೇಳಿದ ವಿಷಯಗಳು ಕೂಡ ಸಂಗ್ರಹಿತವಾಗಿವೆ.

ಈ ಚರಿತ್ರೆಯ ಎಲ್ಲ ವಿಷಯಗಳನ್ನು ಬರೆದು ಮುಂಚಿತವಾಗಿ ಶ್ರೀ ಶಾಂತ ವೀರ ಸ್ವಾಮಿಗಳಿಗೆ ಓದಿ ತೋರಿಸಿ ಆನಂತರ ಅಧಿಕೃತವಾಗಿ ಪ್ರಕಟಪಡಿಸಲಾಗಿದೆ. ಅದರಂತೆ ಈಗಿನ ಶ್ರೀ ಶಾಂತವೀರ ಸ್ವಾಮಿಗಳ ಚರಿತ್ರೆಗೆ ಕೂಡ ತೆಲಸಂಗವ ಶ್ರೀ ಬಸವಲಿಂಗ ಸ್ವಾಮಿಗಳು ಈ ಮೊದಲು ಪ್ರಕಟಪಡಿಸಿದ ಚರಿತ್ರೆಯಲ್ಲಿ ಬಂದ ಕೆಲ ವಿಷಯ ಆಧಾರಿತವಾಗಿದ್ದರೂ, ಹೆಚ್ಚಿನ ವಿಷಯ ಸಂಗ್ರಹಿಸಿ ಅವುಗಳನ್ನು ಕೂಡ ಸ್ವಾಮಿಗಳಿಗೆ ಓದಿತೋರಿಸಿ ಪ್ರಕಟಪಡಿಸಲಾಗಿದೆ.

ಗುರುಪಾದ ಸ್ವಾಮಿಗಳ ಗದ್ದಿಗೆಯ ಮುಂದೆ ನಂದಬಸಪ್ಪ ಬಾಬಣ್ಣಗೋಳ, ಜಿ. ಜಿ. ಬಿರಾದಾರ, ಶಾಂತಪ್ಪ ಭಾವಿಕಟ್ಟಿ, ನಂದಬಸಪ್ಪ ಬುಳ್ಳವಗೋಳ ಇವರು ಸದಾನಂದಾದೀಪ ಭಕ್ತಿ ಭಾವದಿಂದ ಬೆಳಗುವಂತೆ ಮಾಡಿರುವರು.

ಗುರುಪಾದ ಸ್ವಾಮಿಗಳು ತಾವಿದ್ದಾಗ ತಮ್ಮ ಇಬ್ಬರು ಭಕ್ತರಿಗೆ ಒಂದೇ ರೀತಿಯ ಎರಡು ಮನೆಗಳನ್ನು ಕಟ್ಟಿಸಿ ಕೊಟ್ಟಿರುವರು. ಈಗಲು ಕೂಡ ಅವುಗಳಿಗೆ ಮಠದವರ ಮನೆಗಳೆಂದು ಹೇಳಲಾಗುತ್ತಿದೆ.

ಗುರುಪಾದ ಸ್ವಾಮಿಗಳು ಉಪಯೋಗಿಸುತ್ತಿದ್ದ 'ಯೋಗದಂಡ' ಮತ್ತು 'ಲೋಷು'ಗಳು ಈಗಲು ಕೂಡ ಮಠದಲ್ಲಿವೆ. ಅಲ್ಲದೆ ಶ್ರೀ ಜಗದ್ಗುರು ರಂಭಾಪುರಿ ಗುರು ಪೀಠದಿಂದ ನೀಡಲಾದ 'ಬಿಲ್ಲಾ'ಗಳು ಕೂಡ ಇರುವವು.

ಅವರು ಸದಾ ಕಂಬಳಾಸನದಮೇಲೆ ಕೂಡ್ರುತ್ತಿದ್ದರು. ಆಸನದ ಕೆಳಗೆ ಹುರಿದ ಕಡ್ಲಿಯನ್ನು ಸದಾ ಇಡುತ್ತಿದ್ದರು. ದರ್ಶನಕ್ಕೆ ಬಂದ ಮಕ್ಕಳಿಗೆ ಮಾತ್ರ ಅವನ್ನು ಕೊಡುವ ಪರಿಪಾಠ ವಿದ್ದಿತು.

ಗುರುಪಾದ ಸ್ವಾಮಿಗಳು ಭಕ್ತರಿಂದ ಕಳಿಸಲ್ಪಟ್ಟ ಪ್ರಸಾದವನ್ನು ಸಾಮಾನ್ಯವಾಗಿ ಸ್ವೀಕರಿಸುತ್ತಿದ್ದರು. ಅದರೊಂದಿಗೆ ನಿತ್ಯ ಮಜ್ಜಿಗೆ, ಕುಸಿಬಿ ಹಸೆ ಬೀಜ ಸ್ವೀಕರಿಸುವ

ಅವರ ವಾಡಿಕೆ ಇದ್ದಿತು. ಅವರು ಕೌಪಿನ ಹಾಗೂ ಹೊದೆಯಲು ಹಚ್ಚಡ ಮಾತ್ರ ಉಪಯೋಗಿಸುತ್ತಿದ್ದರು.

ಅವರು ಸ್ವಾವಲಂಬಿಗಳು. ಅವರ ಕಣ್ಣು ಕಾಣದಕಾಲದಲ್ಲಿ ಕೂಡ ಬೆತ್ತದ ನೆರವಿನಿಂದ ಯಾರ ಸಹಾಯವಿಲ್ಲದೆ ಮಠದಲ್ಲಿ ಸಂಚರಿಸುತ್ತಿದ್ದರೆಂಬ ಮಾತನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಗುರುಪಾದ ಸ್ವಾಮಿಗಳ ಗದ್ದಿಗೆಯಲ್ಲಿಯ ಬೆಳ್ಳಿ ಮೂರ್ತಿ, ಕೆಲ ವರುಷಗಳ ಹಿಂದೆ ಮಾಯವಾಗಿ ಹೋಗಿತ್ತು. ಈ ವಿಷಯ ಮಠದವರಿಗೂ ಮರವೆ ಆಗಿ ಹೋಗಿತ್ತು. ಆದರೆ ಮುಂದೆ ಆರು ವರುಷಗಳ ನಂತರ ಅದೇ ಮೂರ್ತಿ ಅಚ್ಚಳಿಯದಂತೆ ಗದ್ದಿಗೆಗೆ ಪುನಃ ಆಗಮನವಾದುದು, ಒಂದು ಅಚ್ಚರಿಯ ವಿಷಯವಾಗಿ ಈಗಲೂ ಹಾಗೇ ಉಳಿದಿದೆ.

ಗುರುಪಾದ ಸ್ವಾಮಿಗಳು ಇಹದ ಯಾವ ಚಟುವಟಿಕೆಗಳಿಂದ ದೂರಾಗದೆ, ಪರದ ದಿವ್ಯ ಜೀವನವನ್ನು ಪಡೆದ ಸಿದ್ಧಪುರುಷರು. ಸ್ವಾಮಿತ್ವದ ತುಟ್ಟ ತುದಿಯನ್ನು ಸವಿದ ಸತ್ಪುರುಷರು. ಬಬಲೇಶ್ವರ ಭಾಗದ ಭಕ್ತರಿಗೆ ಬೆಳಕನ್ನು ಬೀರಿದ ಮಹಾ ಪುರುಷರು.

ಅವರ ದೀರ್ಘವಾದ ಜೀವನದಲ್ಲಿಯ ಕೆಲ ವಿಷಯಗಳು ಈ ಚರಿತ್ರೆಯಲ್ಲಿ ಬೆಳಕಿಗೆ ಬಂದಿದ್ದರೂ, ಬಹು ಭಾಗವು ಬೆಳಕಿಗೆ ಬಾರದೆ ಉಳಿದಿವೆ. ಹಿಂದಿನ ಯಾವ ಮಹಾತ್ಮರ ಚರಿತ್ರೆಗಳು ಕೂಡ ಇದಕ್ಕೆ ಅಪವಾದವಾಗಿರುವದಿಲ್ಲ.

ಅವರ ಬಾಹಿಕ, ಆಂತರಿಕ ಆತ್ಮ ಶಕ್ತಿಯು, ಬಬಲೇಶ್ವರ ಭಾಗದ ಭಕ್ತಾದಿಗಳ ಹೃದಯದಲ್ಲಿ ಹಿಡಿದಿಟ್ಟು ಕೊಂಡುದೇ ಲಿಖಿತವಾಗದ ನಿಜವಾದ ಚರಿತ್ರೆ; ಈಗ ಬರೆಯಲಾದ ಚರಿತ್ರೆ ಅದರ ನೆರಳು ಮಾತ್ರ ಎಂದು ಹೇಳಬಹುದಾಗಿದೆ.

ಬಬಲೇಶ್ವರ ಭಾಗದ ಕೃಷಿ-ಕಾರ್ಮಿಕರು, ಮಕ್ಕಳು, ಮುದುಕರು, ಮಹಿಳೆಯರು-ಮಹಾಜನರು, ಬಡವ-ಬಲ್ಲಿದರು ಗುರುಪಾದೇಶ್ವರರ ಬಗ್ಗೆ ಭಕ್ತಿ ಭಾವದಿಂದ ನಿತ್ಯ ನಡೆದುಕೊಳ್ಳುವದಕ್ಕೆ ಅವರ ಅದೃಶ್ಯ 'ಆತ್ಮ'ಶಕ್ತಿಯೇ ಆಧಾರ. ಅದು ಎಂದೂ ಆರದ ಆರತಿ. ಆ ಬೆಳಕಿನಲ್ಲಿ ಸರ್ವ ಭಕ್ತರು ಬಾಳುವಂತಾಗಲೆಂದು ನಮ್ಮ ಬಯಕೆ.

---

# ಶ್ರೀ ಶಾಂತವೀರ ಶಿವಯೋಗಿಗಳು

## ೧. ಗೌರ ಪಾತ್ರ ಗೌರವ

ನಮ್ಮೂರ ಮಠದಾಗ ಒಳಗ ಸೇದುವ ಗುಂಡ
ಗಚ್ಚೀನಗ್ವಾಡಿ ಗಡಗಾಡಿ ಶಾಂತವೀರಸ್ವಾಮಿ
ಪೂಜಕ ಮಡಿನೀರ ಒಯದಾರ

—ಜನಪದಗೀತೆ.

ಸಾಮಾಜಿಕ ಜೀವಿ ಮಾನವ! ಮಾನವ ಜೀವನ ನಿರ್ವಹಣದಲ್ಲಿ ಹಲವಾರು ಪಾತ್ರಗಳು ಅಗತ್ಯ. ಜಾಗತಿಕ ಜೀವನವೆ ಒಂದು ಬೃಹನ್ನಾಟಕ. ಇದೊಂದು ಸೋಜಿಗದ ನಾಟಕ. ಹಗಲಿರುಳು ಬಿಡದೆ ನಡೆವ ನಾಟಕ. ಉಸಿರಿರುವವರೆಗೆ ಪಾತ್ರ ನಿರ್ವಹಿಸುವ ನಾಟಕ. ಪಾತ್ರಗಳ ನಿರ್ದಿಷ್ಟವಿಲ್ಲದ ನಾಟಕ. ಅಸಂಖ್ಯ ಪಾತ್ರಗಳಲ್ಲಿ ಗೌರ ಪಾತ್ರವೂ ಒಂದು. ಒಂದು ಮಾತ್ರವಲ್ಲ ಸರ್ವೋತ್ಕೃಷ್ಟ ಪಾತ್ರ.

ಸಾಮಾಜಿಕ ಸಂಸ್ಕೃತಿಯನ್ನು ಸುಂದರವಾಗಿ ರೂಪಿಸುವಲ್ಲಿ ಗುರುವಿನ ಪಾತ್ರ ಮೌಲಿಕವಾದುದೆಂದು ಬೇರೆ ಹೇಳಬೇಕಾಗಿಲ್ಲ. ಗುರುತ್ವ ಸಮಾಜ ನಿಷ್ಠ. ಸಾಮಾಜಿಕ ಶ್ರೇಯಸ್ಸೆ ಗುರುದೇವನ ಶ್ರೇಯಸ್ಸು. ಅದರಿಂದ ಅಭಿವ್ಯಕ್ತವಾಗುತ್ತದೆ ಗುರು ದೇವನ ತೇಜಸ್ಸು. ಆ ಗೌರ ತೇಜಸ್ಸಿನಲ್ಲಿ ಸಮಾಜ ತನ್ನ ಆರೋಗ್ಯವನ್ನು ಕಾಪಾಡಿ ಕೊಳ್ಳುತ್ತದೆ. ಯೋಗ್ಯ ಪಥದಲ್ಲಿ ಮುನ್ನಡೆಯುತ್ತದೆ. ಏಳ್ಗೆಯ ಏಣಿಯನ್ನು ಏರುತ್ತದೆ. ಈ ಏಳ್ಗೆಯಿಂದ ಗುರುಭಾನುವಿನ ತೇಜಸ್ಸು ತಾತ್ತ್ವಿಕವಾಗಿ ಸಾರ್ಥಕವಾಗು ತ್ತದೆ; ಸಾಂಸ್ಕೃತಿಕವಾಗಿಯೂ ಸಾರ್ಥಕವಾಗುತ್ತದೆ. ಹೀಗೆ ಸಮಾಜದಿಂದ ಶ್ರೀಗುರು, ಶ್ರೀಗುರುವಿನಿಂದ ಸಮಾಜ ಪರಸ್ಪರ ಪೂರಕ, ಪರಸ್ಪರ ಪ್ರೇರಕ.

ಸಾಮಾಜಿಕ ಕ್ಷೇತ್ರದಲ್ಲಿ ಗುರು ಪಾತ್ರ ಭಾನು ಪ್ರತೀಕ. ಗುರು ಭಾನು ಬರೀ ಬೆಳಕು ಬೀರುವವನಲ್ಲ; ಜೊತೆಗೆ ಬದುಕು ಮಾಡಿಸಬಲ್ಲ. ಅರಿವಿನ ಬೆಳಕಿನೊಡನೆ ಕ್ರಿಯಾಚಾರದ ಬದುಕನ್ನು ಮಾಡಿಸಬಲ್ಲ. ಸಾಮಾಜಿಕರ ಬಾಳನ್ನು ಹದಗೊಳಿಸಿ ಜ್ಞಾನಕ್ರಿಯಾತ್ಮಕ ಮೌಲ್ಯ ಬೀಜಗಳನ್ನು ಬಿತ್ತಬಲ್ಲ; ಬೆಳೆಯಬಲ್ಲ. ಹೂ ಹಣ್ಣಾಗಿಸ ಬಲ್ಲ. ಉದಾತ್ತ ಭಾವಗಳನ್ನು ಉದ್ದೀಪನಗೊಳಿಸಬಲ್ಲ.

ಜ್ಞಾನ ಕ್ರಿಯೆಗಳು ಜೀವನ ಮೌಲ್ಯಗಳು. ಒಂದು ಅಂತರಂಗ ಶಕ್ತಿ. ಇನ್ನೊಂದು ಇನ್ನೊಂದು ಬಹಿರಂಗ ಶಕ್ತಿ. ಈ ಉಭಯ ಶಕ್ತಿಗಳ ಪರಿಣಾಮವೆ ಅನಂಭಾವಿಕ ಶಕ್ತಿ. ಇವುಗಳಿಂದ ಮಾನವ ಜೀವನ ಪರಿಪುಷ್ಟವಾಗುತ್ತದೆ. ಇವನ್ನು ಗುರುದೇವನು ಕರುಣಿಸುತ್ತಾನೆ. ಇವನ್ನು ಉದ್ದೀಪನಗೊಳಿಸುವ ಗೌರ ಪಾತ್ರ ಗೌರ ಸಾಮರ್ಥ್ಯ ಸಣ್ಣದೇನಲ್ಲ. ಗುರುವಿನಲ್ಲಿ ಶಾಂತಿ, ಸಮಾಧಾನ, ಸಮಭಾವ, ದಾರ್ಶನಿಕ ದೃಷ್ಟಿ, ಸಚ್ಚಾರಿತ್ರ, ಕ್ರಿಯಾಶಕ್ತಿ, ಸಾಮಾಜಿಕ ಜೀವನ, ಸಾಂಸ್ಕೃತಿಕ ಭಾವನ, ಸನಾತನ ಶ್ರದ್ಧೆ, ಸರ್ವಾದರ್ಶಜೀವನ, ಸಾಂಸ್ಕಾರಿಕಾನುಭವ, ಬೋಧನ ಸಾಮರ್ಥ್ಯ ಇವು ಇದ್ದಾಗಬೇಕು. ಜೊತೆಗೆ ಧಾರ್ಮಿಕ ಸ್ಫೂರ್ತಿಯನ್ನು ಸಾಮಾಜಿಕರಲ್ಲಿ ತುಂಬುವ ಚೇತನವಿದ್ದಾಗಬೇಕು, ಇವುಳ್ಳ ಗೌರ ಪಾತ್ರ ಗೌರವ ಅಷ್ಟಿಷ್ಟಲ್ಲ. ಆ ಗೌರ ಪಾತ್ರ ಸಮುದ್ರದಂತೆ ಗಂಭೀರ; ಬಾನಿನಂತೆ ಬಿತ್ತರ.

ಮಾನವನಂತೆ ಗುರು ಸಮಾಜ ಜೀವಿ. ಸಮಾಜವನ್ನು ಬೆಳಗುವುದೆ ಗುರು ಮಹಿಮ. ಗುರು ಜೀವನ ಸಮಾಜಕ್ಕೆ ಮೀಸಲು. ಸಾಮಾಜಿಕರ ಜೀವನವನ್ನು ಬೆಳಗುವುದೇ ಗುರುಭಾನುವಿನ ದೈನಂದಿನ ಜೀವನ. ಆತ ರಸ ಸ್ವರೂಪನಾಗಿ ತೇಜೋವಂತನಾಗಿ ಬಾಳುತ್ತಾನೆ. ಕ್ರಿಯಾ ಶಕ್ತಿಯ ಕಮ್ಮಟ ಆತನ ಕಾಯ. ಜ್ಞಾನ ಜ್ಯೋತಿಯ ಆಗಸ ಆತನ ಚೇತನ. ಕರುಣ ರಸದ ಕಡಲು ಆತನ ಹೃದಯ. ಆ ಕಮ್ಮಟದ ಆಶ್ರಯ ಪಡೆದವರು ಕ್ರಿಯಾನಿರತರಾಗುತ್ತಾರೆ. ಆ ಆಗಸದ ಜ್ಯೋತಿಯಲ್ಲಿ ಬೆಳಗುತ್ತಾರೆ; ಆತ್ಮ ಪ್ರಜ್ಞೆಯನ್ನು ಪಡೆಯುತ್ತಾರೆ. ಆ ಕರುಣ ರಸದ ಕಡಲಲ್ಲಿ ಮುಳುಗಿದವರು ಅನರ್ಘ್ಯಗುಣಗಣ ರತ್ನಗಳನ್ನು ದೊರಕಿಸಿಕೊಳ್ಳುತ್ತಾರೆ.

ಗುರು ತನ್ನ ಅತ್ಯಂತವಾದ ಕ್ರಿಯಾಶಕ್ತಿಯಿಂದ ಮಾನವ ಶ್ರೇಷ್ಠನಾಗಿ ನಿಲ್ಲುವನು. ಸತ್ಕ್ರಿಯೆಗಳಿಂದ ತನ್ನ ಕಾಯ ಬಲವನ್ನು ಹೆಚ್ಚಿಸಿಕೊಳ್ಳುವನು. ಕರ್ಮ ಕೊಳೆಯನ್ನು ಕಳೆದುಕೊಳ್ಳುವನು. ತನ್ನನಾಶ್ರಯಿಸಿದವರ ಕಾಯ ಶುದ್ಧಿಯನ್ನು ಮಾಡಿ ಕ್ರಿಯಾ ನಿರತರನ್ನಾಗಿಸುವನು. ಮಾನವ ಜೀವನವನ್ನು ಅಸತ್ತಿನಿಂದ ಸತ್ತಿಗೆ ಸಾಗಿಸುವ ಶ್ರೇಷ್ಠ ಸಂಸ್ಕಾರವಿದು. ಸಕ್ರಿಯತೆ ಜೀವನದ ಸಂಜೀವನ. ಸುಜ್ಞಾನದಿಂದ ಗುರು ತನ್ನ ಮನ ಪ್ರಾಣಗಳ ಶಕ್ತಿಯನ್ನು ಹೆಚ್ಚಿಸಿಕೊಂಡು ಬೌದ್ಧಿಕ ಸಿದ್ಧಿಯನ್ನು ವೃದ್ಧಿಯನ್ನು ಪಡೆದಿರುತ್ತಾನೆ. ಅದು ಅಂತರಂಗವನ್ನು ಬಹಿರಂಗವನ್ನು ಬೆಳಗುವ ಜ್ಯೋತಿ: ತಮಸ್ಸಿನಿಂದ ತೇಜೋಲೋಕಕ್ಕೆ ಕರೆದೊಯ್ಯುವ ಕಳೆ. ಆ ಕಳೆಯನ್ನು ರೂಢಿಸಿಕೊಂಡ ಗುರು ಅದನ್ನು ಮಂತ್ರ ಮುಖದಲ್ಲಿ ಶಿಷ್ಯರಿಗೆ ಉಪದೇಶಿಸಿ ಶಿಷ್ಯರ ಅಂತರಂಗದ ಅಜ್ಞಾನಾಂಧಕಾರವನ್ನು ಕಳೆಯುತ್ತಾನೆ. ಸಕ್ರಿಯತೆಯಿಂದ ಬಲ ಬಂದರೆ ಸಮ್ಯಗ್ ಜ್ಞಾನದಿಂದ ಬಾಳಿಗೆ ಬೆಳಕು ಬರುತ್ತದೆ. ಇದರಿಂದ ಮುಚ್ಚಿದ ಅರಿವಿನ ಅಚ್ಚೆ ತೆರೆಯುತ್ತದೆ. ದಾರ್ಶನಿಕ ದೃಷ್ಟಿಯುಂಟಾಗುತ್ತದೆ. ಪ್ರಾತಿಭ ಶಕ್ತಿ ವಿಕಾಸವಾಗು

ತ್ತದೆ. ವ್ಯಷ್ಟಿ ಸಮಷ್ಟಿ ಪ್ರಜ್ಞೆಯಿಂದ ಹೃದಯ ಹದಗೊಳ್ಳುತ್ತದೆ. ಕಾರುಣ್ಯ ರಸೋದಯವಾಗುತ್ತದೆ.

ಕಾರುಣ್ಯರಸ ಅದೊಂದು ದಿವ್ಯಾಮೃತ. ದುಃಖಿತರನ್ನು ದುಮ್ಮಾನಿಗಳನ್ನು ಕಂಡು ದ್ರವಿಸುವ ರಸ. ದುಃಖ ದುಮ್ಮಾನಗಳನ್ನು ದೂರ ಮಾಡುವ ರಸ. ಸಂಸಾರ ಸಾಗರವನ್ನು ದಾಟಿಸುವ ವಿಶಿಷ್ಟ ಶಕ್ತಿ. ಅದು ಕೇವಲ ಕಾವ್ಯರಸವಲ್ಲ, ದಿವ್ಯ ರಸ; ಜೀವರಸವಲ್ಲ, ದೇವ ಸದೃಶ ರಸ. ಅದರಿಂದ ಜೀವಾತ್ಮ ಪರಮಾತ್ಮನಾಗ ಬಲ್ಲ; ಆಗುತ್ತಾನೆ. ಪರಮಾತ್ಮನೆಂದರೆ ವಿಶ್ವ ವಿಶಾಲಭಾವವುಳ್ಳ ಆತ್ಮ, ವಿಶ್ವ ಕಲ್ಯಾಣಕ್ಕಾಗಿ ಪರಿಶ್ರಮಿಸುವ ಆತ್ಮ. ದಮನ ದಾನ ದಯೆಗಳುಳ್ಳ ಚೇತನ. ಕ್ರಿಯಾಜ್ಞಾನಾನುಭವವುಳ್ಳ ಶಾಂತಿಕಲೆಯುಳ್ಳ ಚೇತನ. ವಿಶಾಲಕ್ರಿಯೆ, ವಿಶಾಲ ಪ್ರಜ್ಞೆ, ವಿಶಾಲಾನುಭವವುಳ್ಳ ವೀರ ಚೇತನ. ವ್ಯೋಮದಂತೆ ವಿಮಲ ಚೇತನ.

ಸಾಮಾಜಿಕರ ಮಾನವೀಯಕ್ಕೆ ಅನುಚಿತವಾದ ಕರ್ಮಗಳನ್ನೆಲ್ಲ ಬಿಡಿಸಿ ಸಾಮೂಹಿಕ ಸತ್ಕಾರ್ಯಗಳನ್ನು ಮಾಡಿಸುತ್ತಾನೆ. ಸಾಮೂಹಿಕ ಪ್ರವಚನದಿಂದ ಬೋಧಿಸುತ್ತಾನೆ. ಇದೊಂದು ಬಗೆಯ ಸಮಷ್ಟಿ ದೀಕ್ಷೆ. ಇದರಿಂದ ಸ್ಥೂಲ ಕಾರ್ಮಿಕಮಲ ಕಳಚುತ್ತದೆ. ಸಾಮಾನ್ಯ ಪ್ರಜ್ಞೆಯ ಪ್ರಕಾಶವುಂಟಾಗುತ್ತದೆ. ಸಮಷ್ಟಿ ಬಂಧನ ಪರಿಹಾರವಾಗು ತ್ತದೆ. ಸಾಮಾಜಿಕ ಮಾರ್ಗದರ್ಶನ ಕಾರ್ಯನಿರತನಾಗಿರುತ್ತಾನೆ. ತನ್ನ ಪಾತ್ರ ವನ್ನು ನಿರ್ವಹಿಸುತ್ತಾನೆ. ತನ್ನಲ್ಲಿರುವ ಕ್ರಿಯಾಜ್ಞಾನಾನುಭವಗಳನ್ನು ಸಾರ್ಥಕ ಗೊಳಿಸುತ್ತಾನೆ.

ಶಿವಾದ್ವೈತ ಶ್ರೀ ಗುರುವಿಗೆ ಸತ್ಕ್ರಿಯೆ, ಸಮ್ಯಗ್ ಜ್ಞಾನ ಅಥವಾ ಶಿವಾತ್ಮ ಜ್ಞಾನ, ಸ್ವಾನುಭಾವ ಇವು ಇದ್ದಾಗಬೇಕು. ಇವಿರುವಾತನೆ ನಿಜವಾದ ಗುರು. ಸಮರ್ಥ ಸದ್ಗುರು. ಆತನ ಹಸ್ತನೇತ್ರಗಳು ಪರುಷ. ಆತನ ಆಡುವ ಮಾತು ಮಂತ್ರವಾಗಿ ವಾಕ್ಪರುಷವೆನಿಸುತ್ತದೆ. ಆತನ ಭಾವ ಪರುಷವಾಗಿ ಅನುಭಾವ ಪ್ರಸಂಗ ರಸವತ್ತಾಗಿ ಚಿತ್ತಾಕರ್ಷಕವಾಗುತ್ತದೆ. ಆತನ ಕಾಯ ವಾಙ್ಮನಗಳಲ್ಲಿ ಒಂದು ಅಪೂರ್ವ ಶಕ್ತಿ ಸಮನಿಸಿರುತ್ತದೆ. ಆತನು ಮಾನವೀಯ ಸತ್ತ್ವಯ ಬೃಹತ್ಕೇಂದ್ರನಾಗುತ್ತಾನೆ. ಅವನಿಂದ ಸಾಮಾಜಿಕರ ಉದ್ಧಾರವಾಗುತ್ತದೆ. . ಆತನ ಆಕೃತಿಯಲ್ಲಿ ಮಾತಿನಲ್ಲಿ ಭಾವದಲ್ಲಿ ಒಂದು ಅಪೂರ್ವ ಪ್ರತಿಭೆಯಿರುತ್ತದೆ. ತನ್ನ ತ್ರಿಕರಣ ಸತ್ವದಿಂದ ಸರ್ವೋತ್ಕೃಷ್ಟ ಸಂಸ್ಕಾರವನ್ನು ವ್ಯಕ್ತಗೊಳಿಸುತ್ತಾನೆ. ಅದರಿಂದ ಶ್ರಾವಕರ ಸಾಧಕರ ಚಿತ್ತಗಳನ್ನು ಪರಿವರ್ತಿಸುತ್ತಾನೆ. ಆ ಗುರುವಿನ ಆ ತ್ರಿಕರಣ ಕಾರ್ಯ ಅನನ್ಯಸಾಧಾರಣವಾಗಿರುತ್ತದೆ. ಅದರ ಆಳ ಅಗಲ ಎತ್ತರ ಎಟಕ ದಂತಹವು. ಅದರಿಂದ ಆತನ ವ್ಯಕ್ತಿತ್ವ ವಿಶಿಷ್ಟವೆನಿಸುತ್ತದೆ; ಗೌರ ವಾರ್ಹವೆನಿಸು ತ್ತದೆ. ಮೊದಲು ಮಾಡುವ, ಆಮೇಲೆ ಆಡುವ, ಅನಂತರ ಅನುಭವಿಸುವ ಮುಪ್ಪುರಿ

ಬಾಳು ಗುರುವಿನದು. ಈ ತ್ರಿವೇಣಿ ಸಂಗಮದಲ್ಲಿ ಮೊಮ್ಮೊದಲು ತಾನು ಮಿಯುತ್ತಾನೆ; ಬಳಿಕ ಸಾಮಾಜಿಕರನ್ನು ಮಿಯಿಸುತ್ತಾನೆ.

ಸಾಮಾಜಿಕ ಜೀವನದಲ್ಲಿ ಹಲವಾರು ಸಂಬಂಧಗಳಿವೆ. ಅವುಗಳಲ್ಲಿ ಗುರು-ಶಿಷ್ಯ ಸಂಬಂಧವೆ ಶ್ರೇಷ್ಠವಾದುದು; ಶಾಶ್ವತವಾದುದು. ದೇಶ ಅರ್ಥ ದೇಹ ಸಂಬಂಧಗಳಂತೆ ಇದು ಬಿಟ್ಟು ಹೋಗುವಂತಹದಲ್ಲ. ಇದು ಆತ್ಮೀಯ ಸಂಬಂಧವಾದ್ದರಿಂದ ಅಮರವಾದುದು. ಅಭ್ಯುದಯ ನಿಶ್ರ್ಶೇಯಗಳಿಗೆ ಕಾರಣವಾದುದು. ಆತ್ಮಾನುಸಂಧಾನವೆ ಇದರ ಮಾಧ್ಯಮ. ಆತ್ಮಾನುಭವ ಆತ್ಮಾನಂದಗಳೆ ಸರ್ವೋತ್ತಮ ಫಲಗಳು.

ಹೊರಗಿನ ಈ ವ್ಯಾವಹಾರಿಕ ವಿವಿಧ ಸಂಬಂಧಗಳಲ್ಲಿ ಜೀವನಕ್ಕೆ ಯಾವ ಸತ್ಯ ಸಂಬಂಧವಿಲ್ಲ. ನಿರ್ದುಷ್ಟವೂ ನಿರ್ದಿಷ್ಟವೂ ಆದ ಗೊತ್ತುಗುರಿಯಿಲ್ಲ. ಪರಮ ಪ್ರಯೋಜನವಿಲ್ಲ. ನಿಲುಗಡೆಯಿಲ್ಲದ ಬಾಳು. ನಿಜದ ನಿಲುವಿಗೆ ನಿಲುಕದ ಬಾಳು; ಬಾಳಿ ಏನು ಫಲ? ತನ್ನನ್ನೇ ಸಾಧಿಸದ ಸಂಬಂಧಗಳಿಂದ ಸುಖವೇನು? ಆ ಆತ್ಮಾನುಸಂಧಾನದ ಗುರಿಗಾಗಿ ಇವು ಸಹಾಯಕಗಳಾದರೆ ಆಗ ಸಫಲಗಳಾಗುತ್ತವೆ. ಅದಿಲ್ಲವಾದರೆ ಗಂಟು ಹಾಕದೆ ಹಗ್ಗ ಹೊಸೆದಂತೆ ವ್ಯರ್ಥವಾಗುತ್ತವೆ.

ಆತ್ಮಾನುಸಂಧಾನಕ್ಕೆ ಆತ್ಮಾನುಭೂತಿಗೆ ಮುಖ್ಯವಾದುದು ಗುರು-ಶಿಷ್ಯ ಸಂಬಂಧ. ಇದರಿಂದ ತನ್ನ ಬಗೆಗೆ ಸಮರ್ಪಕವೂ ಸಮರ್ಥವೂ ಆದ ರೀತಿಯಲ್ಲಿ ವಿಚಾರಮಾಡುವ, ಮಾಡಿ ಆಚರಿಸುವ ಸೌಕರ್ಯವಿದೆ. ಅದಕ್ಕೆ ತಕ್ಕ ಮಾರ್ಗದರ್ಶನ ಗುರುದೇವನಿಂದಾಗುತ್ತದೆ. ನೇರವಾಗಿ ಗಮ್ಯ ಗುರಿಗೆ ಗಮನಿಸಲು ಅನುಕೂಲವಾಗುತ್ತದೆ. ಪರಿಣಾಮಕಾರಿಯಾದ ಫಲವನ್ನು ಪಡೆಯಲು ಸಾಧ್ಯವಾಗುತ್ತದೆ. ವ್ಯವಹರಿಸಿಯೂ ವಿಶಿಷ್ಟ ಶಕ್ತಿಯನ್ನು ಶಾಂತಿಯನ್ನು ಸಂಗಳಿಸಲು ಯಾವ ಅನುಮಾನವಿಲ್ಲ. ಇತಿ ಮಿತಿಗಳ ಬೇಕು ಬೇಡಗಳ ವಿವೇಚನ ಶಕ್ತಿಯುಂಟಾಗುತ್ತದೆ. ತ್ಯಾಗ ಭೋಗಗಳ ಸಮನ್ವಯ ಸಮನಿಸುತ್ತದೆ. ಸದಿಚ್ಛೆ ಶ್ರದ್ಧೆಗಳುದಿಸುತ್ತವೆ. ಹೆದ್ದಾರಿಯಲ್ಲಿ ಹೋಗುವ ದೃಷ್ಟಿ ಬರುತ್ತದೆ. ಸಹಜವಾಗಿ ಸರಸವಾಗಿ ಸರಳವಾಗಿ ಜೀವಿಸುವ ಯೋಗವೊದಗುತ್ತದೆ. ಸತ್ಕ್ರಿಯಾಶಕ್ತಿ ಸುಜ್ಞಾನ ದೃಷ್ಟಿ ಉಂಟಾಗುತ್ತವೆ. ಮೈ ಮನಗಳ ದಾರಿಯಲ್ಲಿ ಈತನು ಹೋಗದೆ, ಈತನ ದಾರಿಯಲ್ಲಿಯೇ ಮೈ ಮನಗಳು ಬರುತ್ತವೆ. ಅಂದರೆ ದೇಹೇಂದ್ರಿಯಗಳನ್ನು ದಮನಿಸುವ ದಾರ್ಷ್ಟ್ಯವುಂಟಾಗುತ್ತದೆ. ಬೇಗ ಲೌಕಿಕ ದಂದುಗವನ್ನು ನೀಗುತ್ತಾನೆ. ದ್ರೋಹಕರ ವ್ಯವಹಾರಗಳನ್ನು ನಿಲ್ಲಿಸುತ್ತಾನೆ. ಕ್ರೂರತನ ಕುಹಕತನಗಳನ್ನು ಕೈ ಬಿಡುತ್ತಾನೆ. ಸತ್ಯ ಸಾತ್ವಿಕ ಜೀವನವನ್ನು ಸಾಗಿಸುತ್ತಾನೆ. ಶುದ್ಧ ಚಿತ್ತನಾಗಿರುತ್ತಾನೆ. ತನಗೆ ಒದಗಿ ಬಂದುದರಲ್ಲಿಯೇ ತೃಪ್ತಿಪಡುತ್ತಾನೆ. ಶುದ್ಧ ಕಾಯಕಕ್ಕೆ ಸಿದ್ಧನಾಗುತ್ತಾನೆ.

ಅನ್ಯಾಯದ ಅನಿಷ್ಟ ಲಾಭಗಳಿಗೆ ಬಾಯ್ನೀರುಂ ಬಿಡನು. ಆತ್ಮ ಲಾಭಕ್ಕೆ ಆತ್ಮ ಸುಖಕ್ಕೆ ಅಪೇಕ್ಷಿಸಿ ಆ ಹೊಲಬಿನಲ್ಲಿ ಹೆಜ್ಜೆಹಾಕುತ್ತಾನೆ. ಶ್ರವಣ ಮನನಗಳಿಗೆ, ಧಾರಣ ಅರ್ಚನಾದಿಗಳಿಗೆ ಮನ ಮಾಡುತ್ತಾನೆ. ಅಂಟಿಕೊಂಡ ಜಾಡ್ಯವನ್ನು ಪರಿಹರಿಸಿಕೊಳ್ಳುತ್ತಾನೆ. ಅಹಂಕಾರ ಮಮಕಾರಗಳಿಗೆ ಒಳಗಾಗನು. ನಿಷ್ಕಂಟಕ ಪಥಗಾಮಿಯಾಗುತ್ತಾನೆ. ಗುರು ಕರುಣೆಗೆ ಗುರುಂ ದರ್ಶನಕ್ಕೆ ಹಂಬಲಿಸುತ್ತಾನೆ. ಗುರುಂ ತೋರುವ ಗುರಿ ಹೆಚ್ಚು ಒಳಿತಾದುದೂ ಒಗ್ಗುವಂತಹದೂ ಎಂದು ಎಣಿಕೆ ಹಾಕುತ್ತಾನೆ. ಅದಕ್ಕಾಗಿ ಕಣ್ಣಿಡುತ್ತಾನೆ, ಕೈ ಚಾಚುತ್ತಾನೆ. ಆಗ ಹೊರಗಿನ ಹಲವು ಹರಿದಾಟ ನಿಂತು ಹೋಗುತ್ತದೆ; ಹಂಬಲ ನಿಂತು ಹೋಗುತ್ತದೆ; ಅದರ ಹಂಬಲ ಹೆಚ್ಚುತ್ತದೆ. ಅದು ಹೆಚ್ಚಿದಷ್ಟೂ ಲೇಸು. ಅದರಿಂದಾಗುವುದು ಅಚ್ಚಳಿಯದ ಸೊಗಸು.

ಈ ದಿಸೆಯಲ್ಲಿ ಗುರುದೇವನ ನೆರವು ಅನಿವಾರ್ಯ. ಆ ದಾರಿಯಲ್ಲಿ ಸಾಗುವಾಗ ಬರುವ ಅಡೆ-ತಡೆಗಳನ್ನು ಬಿಡಿಸಬಲ್ಲ ಗುರುದೇವ; ಅಳುಕ ಅಂಜಿಕೆಗಳನ್ನು ತೊಡೆಯಬಲ್ಲ ಗುರುದೇವ. ಇವೆಲ್ಲ ತೊಲಗದೆ ಪಯಣ ಸರಾಗವಾಗಿ ಸಾಗದು. ಪಯಣಿಗನ ಮನಕ್ಕೆ ಸಮಾಧಾನವೊದಗದು. ಇಷ್ಟವಾದುದು ಸ್ಪಷ್ಟವಾಗಿ ಗೋಚರಿಸದು. ಸ್ಪಷ್ಟತೆಗೆ ಬೇರೆ ಅವಕಾಶವಿರದು; ಇದ್ದರೂ ಅನುಕೂಲವಿರದು. ನಿಸ್ಸಹಾಯಕನಾದ ನಿಜ ಸಾಧಕ ನಿಜಗುರಿಗೆ ನಿಲುಕಬೇಕಾದರೆ ಗುರುದೇವನ ನೆರವು ಒಂದು ಹಿರಿದಾದ ಬಲ. ಏಕೆಂದರೆ ಆ ಗುರಿ ಹೆಚ್ಚು ಎತ್ತರದ್ದು. ಅಲ್ಲಿಗೇರಬೇಕಾದರೆ ಬೇಕು ಗುರುಬಲ.

ಅಪೂರ್ಣತೆಯಿಂದ ಪೂರ್ಣತೆಗೆ ಪಯಣಿಸುವುದೇನು ಸುಲಭವಲ್ಲ. ಬಲ ಬೇಕು; ಬೆಳಕು ಬೇಕು. ಅದಕ್ಕೆ ಈ ಬಾನಿನ ಬೆಳಕು ಏತಕ್ಕೂ ಸಾಲದು. ಗುರುಂ ಭಾನುವಿನ ಭಾವ ಪೂರ್ಣ ಬೆಳಕು ಬೇಕು. ತಾನಿರುವ ತಮಸ್ಸನ್ನು ತೊಡೆದು ಆ ತಿಳಿ ಬೆಳಕಿಗೆ ಬರಬೇಕಾದರೆ ಶಿವಾತ್ಮ ವಿದ್ಯಾಗುರುವಿನ ಪ್ರದೀಪವನ್ನು ಪಡೆಯಬೇಕು. ಆಗ ಬಾಳ ಬಟ್ಟೆಯಲ್ಲಿ ಬೆಳಕು ಮೂಡುತ್ತದೆ. ಆ ಬೆಳ್ಳಂ ಬೆಳಕಿನಲ್ಲಿ ದಾರಿಯೂ ಸಾಗುತ್ತದೆ; ಗುರಿಯೂ ತೋರುತ್ತದೆ.

ಪರಿಪೂರ್ಣತೆ ಅದೊಂದು ಅಪಾರ್ಥಿವ ಗೌರೀಶಂಕರ ಶಿಖರ. ಅದನ್ನು ಏರಲು ಅಲ್ಲಿಗೆ ಸೇರಲು ಎಲ್ಲರಿಗೂ ಆಗದ ಕೆಲಸ. ಅದಕ್ಕೆ ಬೇಕು ಗುರು-ಬಲ — ಗುರುಂ ಬೆಳಕು. ಗುರು ಕರುಣಿಸುವ ಕ್ರಿಯಾಶಕ್ತಿ ಸಣ್ಣದಲ್ಲ; ಜ್ಞಾನದೀಪ್ತಿ ಸೀಮಿತವಲ್ಲ. ಕೈ ಕಾಲುಗಳಿಗೆ ಕ್ರಿಯಾಶಕ್ತಿಯನ್ನು, ಬುದ್ಧಿ ಭಾವಗಳಿಗೆ ಭವ್ಯ ಜ್ಞಾನದೀಪ್ತಿಯನ್ನು ಕರುಣಿಸುತ್ತಾನೆ. ಜೊತೆಗೆ ಶ್ರದ್ಧೆ ನಿಷ್ಠೆ ಅವಧಾನ ಅನುಭವಗಳನ್ನು ಅನುಗ್ರಹಿಸುತ್ತಾನೆ. ಆಗ ಆ ಆನಂದಕ್ಕೆ ಸೇರಲು ಅವಸ್ಥೆಯೊದಗದು; ಆ ಶಿಖರಕ್ಕೆ ಏರಲು ಆಯಾಸವೊದಗದು.

ಸಕ್ರಿಯೆ ಸಮ್ಯಗ್ ಜ್ಞಾನಗಳ ಸಮನ್ವಯವೆ ಪರಿಪೂರ್ಣತೆಯ ಸತ್ಯ ಸ್ವರೂಪ. ಇವೆರಡರಲ್ಲಿ ಯಾವುದೊಂದಿಲ್ಲದಿದ್ದರೂ ಕೊರತೆ. ಅದು ಒಕ್ಕಾಲು. ಒಕ್ಕಾಲಿನಿಂದ ನಡೆವುದೆಂತು? ಒಂದು ರೆಕ್ಕೆಯಿಂದ ಹಕ್ಕಿ ಹಾರಬಲ್ಲುದೆ? ಒಂದು ಗಾಲಿಯಿಂದ ಬಂಡಿ ನಡೆಯಬಲ್ಲುದೆ? ಕ್ರಿಯೆಯಿಲ್ಲದ ಜ್ಞಾನ ಕುಂಟ; ಜ್ಞಾನವಿಲ್ಲದ ಕ್ರಿಯೆ ಕುರುಡ. ಇವೆ ರಡರಿಂದ ಕೂಡಿದಾತನೆ ಶ್ರೀ ಗುರು. ದೃಕ್ಕ್ರಿಯಾ ದೀಪ್ತಿಯಿಂದ ಬೆಳಗುವ ಜೀವಂತ ಜ್ಯೋತಿ ಶ್ರೀ ಗುರು. ಜ್ಯೋತಿಯಂತೆ ಸುತ್ತಲೂ ಮುಖವುಳ್ಳಾತ. ಸುತ್ತಲೂ ಹೊಂಬೆಳಕನ್ನು ಬೀರುವಾತ. ಮರ್ತ್ಯದ ಮಣಿಹವನ್ನು ಸೂರ್ಯನಂತೆ ಸಾಗಿಸು ವಾತ. ಶಿಷ್ಯರ ಪಿಂಡಾಂಡವನ್ನೆಲ್ಲ ಬೆಳ್ಳಂ ಬೆಳಗುವಾತ. ಪೂರ್ಣ ಲಕ್ಷಣ ಲಕ್ಷಿತ. ಅದುಳ್ಳ ಗುರುದೇವ ನಿತ್ಯ.

ಮಾನವನಿದ್ದಾನೆ ಅಜ್ಞಾನ ಕತ್ತಲೆಯಲ್ಲಿ; ಕರ್ಮ ಬಂಧನದಲ್ಲಿ. ಇವುಗಳಿಂದ ಅಪೂರ್ಣನೆನಿಸಿದ್ದಾನೆ. ಪೂರ್ಣ ಜ್ಞಾನ ಕ್ರಿಯಾಸ್ವರೂಪನಾದ ಶ್ರೀ ಗುರು ಕರುಣೆಗೆ ಒಳಗಾದರೆ ಕರ್ಮ ಬಂಧನ ಕತ್ತರಿಸಿ ಹೋಗಿ ಅಜ್ಞಾನ ಕತ್ತಲೆ ಕಳಚಿ ನೀಗಿ ಪೂರ್ಣತೆ ಗೇರುತ್ತಾನೆ. ಅಣುತ್ವದಿಂದ ವಿಭುತ್ವಕ್ಕೆ ಬರುತ್ತಾನೆ. ಮಹಂತತೆಗೆ ಮುಟ್ಟುತ್ತಾನೆ. ಸುಖ-ದುಃಖಗಳ ಎಲ್ಲೆಯನ್ನು ದಾಟುತ್ತಾನೆ. ಅದೇಕೆ ದ್ವಂದ್ವಗಳನ್ನೆಲ್ಲ ದಾಟು ತ್ತಾನೆ. ಗುರುದೇವನ ಉಪದೇಶದ ಬಲದಿಂದ ಗುರುಮಂತ್ರಾನುಷ್ಠಾನ ಬಲದಿಂದ ಓಂಕಾರದಾಚೆ ಸಾಗಿ ಅನಿರ್ವಾಚ್ಯ ಪ್ರಣವಾತ್ಮಕವಾದ ಪ್ರಪೂರ್ಣವಾದ ಶೂನ್ಯವನ್ನು ಸಂಪಾದಿಸುತ್ತಾನೆ. ತಾನು ತಾನಾಗುತ್ತಾನೆ. ತನ್ನೊಳಗೆಲ್ಲವೂ ಅಡಗಿರುತ್ತದೆ. ಅಖಂಡ ಸ್ವರೂಪವಾಗಿ ತನಗೆ ಬೇರೊಂದಿರದು. ಅದೇ ಆ ಮಹಾಲಿಂಗ ಸ್ವರೂಪ; ಮಹಾ-ಆತ್ಮಸ್ವರೂಪ. ಅದರ ಅನುಸಂಧಾನಕ್ಕಾಗಿ ಗುರುಕರುಣೆ ಅಗತ್ಯ, ಅನಿವಾರ್ಯ.

ಗುರು ತನ್ನ ಆತ್ಮೋದ್ಧಾರವೊಂದೇ ತನ್ನ ಧ್ಯೇಯವೆಂದು ಎಂದೂ ಭಾವಿಸುವು ದಿಲ್ಲ. ಆತನದು ಸೂರ್ಯ ಸದೃಶವಾದ ಜೀವನ. ಸೂರ್ಯನ ಬೆಳಕು ಸೂರ್ಯನಿ ಗಾಗಿ ಮಾತ್ರವಲ್ಲ. ಲೋಕವನ್ನು ಬೆಳಗುವುದೆ ಆದಿತ್ಯ ಕೃತ್ಯ. ಅಂತೆಯೆ ಗುರು ಸಮಾಜವಾದಿ. ಸಮಾಜೋದ್ಧಾರವೆ ಆತನ ಮಣಿಹ. ಜಗತ್ತಿನ ಕಲ್ಯಾಣವೆ ತನ್ನ ಕಲ್ಯಾಣವೆಂದು ಭಾವಿಸುತ್ತಾನೆ. ಭಾವಿಸಿದಂತೆ ಯತ್ನಿಸುತ್ತಾನೆ. ಇದರಿಂದ ಈತ ಜಗದ್ಗುರು. ವ್ಯಷ್ಟಿ ಜಗತ್ತಿಗೂ ಸಮಷ್ಟಿ ಜಗತ್ತಿಗೂ ಗುರುವಾಗಿ ಬೆಳಗುತ್ತಾನೆ. ಮತ್ತು ಹೆದ್ದೊರೆಯಂತೆ ತನ್ನ ಕರುಣ ರಸವನ್ನು ಹರಿಸುತ್ತಾನೆ.

ಕರುಣ ರಸವೂ ಅಹುದು, ಪ್ರಕಾಶವೂ ಅಹುದು. ಅದರಿಂದ ಶುಷ್ಕವಾದ ಹೃದಯ ಭೂಮಿ ಮಿದು (ತೇವ)ವಾಗುತ್ತದೆ; ತಮದ ಬಂಧನದಿಂದ ಬಿಡುಗಡೆ ಯನ್ನು ಹೊಂದುತ್ತದೆ. ರಾಜಸ ವೃತ್ತಿಯಿಂದ ಹೃದಯ ಶುಷ್ಕವಾಗಿರುತ್ತದೆ; ತಮೋಗುಣದಿಂದ ಮಂಗಾಣದಾಗಿರುತ್ತದೆ. ರಜಸ್ತಮಗಳ ಆವರಣವೆ ಮಾಯೆ,

ಮತ್ತು ಅದೆ ಭವಬಂಧ. ಇದು ಮಾನವ ಹೃದಯವನ್ನು ಬಿಗಿದು ಹಾಕಿರುತ್ತದೆ. ಬಿಗಿಯುವಿಕೆಯೆಂದರೆ ಸ್ವಾರ್ಥ. ಇದನ್ನು ಬಿಚ್ಚುತ್ತಾನೆ ಗುರುದೇವ. ಈ ಬಿಗಿತಕ್ಕೆ ಒಳಗಾದಲ್ಲಿ ಬೆಳವಣಿಗೆಯಾಗದು. ಬೆಳುವಣಿಗೆಯೆಂದರೆ ವಿಶಾಲವಾದ ವಿಶುದ್ಧವಾದ ಭಾವವನ್ನು ಕ್ರಿಯೆಗಳನ್ನು ತಳೆಯುವುದು. ಸಾಮಾಜಿಕರನ್ನು ಇಂತಾಗಿಸುವುದೆ ಶಾಂತಿಕಳಾಗುರುವಿನ ಕಾರ್ಯ. ಕಾರುಣ್ಯ ರಸಾಮೃತ ಸಿಂಧುವಾದ ಶ್ರೀ ಗುರುದೇವನ ಧ್ಯೇಯ.

ರಜಸ್ತಮಗಳ ಪರಿಣಾಮವಾಗಿ ಸುತ್ತಿದ ಸ್ವಾರ್ಥ ಅದೋಂದು ಬಾಳಿನ ತೊಡಕು. ಅದನ್ನು ಬಿಡಿಸದ ಹೊರತು ವಿಶಾಲದತ್ತ ಪಯಣ ಸಾಗದು. ಸಾಗಿದ್ದಲ್ಲಿ ಬಯಲ ಬೆಳಕು, ಬಯಲ ಗಾಳಿ ದೊರೆಯವು. ದೊರೆಯದಿದ್ದ ಬಳಿಕ ಇರಬೇಕಾದ ಹದುಳತೆ ಯಿರದು. ಇರದ ಬಳಿಕ ಪೇಚಾಟ ತಪ್ಪದು; ಪರಚಾಟ ತಪ್ಪದು.

ತೊಡಕಾದ ಹಗ್ಗ ಹೊರಗಿನದಲ್ಲ. ಅದು ತನ್ನದೆ–ತನ್ನೊಳಗಿನದೆ! ಅದೆ ದುರಾಶೆ ಅದರ ತೊಡಕಿಗೆ ಸಿಕ್ಕರೆ ಮುನ್ನಡೆಯಲು ಬಲ ಬಾರದು; ಬೆಳಕಿರದು. ಅದಿರುವಲ್ಲಿ ಶಾಂತಿಯಿರದು; ತೃಪ್ತಿಯಿರದು. ತಿಳುವಳಿಕೆಯಿರದು. ಇವನ್ನು ನಿವಾರಿಸಿ ಶಾಂತಿಯನ್ನು, ಕಾಂತಿಯನ್ನು ಕರುಣಿಸುವ ಗುರುದೇವನ ಪಾತ್ರ ಚಿಕ್ಕದಲ್ಲ; ಸಂಬಂಧ ಸಾಮಾನ್ಯವಲ್ಲ. ಸರ್ವೋದ್ಧರಣ ಗುಣ ಗೌರವಾರ್ಹವಾಗದಿರದು; ಗಮ ನೀಯವಾಗದಿರದು.

ಬಿಂದುವಾಗಿ ಬಾಳಬಾರದು, ಸಿಂಧುವಾಗಿ ಬಾಳಬೇಕು; ಪ್ರತಿಬಿಂಬವಾಗಿ ಬಾಳ ಬಾರದು, ಬಿಂಬವಾಗಿ ಬಾಳಬೇಕು — ಎಂದು ಬೋಧಿಸುವುದೆ ಗುರುದೇವನ ನಿಜ ಧ್ಯೇಯ. ವ್ಯಕ್ತಿ ವಾಸ್ತವವಾಗಿ ವಿಶ್ವವಾರಿಧಿಯಿಂದ ಅಗಲಿದ ಬಿಂದುವಲ್ಲ. ಅಗಲಿದ ಬಿಂದುವಾದರೆ ಬಾಳುವ ಬಾಧ್ಯತೆಯಿಲ್ಲ. ತೃಣದ ತುದಿಯ ಕಣವಾಗಿ ಒಣಗಿ ಹೋಗ ಬೇಕಾಗುತ್ತದೆ. ಒಣಗದಿದ್ದರೆ ತೃಣವಾಗಿ ಕಣವಾಗಿ ಇರಬೇಕಾಗುತ್ತದೆ. ವ್ಯಕ್ತಿ ವಿಶ್ವ ಚೇತನವಾದ ಪರಮಾತ್ಮನ ಪ್ರತಿಬಿಂಬವಲ್ಲ. ಪ್ರತಿಬಿಂಬವೆಂದರೆ ಜಡವಾಗಬೇಕಾಗು ತ್ತದೆ. ಪ್ರತಿಬಿಂಬದಲ್ಲಿ ಅದರದೆ ಆದ ಕ್ರಿಯೆ ಜ್ಞಾನಾದಿಗಳಿರವು. ಇದರಿಂದಾಗಿ ಪ್ರತಿಬಿಂಬವೂ ಅಲ್ಲ. ವ್ಯಕ್ತಿ ಆ ಪರಮಾತ್ಮನ ಅಂಶ. ಅಂಶದಲ್ಲಿ ವಿಕಾಸವಾಗುವ ಶಕ್ತಿಯಿದೆ. ಅಂಶ ಜಡವಾಗಿಯೆ ಇರಬೇಕೆಂಬ ನಿಯಮವಿಲ್ಲ. ಅಂತೆಯೇ "ಅನಾದ್ಯ ವಿದ್ಯಾ ಸಂಬಂಧಾತ್ ತದಂಶಾ ಜೀವನಾಮಕಾಃ" ಎಂದು ಜಗದ್ಗುರು ರೇಣುಕ ಭಗವತ್ಪಾದರು 'ಸಿದ್ಧಾಂತ ಶಿಖಾಮಣಿ' ಯಲ್ಲಿ ನಿರೂಪಿಸಿರುವರು.

ಆಕಾಶವಿಲ್ಲದೆ ಮಠವಿಲ್ಲ, ಘಟವಿಲ್ಲ. ಶಿವನಿಲ್ಲದ ಜೀವವಿಲ್ಲ, ಜಂತುವಿಲ್ಲ. ಆತ್ಮ ಪರಮಾತ್ಮರು ಅತ್ಯಂತ ಭಿನ್ನರಲ್ಲ; ಅತ್ಯಂತ ಅಭಿನ್ನರೂ ಅಲ್ಲ. ಪಟಕ್ಕೂ ಪಟದಲ್ಲಿರುವ ಚಿತ್ರಕ್ಕೂ ಇರುವ ಭಿನ್ನಾಭಿನ್ನ ಸ್ವರೂಪ. ಪಟದಲ್ಲಿದ್ದ ಚಿತ್ರ ಭಿನ್ನ

ವಾಗಿ ತೋರುತ್ತದೆ. ನೀರಲ್ಲಿದ್ದ ನೀರಾಗಿದ್ದ ತೆರೆ ಬೇರಾಗಿರುವಂತೆ ತೋರುತ್ತದೆ. ಬಣ್ಣವೇರಿ ಪಟವೆ ಚಿತ್ರರೂಪವನ್ನು ತಳೆದಿದೆ. ನೀರು ಗಾಳಿಯು ಹೊಡೆತಕ್ಕೆ ಅಲುಗಿ ಅಲೆಯಾಗಿದೆ. ಅಂತೆಯೆ ಅವಿದ್ಯಾ ಸಂಬಂಧದಿಂದ ಜೀವಾತ್ಮನೆನಿಸಿದ್ದಾನೆ. ಜೀವಾತ್ಮ ಪರಮಾತ್ಮ ಭಿತ್ತಿಯ ಚಿತ್ರ; ಪರಮಾತ್ಮ ಸಾಗರದ ತರಂಗ. ಇದನ್ನು ಬೋಧಿಸು ತ್ತಾನೆ ಶ್ರೀ ಗುರು. ಬೋಧಿಸಿ ಅಪೂರ್ಣತ್ವದಿಂದ ಪೂರ್ಣತೆಗೆ ಸೇರಿಸುತ್ತಾನೆ. ಅಂದರೆ ಅಚ್ಚಳಿಯದ ಆನಂದಾಮೃತ ರಸಸಾಗರವನ್ನು ಸೇರಿಸುತ್ತಾನೆ; ಅಂದರೆ ಅಂತರಂಗವನ್ನು ತರಂಗಿಣಿಯನ್ನಾಗಿಸುತ್ತಾನೆ. ಪ್ರತಿಮೆಯನ್ನು ಪಟವನ್ನಾಗಿಸುತ್ತಾನೆ; ಅಂದರೆ ಬಣ್ಣವನ್ನು ಬಯಲಾಗಿಸುತ್ತಾನೆ. ತರಂಗದ ತರಳತೆಯನ್ನು ನಿಲ್ಲಿಸುತ್ತಾನೆ. ಈ ದೃಷ್ಟಿಯಿಂದ ಸಮಾಜದಲ್ಲಿ ಗೌರವಾತ್ರ ಗೌರವಾನ್ವಿತವಾದುದು.

ಒಟ್ಟಿನಲ್ಲಿ ಜೀವನ ವಿಕಾಸಕ್ಕೆ ಬೇಕಾದ ಗುಣಕ್ರಿಯೆಗಳನ್ನು ಬೋಧಿಸುವಾತನೆ ಗುರು. ಬೋಧಿಸಿ ಜನಜೀವನವನ್ನು ಸಕ್ರಿಯವನ್ನಾಗಿಸಿ ಸುವಿಶಾಲವನ್ನಾಗಿಸಿ ಪರಿ ಪೂರ್ಣಗೊಳಿಸುವುದೆ ಗುರುನಿಷ್ಠ ಧರ್ಮ. ಈತನ ಧರ್ಮ ಕೇವಲ ತನುಮನ ಬುದ್ಧಿಗಳಿಗೆ ಸೀಮಿತವಲ್ಲ; ಭಾವ ಜೀವಗಳವರೆಗೂ ವ್ಯಾಪಿತ ; ಸಮಾಜ ಚೇತನಕ್ಕೂ ವ್ಯಾಪಿತ. ಕ್ರಿಯೆಜ್ಞಾನಾನುಭವಗಳಿಂದಾಚೆಗೆ ಸಾಗಿ ನಿತ್ಯಾನಂದದವರೆಗೆ ವ್ಯಾಪಿತ.

ಈ ವ್ಯಾಪಕ ಸಿದ್ಧಾಂತಕ್ಕೆ ಸೇರಿದವರು ಬಬಲೇಶ್ವರದ ಹಿಂದಿನ ಲಿಂ. ಗುರುಪಾದ ಸ್ವಾಮಿಗಳು, ಇಂದಿನ ಶ್ರೀ ಶಾಂತವೀರ ಶಿವಾಚಾರ್ಯ ಮಹಾಸ್ವಾಮಿಗಳವರು. ಈ ದಿಸೆಯಲ್ಲಿ ಇವರು ಪಳಗಿದ ಪೂರ್ಣ ಚೇತನರು. ಇವರು ಕೇವಲ ಆಚಾರಕ್ಕಾಗಲಿ, ಕೇವಲ ವಿಚಾರಕ್ಕಾಗಲಿ ಅಂಟಿಕೊಂಡವರಲ್ಲ. ಉಭಯ ಸಮನ್ವಯಾಚಾರ್ಯರು. ಕೇವಲ ವೈಯಕ್ತಿಕ ಜೀವಿಗಳಲ್ಲ, ಮಠಮಾತ್ರಕ್ಕೆ ಸೀಮಿತರಲ್ಲ. ಸಾಮಾಜಿಕ ಸರ್ವ ರಂಗಗಳಲ್ಲಿ ತಮ್ಮ ಭಾಗದ ಕರ್ತವ್ಯವನ್ನು ಕೈಕೊಂಡು ನೆರವೇರಿಸಿದವರು. ತಮ್ಮದೇ ಆದ ಶಾಂತಿ ಸಮಾಧಾನಗಳನ್ನು ಕಳೆದುಕೊಳ್ಳದೆ ಉಳಿಸಿ ಬೆಳಸಿಕೊಂಡು ಬಂದ ಸ್ಥಿತಪ್ರಜ್ಞರು; ಸ್ಥಿರ ಚಿತ್ತರು. ಧರ್ಮ–ದರ್ಶನ ಸುಮನ್ವಯಾತ್ಮರು. ಸನಾತನತೆ–ವಿನೂತನತೆಯ ಸೇತುವೆಯಾಗಿರುವರು. ಬುದ್ಧಿ ಬಲ — ಭಾವ ಬಲಗಳ ಅಪೂರ್ವ ಸಮನ್ವಯ ಸ್ವರೂಪರು.

ಇನ್ನು ನಾಡಿನ ಗುರು ವರ್ಗದವರಲ್ಲಿ ಶ್ರೀ ಶಾಂತವೀರ ಶಿವಾಚಾರ್ಯರದು ಗುಣದಿಂದ ಬಹು ದೊಡ್ಡ ಹೆಸರು. ಅವರ ಸಂದರ್ಶನ ಪಡೆದವರು ಅವರ ಆ ಘನ ವ್ಯಕ್ತಿತ್ವದ ಪ್ರಭಾವಕ್ಕೆ ಒಳಗಾಗದಿರರು. ಅವರು ಸದಾ ಹಸನ್ಮುಖಿಗಳು. ಹದ ಗೊಂಡ ಹೃದಯರು. ಆತ್ಮೀಯ ಭಾವಭರಿತರು. ಅವರವು ಮೃದುವಾದ ಮಿತ ವಾದ ಮಾತುಗಳು. ಅಮಿತ ಹಿತದಾಯಕಗಳು. ಸ್ವಾನುಭವ ಸಂಪನ್ನ ಸುಸ್ಪಷ್ಟ ವಿಚಾರಗಳು. ನುಡಿನುಡಿಯಲ್ಲಿ ತುಂಬಿರುತ್ತದೆ ರಸದಾಳಿ ರಸ. ನಡೆ ನಡೆಯಲ್ಲಿ

ತೂರುತ್ತದೆ ಕರುಣಿಸುವ ಕಳಕಳಿ. ಅವರ ಆ ನಿರ್ಮಲ ನೋಟದಲ್ಲಿ ಅದೆಂತಹ ಗೌರ ತೇಜಸ್ಸು. ಅಪರಿಚಿತರನ್ನೂ ಸಹ ಅಂತಃಕರಣದಿಂದ ಅವಲೋಕಿಸುವ ಅಗ್ಗಳದ ಮನಸ್ಸು. ಹೀಗೆ ಹಲವಾರು ಮೌಲ್ಯ ಗುಣಗಳ ಸಾಕಾರ ಮೂರ್ತಿ ಅವರಾಗಿದ್ದಾರೆ.

ನಾಡಿನ ಈ ಭಾಗದಲ್ಲಿ ಗಿರಿಯಪುರದ ಸದಾಶಿವ ಶಿವಾಚಾರ್ಯರು; ಆ ಭಾಗದಲ್ಲಿ ಬಬಲೇಶ್ವರದ ಶಾಂತವೀರ ಶಿವಾಚಾರ್ಯರು. ಒಬ್ಬರು ಶೀಲಗುಣ ವೀರರು; ಇನ್ನೊಬ್ಬರು ಶಾಂತಿ ಗುಣವೀರರು. ಒಬ್ಬರು ಯೋಗವೀರರು; ಇನ್ನೊಬ್ಬರು ತ್ಯಾಗವೀರರು; ಇಬ್ಬರೂ ವಿದ್ಯಾ ವಿನಯ ಸಂಪನ್ನರು. ಇಬ್ಬರೂ ಸತತ ಸತ್ ಸಾಧನ ಶೀಲರು; ಶಿವಧರ್ಮಾಕಾಶದ ಸೂರ್ಯ ಚಂದ್ರರು. ಯೋಗ ಸೂರ್ಯನು ಅಸ್ತಂಗತನಾಗಿದ್ದಾನೆ; ತ್ಯಾಗ ಚಂದ್ರನು ಹುಣ್ಣಿಮೆಯ ಬೆಳುದಿಂಗಳನ್ನು ಬೆಳ್ಳಂ ಬೆಳಗಿಸುತ್ತಿದ್ದಾನೆ — ನಿಜಕ್ಕೂ ತನ್ನ ಶಾಂತಿ ಕಾಂತಿಯಿಂದ! ತನ್ನ ತ್ಯಾಗಪೂರ್ಣ ತತ್ತ್ವಪೂರ್ಣ ವೀರ ತೇಜಸ್ಸಿನಿಂದ!! ತನ್ನ ವಿನಯ ಪೂರ್ಣ ಹೃದಯ ಪೂರ್ಣ ಶಾಂತವೀರ ಚಿತ್ಕಳೆಯಿಂದ!!!

ನಾವು ಈ ಕನ್ನಡ ನಾಡನ್ನೆಲ್ಲ ಸುತ್ತಿ ಸುಳಿದಿದ್ದೇವೆ. ಆದರೆ ಅವರಷ್ಟು ಸುಸಂಸ್ಕೃತ ಮತ್ತು ಸಾತಿಶಯ ಜನಪ್ರಿಯ ಗುರುದೇವನನ್ನು ಶಿವಾಚಾರ್ಯನನ್ನು ಕಾಣಲಿಲ್ಲ. ಈ ಇಪ್ಪತ್ತನೆಯ ಶತಮಾನದಲ್ಲಿ! ಹೆಸರಿಗೆ ತಕ್ಕಂತೆ ಅವರು ದಿಟಕ್ಕೂ ಈ ಶತಮಾನದ ಶಾಂತಿವೀರರೆ! ದಾಂತಿ ವೀರರೆ!! ಜನತೆಯ ಕ್ಷೇಮಕ್ಕಾಗಿ ಅವರಷ್ಟು ಹೃದಯವಂತರನ್ನು ಕಾಣಲು ಸಾಧ್ಯವಿಲ್ಲ. ಪರಹಿತಕ್ಕಾಗಿ ಅದೇನು ಸಹನೆ, ಅದೇನು ಶಾಂತಿ; ಅದೇನು ತ್ಯಾಗ! ನಮ್ಮ ಭಾವಪೂರ್ಣವಾದ ಮಾತಿನ ಸತ್ಯತೆಯನ್ನು ಸಾಕ್ಷಾತ್ಕರಿಸಿಕೊಳ್ಳ ಬೇಕಾದಲ್ಲಿ ಒಮ್ಮೆ ಬಬಲೇಶ್ವರಕ್ಕೆ ಹೋಗಿ ಅವರ ಪ್ರತ್ಯಕ್ಷ ದರ್ಶನ ಪಡೆಯಬೇಕು. ನಿಜಕ್ಕೂ ಅವರು ಆ ಊರಿನ ಹೃದಯ ಬಲೇಶ್ವರ! ಜನಪ್ರಿಯ ಬಲೇಶ್ವರ!! ಅವರ ಆ ಅತ್ಯಂತ ಕರುಣಾರ್ದ್ರ ಹೃದಯ ಅದೊಂದು ಅಪೂರ್ವ ಜೀವಂತ ಲೋಹಕಾಂತ ಮಣಿ! ಮಹಂತ ಶಾಂತಿ ಚಿಂತಾಮಣಿ!!

ಅವರ ಬಳಿಗೆ ಬಂದವರು ಅದೆಷ್ಟೆ ಕಬ್ಬಿನದಂತಹ ಕಠಿಣ ಹೃದಯರಿರಲಿ, ಅವರನ್ನು ತಮ್ಮ ಸೂಜಿಗಲ್ಲಿನಂತಹ ಹೃದಯದಿಂದ ತಳುವದೆ ಆಕರ್ಷಿಸುತ್ತಾರೆ. ಬಂದವರು ಸೂಕ್ಷ್ಮಗ್ರಾಹಿಗಳಾಗಿದ್ದರೆ ಅವರನ್ನು ಅತ್ಯಂತ ಉತ್ತಮ ವಿಚಾರ ಭೂಮಿಕೆ ಯಲ್ಲಿ ತಂದು ನಿಲ್ಲಿಸುತ್ತಾರೆ. ಸಾತಿಶಯ ಶ್ರದ್ಧೆಯನ್ನು, ಸಹಾನುಭೂತಿಯನ್ನು ಹುಟ್ಟಿಸುತ್ತಾರೆ. ಈ ದಿಸೆಯಲ್ಲಿ ಅವರು ದಿಟಕ್ಕೂ ಗುರು ಹೃದಯರೆ! ಗುರು ಬುದ್ಧಿ, ಗುರುಭಾವವುಳ್ಳವರೆ!! ಹಣವಿಲ್ಲದೆ ನೆಣವಿಲ್ಲದೆ ಅಪಾರ ಕರುಣೆಯನ್ನು ಪಡೆಯ ಬೇಕಾದರೆ ಅವರ ಬಳಿಗೆ ಹೋಗಬೇಕು. ಬರೀ ಹೃದಯರು ಭರಿತ ಹೃದಯರಾಗದೆ ಹಿಂದಿರುಗರು.

—ಡಾ. ಜ. ಚ. ನಿ.

# ೨. ಶಾಂತ ವೀರ, ದಾಂತ ಧೀರ

ಹೆಸರೊಂದೆಸೆ, ಬಸಿರೊಂದೆಸೆ; ಗುಣವೊಂದೆಸೆ, ಕ್ರಿಯೆಯೊಂದೆಸೆ — ಆಗಿ ಇರುವವರೆ ಬಹಳ. ಬಹಿರಂಗದಂತೆ ಅಂತರಂಗ, ನುಡಿದಂತೆ ನಡೆ, ಗುಣವಿದ್ದಂತೆ ಕ್ರಿಯೆ, ಇಟ್ಟ ಹೆಸರನ್ನು ಸಾರ್ಥಕಪಡಿಸಿಕೊಳ್ಳುವಿಕೆ, ರೂಪದಂತೆ ಸ್ವರೂಪ ಇದ್ದರೆ ಅವರೆ ಮಾನವದೇವರು; ಮಹಾನುಭಾವರು.

ಬಬಲೇಶ್ವರ ಶಾಂತವೀರ ಶಿವಾಚಾರ್ಯ ಸ್ವಾಮಿಗಳವರು ಹೆಸರಿಗೆ ತಕ್ಕ ಬಾಳನ್ನು ರೂಪಿಸಿಕೊಂಡವರು. ನಿಜವಾಗಿಯೂ ಇವರು ಹೆಸರಿನ ಹೆಂಪುಳ್ಳವರು. ಇವರು ಸಮಾಧಾನ ಚಿತ್ತರು, ಸಂತೃಪ್ತ ಹೃದಯರು. ತಾಳ್ಮೆ ಇವರ ಬಸಿರ ಉಸಿರು. ಏನೇ ಬರಲಿ, ಎಂತೇ ಆಗಲಿ ತಳಮಳಿಸದ ಮನಸ್ಸು; ಸ್ವಸ್ಥತೆಯನ್ನು ಬಿಡದ ಚಿತ್ತ. ಗಾಬರಿಗೊಳಗಾಗದ ಗಾಂಭೀರ್ಯ. ಯಾವ ಕೆಡುಕಿಗಾಗಿಯೂ ದುಡುಕುವವರಲ್ಲ. ಇವರು ದಿಟಕ್ಕೂ ಶಾಂತತೆಯಲ್ಲಿ ವೀರರು. ಅಂತೆಯೇ ದಾಂತತೆಯಲ್ಲಿ ಧೀರರು.

ಅಂತಃಕರಣಗಳನ್ನು ನಿಗ್ರಹಿಸಿದಾತನು ಶಾಂತ; ಬಹಿರಿಂದ್ರಿಯಗಳನ್ನು ನಿಗ್ರಹಿಸಿದಾತನು—ದಾಂತ. ಮನೋ ನಿಗ್ರಹ ಮತ್ತು ಇಂದ್ರಿಯ ನಿಗ್ರಹ ಸರ್ವರ ಸ್ವತ್ತಲ್ಲ. ವಿವೇಕ ವೈರಾಗ್ಯವುಳ್ಳವರಿಗೆ ಶಮ ದಮಗಳು, ಶ್ರದ್ಧೆ ಸಮಾಧಾನಗಳು, ಉಪರತಿ ತಿತೀಕ್ಷಗಳು ಉಂಟಾಗುತ್ತವೆ. ಇವು ಉಂಟಾದವನ ಜೀವನ್ಮುಕ್ತ, ಮತ್ತು ಶಾಂತ. ಅಂತಹ ಶಾಂತರಿಗೆಲ್ಲ. ವೀರ ಬಬಲೇಶ್ವರ ಗುರುವರ್ಯ.

ಈತನು ಹೇಗೆ ಶಾಂತನೋ ಹಾಗೆ ವೀರನು. ವೀರನೆಂದರೆ ಕೇವಲ ದೈಹಿಕ ಶೌರ್ಯವಲ್ಲ; ಪ್ರಾಪಂಚಿಕ ಪರಾಕ್ರಮವಲ್ಲ. ಆತ್ಮಶಕ್ತಿಯುಳ್ಳವನೆ ವಾಸ್ತವ ವೀರ. ಅದಕ್ಕೆ ಬೇಕು ಶಾಂತಿ ದಾಂತಿ; ಶ್ರದ್ಧೆ ಸಮಾಧಾನ. ವಿಷಯ ವಿಕಾರಗಳಿಗೆ ಒಳಗಾಗದವರೆ ಧೀರರು. ವಿಷಯ ಭ್ರಾಂತಿಯಿಂದ ಬುದ್ಧಿಯನ್ನು ರಕ್ಷಿಸಿಕೊಂಡವರೆ ಧೀರರು. ಇಂದ್ರಿಯ ಸಂಯಮನವಿಲ್ಲದೆ ಹೀನ ಬುದ್ಧಿಯನ್ನು ಗೆಲ್ಲಲು ಸಾಧ್ಯವಿಲ್ಲ. ಶಾಂತವೀರ ಶಿವಾಚಾರ್ಯ ಸ್ವಾಮಿಗಳವರು ಮನ ಬುದ್ಧಿ ಇಂದ್ರಿಯಗಳನ್ನು ಸಂಯಮಿಸಿ ಸಕಲ ವಿಷಯಗಳಿಂದ ಸಂರಕ್ಷಿಸಿಕೊಂಡಿರುವುದರಿಂದ ವೀರರು, ಧೀರರು. ಇವರು ಶರೀರೇಂದ್ರಿಯ ದಾಂತಿಯನ್ನು ಪಡೆದಿದ್ದಾರೆ; ಮನ ಬುದ್ಧಿ ಅಹಂಕಾರಗಳ ಶಾಂತಿಯನ್ನು ಪಡೆದಿದ್ದಾರೆ. ಈ ಶಾಂತಿ, ಈ ದಾಂತಿಗಳಿಗಿಂತ ಬೇರಿಲ್ಲ ಮುಕ್ತಿ.

"ಉಪಾಸತೇ ಪುರುಷಂ ಯೇ ಹ್ಯಕಾಮಾಸ್ತೇ ಶುಕ್ರಮೇತದತಿ ವರ್ತಂತೆ ಧೀರಾಃ!!"
ಎಂದು ಮುಂಡಕ ಶ್ರುತಿ ಸಾರಿದೆ. ಎಲ್ಲ ಕಾಮನೆ (ಬಯಕೆ)ಗಳನ್ನು ಕೈ ಬಿಟ್ಟವರು ಆತ್ಮನನ್ನು ಉಪಾಸಿಸಬಲ್ಲರು; ಶುಕ್ರವನ್ನು ಜಯಿಸಿ ಶಾಂತರಾಗಿ ಧೀರರೆನಿಸಬಲ್ಲರು.

ಶಮ ದಮ ಶ್ರದ್ಧೆ ಸಮಾಧಾನ ಉಪರತಿ ತಿತೀಕ್ಷ ಇವು ಸತ್ಸಾಧನ ಸಂಪತ್ತಿ. ಇವುಗಳಲ್ಲಿ ಶಮ (ಶಾಂತಿ) ಮೊದಲಿನದು. ಶಮೆಯೆಂದರೆ ಮನೋನಿಗ್ರಹ. ಮಾನಸ್ಸು ವಿಕ್ಷೇಪ ಮಲವುಳ್ಳದ್ದು. ಅಂದರೆ ಚಂಚಲವಾದುದು. ಚಾಂಚಲ್ಯ ರಜೋ ಗುಣದಿಂದ ಕೂಡಿದುದು. ಇದಿದ್ದರೆ ಮನಕ್ಕೆ ಶಾಂತಿ ಇರದು. ಅರ್ಚನಾದಿ ಕ್ರಿಯೆ ಯಲ್ಲಿ ಶಿವಜ್ಞಾನ ಸಾಧನೆಯಲ್ಲಿ ಶಿವಾನುಭಾವ ಶ್ರವಣದಲ್ಲಿ ಮನಸ್ಸು ಶುದ್ಧವಾಗಿರದು; ಸ್ಥಿರವಾಗಿರದು. ಅತ್ತಿತ್ತ ಹರಿದಾಡುತ್ತಿರುತ್ತದೆ. ಅದನಿದನು ಚಿಂತಿಸುತ್ತಿರುತ್ತದೆ. ಹಲವು ಹರಿದಾಟಕ್ಕೆ ಹಲವು ಹಂಬಲಕ್ಕೆ ವಿಕ್ಷೇಪವೆಂದು ಹೆಸರು. ಇದಲ್ಲದೆ ಅಜ್ಞಾನ ಸಂಶಯುಗಳ ಆವರಣ ಬೇರೆ ಇರುತ್ತವೆ. ಇವೆಲ್ಲ ತೊಲಗಬೇಕಾದರೆ ಶಾಂತಚಿತ್ತ ನಾಗಬೇಕು; ಶಾಂತವೀರನಾಗಬೇಕು.

ಶಾಂತಚಿತ್ತನಾಗಬೇಕಾದರೆ ವಿವೇಕ ವೈರಾಗ್ಯಗಳು ಮುಖ್ಯವಾಗಿ ಬೇಕು. ವಿವೇಕ ವೆಂದರೆ ಆತ್ಮಜ್ಞಾನ. ಅದುವೆ ಅಪರೋಕ್ಷಜ್ಞಾನ. ಆ ಆತ್ಮ ಪ್ರಜ್ಞೆ ಅಗತ್ಯ. "ಏನಾದರೆಯು ಸಾಧಿಸಬಹುದು, ಮತ್ತೇನಾದರೆಯೂ ಸಾಧಿಸಬಹುದಂ; ತಾನಾ ರೆಂಬುದು ಸಾಧಿಸಲಾಗದು. ಕೂಡಲ ಸಂಗಮದೇವರ ಕರುಣವುಳ್ಳವಂಗಲ್ಲದೆ." ಎಂದು ಅಣ್ಣ ಬಸವಣ್ಣ ನಿರೂಪಿಸಿದ್ದಾನೆ. ಗುರು ಕರುಣೆಯಿಲ್ಲದೆ ಆತ್ಮ ಪ್ರಜ್ಞೆ ಅಳವಡದು. ಅದನ್ನು ಸ್ವಯಂ ಸಾಧಿಸಲು ಸಾಧ್ಯವಿಲ್ಲ. ಹರನ ಸ್ವರೂಪನಾದ ಗುರುದೇವನ ಕೃಪೆ ಅನಿವಾರ್ಯ. ಲೌಕಿಕ ವಿದ್ಯೆಕಲಿಯಲು ಶಿಕ್ಷಕ ಅಗತ್ಯ. ಅಂತೆಯೇ ಆತ್ಮ ವಿದ್ಯೆಗೆ ಗುರುಕೃಪೆ ಅಗತ್ಯ. ಇದರಿಂದ ಕ್ರಿಯೆ ಜ್ಞಾನಾನುಭವಗಳು ಉಂಟಾಗು ತ್ತವೆ. ಇವುಂಟಾದರೆ ವಿಷಯುಗಳಲ್ಲಿ ವಿರತಿಭಾವವುಂಟಾಗುತ್ತದೆ. ವಿರತಿಯಿಂದ ಶಮ ದಮೆಗಳು ಸಮನಿಸುತ್ತವೆ; ಅಂದರೆ ಶಾಂತಿ ದಾಂತಿಗಳು ಮನಮೈಗಳಲ್ಲಿ ಉಂಟಾಗು ತ್ತವೆ. ಇವಿರುವಲ್ಲಿ ಶ್ರದ್ಧೆ ಸಮಾಧಾನಗಳಿರುತ್ತವೆ; ಉಪರತಿ ತಿತೀಕ್ಷಗಳಿರುತ್ತವೆ; ಇವು ಶಮಾದಿಷಟ್ಕ ಸಂಪತ್ತಿ. ಈ ಆರು ಉಳ್ಳಾತನೆ ಶಾಂತವೀರ; ದಾಂತಧೀರ.

ಇಂದು ಬಬಲೇಶ್ವರದ ಬೆಳಕಾಗಿರುವ ತೊಂಭತ್ತು ವಯಸ್ಸಿನ ಶ್ರೀ ಶಾಂತವೀರ ಶಿವಾಚಾರ್ಯ ಮಹಾಸ್ವಾಮಿಗಳವರಲ್ಲಿ ಇವೆಲ್ಲವಿದ್ದು ಶಾಂತಚಿತ್ತರೂ ದಾಂತದೇಹಿ ಗಳೂ ಆಗಿದ್ದಾರೆ. ವೀರಶೈವ ಶಿವಾಚಾರ್ಯರಿಗೆಲ್ಲ ಶಿರೋಮಣಿಯಾಗಿದ್ದಾರೆ. ಇಂತ ವರ ಮಹಂತ ಚರಿತ್ರ ಸಾಮಾಜಿಕರಿಗೆ ಶ್ರೇಯಸ್ಕರ; ಹಾಗು ಅಭ್ಯುದಯಕ್ಕೆ ಆಧಾರ.

ಮಾನವ ಜೀವನ ಉನ್ನತಿಕೆಗೆ ಉದ್ಗಮನಕ್ಕೆ ಕಾರಣ ಶಾಂತಮನ. ಶಾಂತ ಮನಕ್ಕಿರುವ ಬಲ ಬೇರೊಂದಕ್ಕಿಲ್ಲ. ಅದಂ ಬೃಹತ್ತಮ ಬಲ. ಜೀವನ್ಮುಕ್ತರನ್ನು

ಮಾಡುವ ಬಲ. ಶಿವಯೋಗ ಸಂಪತ್ತನ್ನು ಒದಗಿಸುವ ಬಲ. ಶಿವಾಚಾರ್ಯ ರನ್ನಾಗಿಸುವ ಸರ್ವೋತ್ತಮ ಸಾಮರ್ಥ್ಯ. ಮಾನವರನ್ನು ಮಹಾನುಭಾವರನ್ನಾಗಿ ಸುವ ಸಾಮರ್ಥ್ಯ. ಶತಕ್ರತುಗಳನ್ನು ಮೀರಿದ ಮಹಾ ಸಾಮರ್ಥ್ಯ.

ಮನಸ್ಸಿಗೆ ಶಾಂತಿಗಿಂತ ಬೇರಿಲ್ಲ ಹೆಚ್ಚಿನ ಶಕ್ತಿ. ಶಾಂತಿ ಸಮಾಧಾನಗಳಿಂದ ಮನ ಪಾವನವಾಗುವುದಲ್ಲದೆ ಘನವಾಗುತ್ತದೆ. ಪ್ರಾಣಧಾರಣ ಶಕ್ತಿ ಸಂಪನ್ನ ವಾಗುತ್ತದೆ. ಪ್ರಾಣದಲ್ಲಿ ಚೇತನ ಸತ್ತ್ವವನ್ನು ಪ್ರತಿಷ್ಠಿಸುತ್ತದೆ. ಪ್ರಾಣಾಪಾಯದ ಪ್ರತ್ಯವಾಯಗಳನ್ನು ಪರಿಹರಿಸುತ್ತದೆ. ಉನ್ನಯನ ಗತಿಯನ್ನು, ಊರ್ಜಿತ ಸ್ಥಿತಿ ಯನ್ನು ಉಂಟುಮಾಡುತ್ತದೆ. ಸಮಗ್ರ ಜಾಗ್ರತೆಯನ್ನು ಸಮಗ್ರ ವ್ಯಕ್ತಿ ಶಕ್ತಿ ಯನ್ನು ಸಮಗ್ರ ಸತ್ತ್ವಯನ್ನು ಸಂಪಾದಿಸಲು ಸಮರ್ಥವಾಗುತ್ತದೆ. ಜೀವನದ ಉನ್ನತಸ್ತರದಲ್ಲಿ ಸಮರ್ಪಣ ಸ್ವಭಾವವುಂಟಾಗುತ್ತದೆ. ವಿಷಯಾರಾಧನೆಯ ಮನೋ ಭಾವ ಅಣಗಿ ವಿಶಿಷ್ಟ ಸತ್ತ್ವಯ ಆರಾಧನಾಭೀಪ್ಸೆ ಅಳವಡುತ್ತದೆ. ಸರ್ವೋದ್ಧಾರಗೈವ ಶಾಂತತ್ವ ಸಮನಿಸುತ್ತದೆ. ಆ ಸರ್ವಾಕರ್ಷಕ ಶಾಂತಸತ್ವದಿಂದ ಸಂಪನ್ನರಾಗಿದ್ದಾರೆ— ಬಬಲೇಶ್ವರದ ಶಾಂತವೀರ ಶಿವಾಚಾರ್ಯ ಮಹಾಸ್ವಾಮಿಗಳವರು. ಅಂಥವರ ಮಂಗಳ ಮಯ ಚರಿತ್ರೆಯನ್ನು ಓದುವುದರಿಂದ ಚಿತ್ತಶಾಂತಿ — ದೇಹೇಂದ್ರಿಯ ದಾಂತಿ ಉಂಟಾಗುತ್ತದೆ. ಆದರಿಂದ ಇವರ ಚಾರಿತ್ರ ಚಿತ್ರಣ.

## ೩. ಹಣ್ಣಿನ ಗುಣ ಹೀಚಿನಲ್ಲಿ

ಉನ್ನತಿಗೆ ಉತ್ತಮಿಕೆಗೆ ಹಿನ್ನೆಲೆ ಹೆಬ್ಬಲ. ಹೀಚು ಹೇಗಿದ್ದರೆ ಹಣ್ಣು ಹಾಗಾಗು ವುದು. ಮಿಡಿ ಚನ್ನಾಗಿದ್ದರೆ ಹಣ್ಣು ಚೆನ್ನು. ಬಿತ್ತು ಸತ್ವಶಾಲಿಯಾಗಿದ್ದರೆ ಮೊಳಕೆ ಮರ ಸುಳಿದೆಗೆದು ಸೊಗಸಾಗಿ ಬೆಳೆಯುತ್ತವೆ. ಅಂತೆಯೆ ಜನ್ಮಸಂಸ್ಕಾರ ಬಾಲ್ಯವೃತ್ತಿ ಚನ್ನಾಗಿದ್ದರೆ ಬಾಳಿನುದ್ದಕ್ಕೂ ಉತ್ತಮಿಕೆ ಉತ್ಕರ್ಷವಾಗುತ್ತದೆ; ಉನ್ನತಿ ಉನ್ನತ ವಾಗುತ್ತದೆ.

ಈ ನಿಯತಿಯಂತೆ ಬಬಲೇಶ್ವರ ಶ್ರೀ ಶಾಂತವೀರ ಶಿವಾಚಾರ್ಯರ ಜನ್ಮ ಸಂಸ್ಕಾರ ಭದ್ರವಾಗಿದೆ. ಇದಕ್ಕೆ ಕಾರಣರು ತಾಯ್ತಂದೆಗಳು. ಅವರ ಆ ಶೈವೀ ಸಂಸ್ಕಾರ ಬಗೆಯನ್ನಿಲ್ಲಿ ನಸು ಅರಿಯುವುದು ಅವಸರ.

ಶಿವಾಚಾರ್ಯರಿಗೆ ಕಾರ್ಯ ಕ್ಷೇತ್ರ ಬಬಲೇಶ್ವರವಾದಂತ ಜನ್ಮಕ್ಷೇತ್ರ ತರ್ಲ (ತರಲ) ಗಟ್ಟ. ಅದು ದಿಟಕ್ಕೂ ಇಂತಹ ಜೀವಂತ ಮತ್ತು ಜ್ವಲಂತ ರತ್ನಗಳ ಬೀಡಾಗಿತ್ತು. ತರ್ಲಗಟ್ಟ ಧಾರವಾಡ ಜಿಲ್ಲೆಯ ಕುಂದಗೋಳ ತಾಲೂಕಿನ ಒಂದು ಚಿಕ್ಕ ಊರು. ಇದಕ್ಕೆ ಹೊಂದಿಕೊಂಡು ನೆಲಗುಡ್ಡ, ಕೊಪ್ಪ ಎಂಬ ಇನ್ನೆರಡು ಚಿಕ್ಕ ಊರುಗಳಿವೆಯಂತೆ! ಈ ಮೂರರ ಹೆಸರುಗಳು ಕನ್ನಡತನದ ಚನ್ನತನವನ್ನು ಸಾರುತ್ತವೆ. ಇಲ್ಲಿನ ಕಳೆಯುಳ್ಳ ಕಪ್ಪು ಮಣ್ಣು ಕರಿನಾಡ ಕುರುಹು. ಹುಲುಸು ಬೆಳೆಗೊಂದು ಸುಳುಹು. ಈ ಊರಿನಲ್ಲಿ ಪುರಾತನ ವೀರಭದ್ರಸ್ವಾಮಿ, ಕಲ್ಲೇಶ್ವರ, ಬಸವೇಶ ರ ದೇವಾಲಯಗಳಿದ್ದು ಅಲ್ಲಿನವರ ದೈವೀಭಾವವನ್ನು ಹೆಚ್ಚಿಸಲು ಹುಟ್ಟಿಸಲು ಕಾರಣಗಳಾಗಿವೆ. ಇವುಗಳಲ್ಲಿ ವೀರಭದ್ರಸ್ವಾಮಿ ಮೂರ್ತಿ ಕಲಾತ್ಮಕವಾಗಿದ್ದು ಚಲು ವೆತ್ತಿದೆ. ಆ ಮಂಗಳ ಮೂರ್ತಿಯ ವಾತಾವರಣ ಆ ಊರಿನಲ್ಲಿ ಹರಡಿದೆ. ಅಂತೆಯೋ ಏನೋ ಅಲ್ಲಿನ ಜನರು ದೈವಭಕ್ತಿಯುಕ್ತರು; ಸತ್ವಗುಣ ಸಂಪನ್ನರು.

ಆ ಊರಿನಲ್ಲಿ 'ಶಿವಜಾತ' ಎಂಬ ನಲ್ಲೆಸರಿನ ಒಂದು ಮನೆತನ. ಅದು ಶಿವ ಸಂಪ್ರದಾಯದ ಮನೆತನ. ಇದನ್ನು ಆ ಹೆಸರೆ ಉಗ್ಗಡಿಸುತ್ತದೆ. ಈ ಮಂಗಳ ಕರ ಮನೆತನದಲ್ಲಿ ಶ್ರೀ ಸಿದ್ದಲಿಂಗ ಶರಣರು ಶ್ರೀ ಚನ್ನಬಸವಮ್ಮನವರು ಎಂಬ ಧರ್ಮ ಹೃದಯದ ದಂಪತಿಗಳಿದ್ದರು. ಇವರು ವೀರಶೈವ ಆಚಾರನಿರತರು. ಇವರು ಹಣವಂತರೂ ಗುಣವಂತರೂ ಆಗಿದ್ದರು. ದಯಾಶೀಲರೂ ದಾನಶೀಲರೂ ಆಗಿದ್ದರು. ನ್ಯಾಯ ನೀತಿ ರೀತಿಗಳಿಗೆ ಹೆಚ್ಚು ನೆಲೆ ಅವರಲ್ಲಿತ್ತು. ಸೌಜನ್ಯ ಸೌಶೀಲ್ಯಗುಣ

ಗಳಾಗಿದ್ದರು. ಶಿವಜಾತ ಮನೆತನಕ್ಕೆ ತಕ್ಕಂತೆ ಶಿವಗುಣಗಳಾಗಿದ್ದರು. ಶಿವಕ್ರಿಯಾ ನಿರತರಾಗಿದ್ದರು. ಶಿವಪ್ರಸಾದ ಸ್ವೀಕಾರದಿಂದ ಶಿವಭಾವಿಗಳಾಗಿದ್ದರು. ಶಿವಜೀವಿ ಗಳಾಗಿದ್ದರು.

ತಾಯಿ ಚನ್ನಬಸವಮ್ಮನವರೂ ಚನ್ನೆಯರು. ನಿಚ್ಚ ನಿದ್ದೆಯಿಂದೆದ್ದೊಡನೆ ಮಿಂದು ಮಡಿಯುಟ್ಟು ವಿಭೂತಿ ಧರಿಸಿ ದೇವನನ್ನು ಸ್ಮರಿಸುತ್ತ ವೀರಭದ್ರ ದೇವಾಲಯಕ್ಕೆ ದೀಪಾರತಿ ಮಾಡಿ ನಮಸ್ಕರಿಸಿ ಬರುತ್ತಿದ್ದರು. ಇದು ಅವರ ನಿತ್ಯ ವ್ರತ. ಎರಡು ಗಂಡು, ಒಂದು ಹೆಣ್ಣು — ಹೀಗೆ ಮೂರು ಮಕ್ಕಳ ತಾಯಿ. ವಯಸ್ಸಿಗೆ ತಕ್ಕಂತೆ ತಾಯಿಯ ಮನಸ್ಸು ಪಕ್ವವಾಗಿತ್ತು; ಸಾತ್ವಿಕವಾಗಿತ್ತು. ಸದಾಚಾರ ನಿರತಳನ್ನಾಗಿಸಿತ್ತು. ಸದ್ಗುಣ ಸಂಪನ್ನೆಯನ್ನಾಗಿಸಿತ್ತು. ಹೀಗಿರಲು ಮತ್ತೆ ಗರ್ಭಧಾರಣವಾಗಿ ಗಂಡು ಮಗು ಜನಿಸುವುದು. ಈ ಮಗು ವೀರಭದ್ರದೇವನ ಕರುಣೆಯ ಕಂದ.

ಸರ್ವಜಿತು ನಾಮ ಸಂವತ್ಸರ, ನಿಜಚೈತ್ರ ಶುದ್ಧ ಪ್ರತಿಪದ; ಅಂದರೆ ಯುಗಾದಿ ದಿನ. ಬ್ರಾಹ್ಮೀ ಮುಹೂರ್ತ, ಶುಕ್ರವಾರ; ಶಾ. ಶಕ ೧೮೦೯ : ಕ್ರಿ. ಶಕ ೨೭–೪–೧೮೮೭; ಈ ಎಲ್ಲ ಶುಭಯೋಗಗಳಲ್ಲಿ ಮಗುವಿನ ಜನನ. ಸಲ್ಲಕ್ಷಣ. ವೀರೇಶನ ರೂಪು ಕಳೆಗಳೆ ಮೈವೆತ್ತು ಬಂದಂತಿತ್ತು ಮಗು. ಕಂಡು ಹೆತ್ತವರಿಗಲ್ಲದೆ ಮತ್ತಿತರರಿಗೂ ಮಹಾನಂದ. ಸುಂದರ ಶಿಶುವನ್ನು ಹೆತ್ತರೆ ಯಾರಿಗಾಗದು ಆನಂದ? ಆ ಆನಂದದಲ್ಲಿಯೆ ಜನನ ಕ್ರಿಯೆಗಳು ಜರುಗಿದವು. ಆರತಿಯನೆತ್ತಿದರು ಸುಮಂಗಲೆಯರು. ವಿಭೂತಿ ಧಾರಣ ಲಿಂಗಧಾರಣಗಳಾದವು. ಹದಿಮೂರನೆಯ ದಿನ ಶಿಶುವನ್ನು ತೊಟ್ಟಿಲಲ್ಲಿಟ್ಟು ತೂಗುವರು. ಗರತಿಯರು ಜೋಗುಳ ಹಾಡುವರು. 'ರುದ್ರ' ಎಂದು ಹೆಸರಿಡುವರು. ವೀರೇಶನ ಭದ್ರವರದಿಂದ ಬಂದ ಮಗುವಿಗೆ ಉಚಿತ ನಾಮ. ವೀರತನವನ್ನು ಸಂಕೇತಿಸುವ ನಾಮ. ಹೆಸರು ಬರೀ ಶಕ್ತಿ ಸೂಚಕವಲ್ಲ, ಉಕ್ತಿ ಸೂಚಕವೂ ಆಗಿದೆ. ವ್ಯಕ್ತಿಯಲ್ಲಿಯೂ ಉಕ್ತಿಯಲ್ಲಿಯೂ ಭದ್ರ ಶಕ್ತಿ ಬೆಳೆದು ಬರುವುದರ ಸಂಕೇತ ಆ ರುದ್ರ ನಾಮ. ಅಹುದು, ಆತ ರುದ್ರ ಪುತ್ರ; ಸಿದ್ಧಲಿಂಗ ಶಿಶು. ಚನ್ನಬಸವಮ್ಮನ ಚನ್ನ. ವೀರಭದ್ರನ ವರಗುವರ.

ಚನ್ನ ರುದ್ರ ಚನ್ನಿಗನಾಗಿ, ಸಿದ್ಧ ಶಿಶು ಶುದ್ಧನಾಗಿ ಬೆಳೆಯುವನು. ಐದು ವರುಷ ತುಂಬುವುವು. ಓದುಮನೆ ಸೇರುವನು. ಅಕ್ಕರೆಯಿಂದ ಅಕ್ಕರಗಳ ಕಲಿವನು. ತರಗತಿಗೆ ಸೇರುವನು. ನುಡಿಗಲಿವನು. ಶಬ್ದ ವಾಕ್ಯಗಳು ಆತನಿಗೆ ಹೊರೆಯೆನಿಸಲಿಲ್ಲ. ಮನಗೊಟ್ಟು ನಿರಾಯಾಸವಾಗಿ ಕಲಿತನು. ಇದರಿಂದ ರುದ್ರನ ಪ್ರಾಥಮಿಕಾಭ್ಯಾಸ ಅಡೆತಡೆಯಿಲ್ಲದೆ ಸಾಗಿ ಮುಗಿಯಿತು.

ರುದ್ರನ ಬಾಲ್ಯ ಕ್ಷುದ್ರ ಹುಡುಗರಂತಿರಲಿಲ್ಲ. ಕ್ಷುದ್ರ ಗುಣಗಳಿರಲಿಲ್ಲ. ಆತನದೇ ಆದ ಸುಸ್ವಭಾವ; ಶಾಂತ ವೃತ್ತಿ, ಗಂಭೀರ ಗುಣ. ಅಲ್ಲದ ಸಲ್ಲದ ಆಟಗಳಲ್ಲಿ

ಸೇರುತ್ತಿರಲಿಲ್ಲ. ಒರಟು ಮಾತುಗಳನ್ನು ಆಡುತ್ತಿರಲಿಲ್ಲ. ಅರ್ಚನ ಧ್ಯಾನಗಳೆಂದರೆ ಆತನಿಗೆ ಆಸಕ್ತಿ ! ಸ್ವಾಮಿಗಳನ್ನು ಕಂಡರೆ ಭಕ್ತಿ. ಸ್ವಾಭಾವಿಕವಾಗಿ ಭಾವಜೀವಿ.

ಆ ಊರಿನಲ್ಲಿ ಒಬ್ಬ ಒಳ್ಳೆಯ ಸ್ವಾಮಿಗಳಿದ್ದರು. ಅವರ ಹೆಸರು ಕುಂಟಯ್ಯ ಸ್ವಾಮಿ. ಅವರು ತಪಸ್ವಿ, ತೇಜಸ್ವಿ; ಅವರು ಗದಗ ನಗರ ಬಳಿಯಿರುವ ಕಪೋತ ಗುಡ್ಡದ ಗವಿಯಲ್ಲಿದ್ದು ಲಿಂಗಾರ್ಚನ ಶಕ್ತಿಯನ್ನು ಬೆಳೆಸಿಕೊಂಡವರು. ಲಿಂಗಾನಂದ ಲೋಲರು. ಆ ಊರಿನ ಭಕ್ತರ ಬೇಡಿಕೆಯಂತೆ ಆ ಊರಿನಲ್ಲಿಯೆ ತಂಗಿದ್ದರು. ಅವರಿಗಾಗಿ ಒಂದು ಮಠವನ್ನು ಊರಿನವರು ಕಟ್ಟಿಸಿಕೊಟ್ಟಿದ್ದರು. ಅದರಲ್ಲಿ ಅವರು ತ್ರಿಕಾಲ ಪೂಜಾ ನಿಷ್ಠರಾಗಿದ್ದರು. ಅವರ ಕಾಲು ಕುಂಟಾಗಿದ್ದರೂ ಕಾಲ ಕುಂಟಾಗಿರ ಲಿಲ್ಲ. ಲಿಂಗ ಪೂಜಾವ್ರತ ಕುಂಟಾಗಿರಲಿಲ್ಲ. ಕರ್ಮ ಮಾಯೆಗಳಿಗೆ ಸಿಕ್ಕು ಮನ ಭಾವಗಳು ಕುಂಟಾಗಿರಲಿಲ್ಲ. ಅವರ ಶಿವಧ್ಯಾನ, ಶಿವಜ್ಞಾನ, ಶಿವಧಾರಣ ಕುಂಟಾಗಿರ ಲಿಲ್ಲ. ತುದಿಯವರೆಗೂ ತಪ್ಪದೆ ನಡೆಸಿದ ಮಹಾನುಭಾವರು. ನಡೆಸಿ ಕಡೆಗೆ ಅಲ್ಲಿಯೆ ಲಿಂಗೈಕರಾಗಿದ್ದರು. ಅವರಿಗಾಗಿ ಅವರ ಮಠದಲ್ಲಿ ಒಂದು ಗದ್ದುಗೆಯನ್ನು ಕಟ್ಟಿಸಿದ್ದರು. ಅದರಲ್ಲಿ ಅವರ ಕ್ರಿಯಾ ಸಮಾಧಿಯಾಯಿತು. ಅದೊಂದು ಆ ಊರಿನ ಜಾಗ್ರುತ ಸ್ಥಲವಾಗಿ ಏರ್ಪಟ್ಟಿತು. ಅದರ ಮೇಲೆ ಊರಿನವರ ಶ್ರದ್ಧೆ ಹೆಚ್ಚಿತು. ಜಾತ್ರೆಯನ್ನು ಮೂರು ವರುಷಕ್ಕೊಮ್ಮೆ ವೈಭವದಿಂದ ಜರುಗಿಸುವಂತಾಯಿತು.

ಅದರಿಂದಾಗಿ ಅಲ್ಲಿಗೆ ಎಲ್ಲರಂತೆ ರುದ್ರನೂ ಹೋಗಿ ಬರುತ್ತಿದ್ದನು. ಅಲ್ಲಿನ ಆ ಪವಿತ್ರ ವಾತಾವರಣ ಆತನ ಮನಸ್ಸನ್ನು ಮತ್ತಷ್ಟು ಆಕರ್ಷಿಸಿತು. ಮೊದಲೇ ಭಾವಜೀವಿ. ಆ ಮಠ ಆ ಗದ್ದುಗೆಗಳು ಆತನ ಭಾವ ಪರಿವರ್ತನಕ್ಕೆ ಮತ್ತಷ್ಟು ಕಾರಣವಾಗುವುವು. ಆತನಿಗೆ ಪ್ರಾಥಮಿಕ ಶಿಕ್ಷಣ ಮುಗಿದಿತ್ತು. ಮುಂದೆ ಓದಲು ಶಾಲೆಯಿರಲಿಲ್ಲ. ಮಾಡಲು ಬೇರೆ ಬದುಕಿರಲಿಲ್ಲ. ಇದ್ದರೂ ಮಾಡುವ ವಯವಲ್ಲ. ಹೀಗಾಗಿ ಬಿಡುವಿಗಿಂಬು. ಸಾಲದ್ದಕ್ಕೆ ನಿತ್ಯ ಊರಿನವರು ಬೆಳಗಾದರೆ ಮಿಂದು ಮಡಿಯುಟ್ಟು ತೆಂಗಿನಕಾಯಿ ಊದಿನಕಡ್ಡಿ ಹಣ್ಣುಹಂಪಲ ಸಕ್ಕರೆ ಉತ್ತತ್ತಿ ಹಿಡಿದು ಕೊಂಡು ಗದ್ದಿಗೆಗೆ ಬರುತ್ತಿದ್ದರು. ಬಂದು ಗದ್ದುಗೆಗೆ ಪೂಜೆ ಸಲ್ಲಿಸಿ ಭಕ್ತಿಯಿಂದ ವಂದಿಸಿ ಬಾಳಿಗೆ ಒಳಿತನ್ನು ಬೇಡಿಕೊಂಡು ಹೋಗುತ್ತಿದ್ದರು. ಇದನ್ನು ರುದ್ರನು ದಿನ ದಿನವೂ ನೋಡುತ್ತಿದ್ದ. ಈ ಘಟನೆಗಳು ಆತನ ಮನದಮೇಲೆ ಪರಿಣಾಮ ಮಾಡದೆ ಬಿಡಲಿಲ್ಲ. ಪೂಜೆ ಪುರಸ್ಕಾರಗಳನ್ನು ನೋಡಿ ನೋಡಿ ಪ್ರೇರಿತನಾದ. ತಾನೂ ಪ್ರತಿದಿನ ಪ್ರಾತಃಕಾಲ ಜಳಕಮಾಡಿ ಅಲ್ಲಿಗೆ ಬಂದು ಪೂಜಿಸುತ್ತಿದ್ದ. ಧ್ಯಾನಿಸು ತ್ತಿದ್ದ; ತಲ್ಲೀನನಾಗುತ್ತಿದ್ದ. ನಿತ್ಯ ಹೀಗೆಯೆ ಮಾಡತೊಡಗಿದ. ದಿನಗಳೆದಂತೆ ಅದ ರಲ್ಲಿ ಆತನಿಗೆ ಅಭಿರುಚಿ ಹೆಚ್ಚುವುದು. ಹೆಚ್ಚು ಹೆಚ್ಚು ವೇಳೆ ಪೂಜೆಯಲ್ಲಿ, ಭಜನೆಯಲ್ಲಿ, ಧ್ಯಾನಾದಿಗಳಲ್ಲಿ ಕಳೆಯತೊಡಗುವನು. ಒಂದು ದಿನ ತೀರ ಹೊತ್ತಾಗಿ ಮನೆಗೆ ಬರುವನು. ತಾಯಿ ಮಗ ಎಲ್ಲಿಗೆ ಹೋದನೋ ಏನಾದನೋ ಎಂದು ದಿಗಿಲು

ಗೊಂಡಿರುವಳು; ದಿಕ್ಕುತೋರದಂತಿರುವಳು. ಅಷ್ಟರಲ್ಲಿ ಮಗ ನಗನಗುತ ಮನೆಗೆ ಬರುವನು. ಕಂಡು ತಾಯಿಯೂ ತೋಷಿಸುವಳು. ಎಲ್ಲಿಗೆ ಇಷ್ಟೊತ್ತು ಹೋಗಿದ್ದೆ? ಎಂದು ಕೇಳುವಳು. ಎಲ್ಲಿಗೂ ಹೋಗಿರಲಿಲ್ಲವ್ವಾ, ಸ್ವಾಮಿಗಳ ಗದ್ದುಗೆಗೆ ಹೋಗಿದ್ದೆ. ಅಲ್ಲಿಯೇ ಇಲ್ಲಿಯ ವರೆಗೆ ಪೂಜೆ, ಭಜನೆ ಮಾಡಿಕೊಂಡಿದ್ದೆ. ಬೇರೆಲ್ಲಿಗೂ ನಾನು ಹೋಗಲಾರೆ; ಹೋಗೆನು. ನೀನು ಅಂಜಬೇಕಾಗಿಲ್ಲ, ಅಳುಕಬೇಕಾಗಿಲ್ಲ. ಎಂದು ತನ್ನ ಕಂದ ಹೇಳಲು ತಾಯಿಯ ಹೃದಯ ತುಂಬಿ ಬರುವುದು. ಮಗನ ದೈವೀ ಶ್ರದ್ಧೆಗಾಗಿ ತಬ್ಬಿಕೊಂಡು ಮುದ್ದಿಡುವಳು. ಹೀಗೆಯೆ ಮುಂದುವರಿ ಎಂದು ಹೇಳಿ ಅದಕ್ಕೆ ತಕ್ಕ ಸಕಲ ಸೌಕರ್ಯಗಳನ್ನು ಒದಗಿಸುತ್ತ ಬರುವಳು. ರುದ್ರನ ಸ್ವಾಮಿ ನಿಷ್ಠೆ ಪೂಜಾಸಕ್ತಿ ಭಜನಾವೇಶ ಶಿವಧ್ಯಾನ ಪ್ರೇಮ ಹೆಚ್ಚುತ್ತ ಬರುವುದು. ಅದೇ ಸತ್ ಸಂಸ್ಕಾರದಲ್ಲಿ ಸಂವೃದ್ಧಿಸುವನು.

ರುದ್ರನಿಗೆ ಪ್ರಾಥಮಿಕ ಶಿಕ್ಷಣದಲ್ಲಿ ನಾಲ್ಕೈದು ವರುಷ, ಪೂಜೆ ಭಜನೆ ಧ್ಯಾನಾದಿ ಗಳಲ್ಲಿ ನಾಲ್ಕೈದು ವರುಷಗಳು ಕಳೆಯುವುವು. ಹದಿನಾಲ್ಕು ತುಂಬಿ ಹದಿನೈದರಲ್ಲಿರು ವನು. ಊರಿನವರಿಗೆಲ್ಲ ತುಂಬಾ ಬೇಕಾದವನಾಗಿದ್ದನು. ಇವನ ಸದ್ಗುಣ ಸುಸ್ವಭಾವ ಗಳನ್ನು ನೋಡಿ ಎಲ್ಲರೂ ಮೆಚ್ಚಿ ಹೊಗಳುವವರಾಗಿದ್ದರು. ಈತನೊಬ್ಬ ಯೋಗಿಯೋ ಸ್ವಾಮಿಯೋ ಆಗುವನೆಂದು ಎಲ್ಲರೂ ಹೃದಯ ತುಂಬಿ ಹರಸು ತ್ತಿದ್ದರು. ಹೀಗಿರಲು ಒಂದು ಅಪೂರ್ವ ಘಟನೆ ಘಟಿಸುವುದು. ಗುರುದೇವನ ಆಗಮನವಾಗುವುದು.

ಬಬಲೇಶ್ವರ ಪಟ್ಟದ ಮಠ, ಪುರಾತನ ಪಾವನ ಮಠ; ಜಗದ್ಗುರು ರಂಭಾಪುರಿ ರೇಣುಕ ಪೀಠದ ಪರಂಪರೆಯ ಶಿಷ್ಯ ಶಾಖಾ ಮಠ. ಗುರುಸ್ಥಲದ ಗಣ್ಯ ಮಠ. ಇದು ಶ್ರೀ ಶಾಂತವೀರ ಶಿವಾಚಾರ್ಯರಿಂದ ಮೊದಲಾದ ಮಠ. ಈಗ ಇದೇ ಹೆಸರಿನ ಅಯ್ಯನವರು ಅಧಿಕಾರಿಗಳಾಗಿರುವರು. ಅವರು ಕ್ರಿ.ಶ. ೧೯೦೩ ರಲ್ಲಿ ಮುಂಟೂರಿನ ೭೭೦ ಮಂಟಪ ಪೂಜೆಗೆ ಬಿಜಯಂಗೆಯ್ಸಿ, ಅಲ್ಲಿಂದ ತರ್ಲಗಟ್ಟಕ್ಕೆ ಬರುವರು. ಶ್ರೀ ಸಿದ್ಧಲಿಂಗ ಶರಣರ ಮನೆಯಲ್ಲಿ ಅರ್ಚನೆ ಏರ್ಪಡುವುದು.

ಮನೆ ಗುರುಗಳು ಮನೆಗೆ ಬಂದರೆಂದು ಮನೆಯವರೆಲ್ಲರಿಗೂ ಮಹಾನಂದ. ನಿಡುಗಾಲದ ಬಯಕೆ ಕೈಗೂಡಿ ಬಂದುದಕ್ಕೆ ಅದರಲ್ಲಿಯೂ ಅನಿರೀಕ್ಷಿತವಾಗಿ ಅಪ್ರಾರ್ಥಿತ ವಾಗಿ ಒದಗಿ ಬಂದುದಕ್ಕೆ ಅವರಿಗಾದ ಆನಂದ ಅನಿತಿನಿತಲ್ಲ. ಏನಾದರೂ ಸಿಕ್ಕ ಬಹುದು; ಶ್ರೀ ಗುರುದೇವನ ಸಂದರ್ಶನ ಸಂಭಾಷಣ, ಲಿಂಗಾರ್ಚನ, ಸಿಕ್ಕುವುದು ಅಪರೂಪ. ಅದಕ್ಕಿಂತ ಭಾಗ್ಯ ಬೇರಿಲ್ಲ; ಪುಣ್ಯ ಬೇರಿಲ್ಲ. ಕಿರಿಯ ಮಗ ರುದ್ರನಿಗಂತೂ ಆದ ಆನಂದವನ್ನು ಹೇಳಲಾಸಲ್ಲ. ಗದ್ದುಗೆಯ ಮೇಲೆಯೆ ಅಷ್ಟೊಂದು ನಿಷ್ಠಾವಂತ ನಾಗಿರುವಾಗ ಸಾಕ್ಷಾತ್ ಗುರುವೆ ಬಂದಿರುವಾಗ ಕೇಳಬೇಕೆ? ಆತನಿಗೆ ಸಂಭ್ರಮವೇ ಸಂಭ್ರಮ. ಆತನ ಉಲ್ಲಾಸ ಉಕ್ಕಿ ಉಕ್ಕುಂದವಾಗಿ ಹರಿಯುತ್ತಿದೆ.

ಶಿವಪೂಜೆಗಾಗಿ ಸೇವೆ ಸನ್ನದ್ಧವಾಗಿದೆ. ಶ್ರೀ ಗುರುವಿನ ಸ್ನಾನವಾಗಿ ಶಿವ ಪೂಜೆ ವೈಭವವಾಗಿ ಸಾಗಿ ಮುಗಿದಿದೆ. ಲಿಂಗ ಪೂಜೆಯಾದ ಬಳಿಕ ಗುರು ಪೂಜೆ ಪಾದ ಪೂಜೆಗಳಾಗಿವೆ. ಪಾದೋದಕ ಪ್ರಸಾದಗಳಾಗಿವೆ. ಮಹಾ ಪ್ರಸಾದದ ಆರೋಗಣೆಯೂ ಆನಂದವಾಗಿ ಆಗಿದೆ. ಸೇವೆಯನ್ನು ಅಣಿಮಾಡುವುದರಲ್ಲಿ ಶಿವ ಪೂಜಾ ಸಮಯದಲ್ಲಿ ವಹಿಸಿದ ಸಾವಧಾನತೆಯಲ್ಲಿ ಕರುಣ ಪ್ರಸಾದವನ್ನು ತೆಗೆದು ಕೊಂಬುವುದರಲ್ಲಿ ರುದ್ರನು ತೋರಿದ ಜಾಣ್ಮೆಯನ್ನು ಶ್ರದ್ಧೆಯನ್ನು, ನಿಷ್ಠೆಯನ್ನು, ಕಂಡು ಶ್ರೀ ಶಾಂತವೀರ ಗುರುವರ್ಯರು ಸೋಜಿಗಗೊಂಡಿದ್ದಾರೆ ; ಸಂತಸಗೊಂಡಿದ್ದಾರೆ.

ಬಳಿಕ ಸಿದ್ಧಲಿಂಗಶರಣರು ಶ್ರೀ ಗುರುವಿನ ಶ್ರೀ ಚರಣಕ್ಕೆ ಸಮರ್ಪಿಸಲು ಕಾಣಿಕೆ ಯನ್ನು ಅಣಿಗೊಳಿಸಿದ್ದಾರೆ. ಅರ್ಪಿಸ ಹೋಗಿದ್ದಾರೆ. ಗುರುಗಳು ಅದನ್ನು ಸ್ವೀಕರಿ ಸದೆ ಶರಣರೆ ನಮಗೀ ಕಾಣಿಕೆ ಬೇಕಿಲ್ಲ. ಇದು ಜಡ ಕಾಣಿಕೆ. ನಮಗೊಂದು ಇಂದು ಚೇತನ ಕಾಣಿಕೆ ಬೇಕಾಗಿದೆ ; ಕೊಡುವಿರಾ ? ಎಂದು ಕೇಳಲು, ದಂಪತಿಗಳು ಅಚ್ಚರಿ ಗೊಂಡರಾದರೂ ಅಂಜಲಿಲ್ಲ ; ಹಿಂಜರಿಯಲಿಲ್ಲ. ತಮ್ಮಪ್ಪಣೆಯಾದರೆ ಏನನ್ನಾದರೂ ಸಲ್ಲಿಸಲು ಸಿದ್ಧರಿದ್ದೇವೆಂದು ಸಂತಸದ ಒಪ್ಪಿಗೆಯನ್ನೀಯುವರು. ಆಗ ಗುರುಗಳು ಹೆಚ್ಚಾದ ಹರುಷದಿಂದ ಓ ಶರಣರೆ, ಮುದ್ದು ಮುದ್ದಾದ ಈ ರುದ್ರನನ್ನು ನಮ್ಮ ಮಠಕ್ಕೆ ಕೊಟ್ಟು ಬಿಡಿರಿ. ಇದರಿಂದ ನಮಗೆ ತುಂಬಾ ಆನಂದವಾಗುತ್ತದೆ. ಈತನು ಗುರುಸ್ಥಾನಕ್ಕೆ ತಕ್ಕವನಾಗಿದ್ದಾನೆ. ಈತನಲ್ಲಿ ಗುರು ಸಹಜವಾದ ಸಂಸ್ಕಾರವಿದೆ. ಮುಖದಲ್ಲಿ ಶಾಂತ ಮುದ್ರೆಯಿದೆ. ಸೇವೆಯಲ್ಲಿ, ಪೂಜೆಯಲ್ಲಿ, ಧ್ಯಾನ, ಧಾರಣಗಳಲ್ಲಿ ಶ್ರದ್ಧೆಯ ಆವಿಷ್ಕಾರವಿದೆ. ಆಗಿನಿಂದಲೂ ನೋಡಿ ನೋಡಿ ನಮ್ಮ ಮನ ಮಾರು ಹೋಗಿದೆ. ಗುರುಪುತ್ರನನ್ನಾಗಿಸಿಕೊಳ್ಳಬೇಕೆಂಬ ಅಪೇಕ್ಷೆ ಅತ್ಯುತ್ಕಟವಾಗಿದೆ. ಇಂತಹ ಒಳ್ಳೆಯ ಹುಡುಗನನ್ನು ನಾವೆಲ್ಲಿಯೂ ನೋಡಲಿಲ್ಲ. ಕಾರಣ ಏನು ಹೇಳುವಿರಿ ? ಎಂದು ಕೇಳಲು, ದಂಪತಿಗಳು ಹೃದಯ ತುಂಬಿ ತುಳುಕಿ ಮನ ಅಳುಕದೆ ಮರುಮಾತಿಲ್ಲದೆ ಮಗನನ್ನು ಶ್ರೀ ಗುರು ಪಾದಪದ್ಮಕ್ಕೆ ಸಮರ್ಪಿಸುವರು. ಮಗನೂ ತಾಯ್ತಂದೆಗಳ ಮಾತನ್ನು ಮೀರದೆ ಮನಸಾರೆ ಒಪ್ಪುವನು. ಗುರುಗಳೊಡನೆ ಹೊರಡಲು ಸಿದ್ಧನಾಗುವನು.

ಶಾಂತವೀರ ಶಿವಾಚಾರ್ಯರು ಅತ್ಯಂತ ಸಂತಸದಿಂದ ಮನೆ ಮಂಡಳಿಗೆಲ್ಲ ಆಶೀರ್ವ ದಿಸಿ ರುದ್ರ ವಟುವನ್ನು ತಮ್ಮೊಡನೆ ಕರೆದುಕೊಂಡು ಹೊರಡುವರು. ನಾಡಿನಲ್ಲಿ ಸಂಚರಿಸುತ್ತ ನಾಡಿಗರನ್ನು ಉದ್ಧರಿಸುತ್ತ ಬಹುದಿನ ಕಳೆದ ಬಳಿಕ ಬಬಲೇಶ್ವರ ಗುರುಮಠಕ್ಕೆ ಆಗಮಿಸುವರು.

ವಟುವಾಗಿ ಬಂದ ರುದ್ರನಿಗೆ ಉತ್ಕಟವಾದ ಉತ್ಸಾಹ. ತನ್ನ ಗುರುದೇವನ ಸೇವೆಯನ್ನು ತ್ರಿಕರಣಗಳಿಂದ ಮಾಡುವನು. ಯಾವ ಲೋಪ ದೋಷಗಳಿಲ್ಲದಂತೆ

ಮಾಡುವನು. ಮತ್ತು ಅತ್ತಿತ್ತ ಹರಿದಾಡದೆ, ಅದನಿದನು ಬಯಸದೆ ಯಾವಾಗಲೂ ಸರಳನಾಗಿ ಭಾವಭರಿತನಾಗಿರುವನು. ಸಕಲ ಸದ್ಗುಣಗಳಿಂದ ಶೋಭಿಸುವನು. ಇದನ್ನು ಕಂಡು ಶ್ರೀ ಗುರುವರ್ಯರಿಗೆ ಇದ್ದದ್ದೂ ಕೃಪೆ ಹೆಚ್ಚುವುದು. ತಮಗೆ ತುಂಬಾ ವಯಸ್ಸಾದುದರಿಂದ ಮುಂದೆ ಈತನಿಗೆ ಮಠದ ಉತ್ತರಾಧಿಕಾರವನ್ನು ವಹಿಸಬೇಕೆಂದು ಸಂಕಲ್ಪಿಸುವರು. ಅಂತೆಯೇ ತಮ್ಮ ಸಂದರ್ಶನಕ್ಕೆ ಬಂದ ವೀರನ ಗೌಡರು ಪಾಟೀಲ, ಗುರುಪಾದಪ್ಪಗೌಡ, ಬಾಬಣ್ಣನವರ ಇವರೇ ಮೊದಲಾದ ಊರ ಭಕ್ತರಿಗೆಲ್ಲ ಈತನನ್ನು ತೋರಿಸಿ ತಮ್ಮ ಅಭಿಪ್ರಾಯವನ್ನು ಅವರ ಮುಂದೆ ಆನಂದದಿಂದ ಅಭಿವ್ಯಕ್ತಗೊಳಿಸತೊಡಗಿದರು. ಕೇಳಿದ ಕಣ್ಣಾರೆ ಕಂಡ ಶಿಷ್ಯರಿಗೆಲ್ಲ ಹೆಮ್ಮೆ ಹರುಷಗಳುಂಟಾದವು, ಹೃದಯಾರೆ ಹೊಗಳ ತೊಡಗಿದರು. ತಾವು ಒಳ್ಳೆಯ ವಟುವನ್ನೇ ಆಯ್ಕೆ ಮಾಡಿರುವಿರಿ. ಗುರುವಿಗಿರಬೇಕಾದ ಗುಣಗಳಿವೆ. ಶಿಷ್ಯರನ್ನು ಉದ್ಧರಿಸುವ, ಶಕ್ತಿಯನ್ನು ಗಳಿಸುವ ಕುರುಹುಗಳು ಈಗಲೆ ಈತನಲ್ಲಿ ಕಾಣುತ್ತಿವೆ. 'ಹಣ್ಣಿನ ಗುಣ ಹೀಚಿನಲ್ಲಿ' ಎಂಬ ನಾಣ್ಣುಡಿಯಂತೆ ಎಳೆ ವಯಸ್ಸಿನಲ್ಲಿಯೆ ಒಳ್ಳೆಯ ತನವಿದೆ. ಜಾಣತನವಿದೆ. ಮತ್ತು ಉತ್ತಮ ಭವಿಷ್ಯವಿದೆ ಎಂದು ಅಭಿಪ್ರಾಯ ಪಡುವರು.

ದಿನಗಳೆದಂತೆ ವಟು ಶಿವಾಚಾರ್ಯರಿಗೂ ಸಕಲ ಶಿಷ್ಯರಿಗೆ ಬೇಕಾದವನೆನಿಸಿ ಬಾಳತೊಡಗಿದನು ; ತನ್ನ ಭಾವಿಕತನವನ್ನು ಬೆಳೆಸಿಕೊಳ್ಳುವನು. ಯಾವಾಗಲೂ ಶ್ರೀ ಗುರುಸೇವೆ, ಸದ್ಗ್ರಂಥಾಭ್ಯಾಸ, ಶಿವಧ್ಯಾನಾದಿಗಳಲ್ಲಿ ಕಾಲ ಕಳೆಯುವನು. ವಿನಯಾನ್ವಿತನು, ಕಾಲೋಚಿತವನ್ನರಿತು ಕೆಲಸ ಮಾಡುವನು. ಕಿರಿಯತನದಲ್ಲಿಯೆ ಹಿರಿಯತನವನ್ನು ತೋರುವನು.

ಆತನ ಪೂರ್ವ ಜನ್ಮದ ಸತ್‌ಸಂಸ್ಕಾರದ ಬಲದಿಂದಲೊ ಏನೊ ; ಯಾವಾಗಲೂ ಆತ್ಮಾನುಸಂಧಾನದಲ್ಲಿಯೆ ಇರುವನು. ಆಧ್ಯಾತ್ಮಿಕ ಅನುಕೂಲಗಳನ್ನು ಕಲ್ಪಿಸಿಕೊಳ್ಳುವನು. ಅಂತರ್ಲಕ್ಷ್ಯವುಳ್ಳವನಾಗಿರುವನು. ನಿಶ್ಚಲ ಮನ, ನಿರ್ಮಲ ಹೃದಯ, ನಿಶಿತ ಮತಿ, ನಿರಹಂಕಾರವೃತ್ತಿ, ನಿಶ್ಚಿಂತ ಚಿತ್ತ, ನಿಸ್ಪೃಹ ಭಾವ, ನಿಬ್ಬೆರಗಿನ ನೋಟಗಳಿಂದ ಕೂಡಿರುವನು. ಬಾಲಕರಿಗಿರಬೇಕಾದ ಪ್ರಾಕೃತಿಕ ಪ್ರವೃತ್ತಿಗಳಿರಲಿಲ್ಲ. ಚಪಲ ಚೇಷ್ಟೆಗಳಿರಲಿಲ್ಲ. ತಿನ್ನುಣ್ಣುವ ತವಕವನ್ನು ತೋರುತ್ತಿರಲಿಲ್ಲ. ಉಡುವ ತೊಡುವ ಅತಿ ಆಶೆ ಅಭಿಲಾಷೆಗಳನ್ನು ತೋರುತ್ತಿರಲಿಲ್ಲ. ಸರಳತೆ ಸರಸತೆಗಳೆ ಸಹಜ ಸ್ವಭಾವಗಳಾಗಿದ್ದವು. ಸದಾ ಸತ್ಪ್ರೇರಣೆಗಿಂಬು. ಪ್ರಕೃತಿಗೆ ಸೋಲುವ ಪ್ರವೃತ್ತಿಯಿಲ್ಲ. ಪ್ರಗತಿ ಚಿಹ್ನೆಗಳನ್ನೆ ಪ್ರದರ್ಶಿಸುತ್ತಿದ್ದ. ಆತನದು ದ್ರವಿಸುವ ಹೃದಯ, ಜ್ಯೋತಿಸುವ ಮುಖಮಂಡಲ. ಒಳ ಹೊರಗೂ ವಿಶುದ್ಧನಾಗಿದ್ದ ; ವಿಶಿಷ್ಟ ದೈವೀವಾತಾವರಣವನ್ನು ಬೀರುತ್ತಿದ್ದ. ಗುರುಕುಲಕ್ಕೆ ತಕ್ಕ ವ್ಯಾಸಂಗದಲ್ಲಿರುತ್ತಿದ್ದ. ಅವನದೇ ಆದ ಬಗೆಸೆಳೆವ ಸುಳುಹು, ಕಣ್ಮನ ತಣಿವ ಹೊಳಹು, ಒಳಿತನ್ನೆ ಸೂಸುವ ಒಲವು.

ಗೆಲವನ್ನೆ ಬೀರುವ ನಲಿವು. ಹೀಗಿರುವುದರಿಂದ ಆತನನ್ನು ಕಂಡವರಿಗೆಲ್ಲ ಕಡು ಹರುಷ ಹೊಮ್ಮುತ್ತಿತ್ತು.

ಹೀಗೆ ಕೆಲಕಾಲ ಗತಿಸಿದ ಬಳಿಕ ಆತನನ್ನು ನೋಡಲು ತರ್ಲಗಟ್ಟದವರು ಬಬಲೇಶ್ವರ ಮಠಕ್ಕೆ ಬರುವರು. ತಮ್ಮೂರಿನ ಈ ವಟು ಇಲ್ಲಿ ಎಲ್ಲರಿಗೂ ಬೇಕಾದವನಾಗಿ ವಿಶೇಷವಾಗಿ ಮಠದ ಗುರುದೇವನಿಗೆ ಬೇಕಾದವನಾಗಿ ಇರುವುದನ್ನು ಕಂಡು ಕೇಳಿ ಸಂತೋಷಿಸುವರು. ತಮ್ಮ ಊರಿಗೆ ಒಳ್ಳೆಯ ಹೆಸರನ್ನು ತಂದುದಕ್ಕೆ ಹೆಮ್ಮೆಪಡುವರು. ತಮ್ಮೂರಿಗೆ ಕರೆದೊಯ್ದು ನಾಲ್ಕು ದಿನ ಇರಿಸಿಕೊಂಡು ಊರಿನವರೆಲ್ಲರ ಆಸೆ ಆಕಾಂಕ್ಷೆಗಳನ್ನು ತೀರಿಸಿ ಸನ್ಮಾನಿಸಿ ಕಳಿಸಲು ಯೋಚಿಸುವರು. ಗುರುಗಳನ್ನು ಕೇಳಿದರೆ ಕಳಿಸುವರೋ ಇಲ್ಲವೋ ಎಂದು ಎಣಿಸಿ, ಬೇಗ ಮರಳಿ ಕಳಿಸುವೆವಲ್ಲಾ ಎಂದು ತಮ್ಮೊಳಗೆ ತಾವೆ ಸಮಾಧಾನ ತಂದುಕೊಂಡು ಕರಕೊಂಡು ಊರಿಗೆ ಹೋಗುವರು.

ಇತ್ತ ಮಠದಲ್ಲಿ ಶಿವಾಚಾರ್ಯರಿಗೆ ತುಂಬಾ ವಯಸ್ಸಾದುದರಿಂದ ಅನಾರೋಗ್ಯ ಮೈದೋರುವುದು. ದಿನದಿನಕ್ಕೆ ಹದುಳತೆ ಹದಗೆಡುವುದು; ಮಠದಲ್ಲಿ ವಟು ಇಲ್ಲದ ಚಿಂತೆಯೂ ಮನವನ್ನು ಮುತ್ತುವುದು. ಊರಿನ ಶಿಷ್ಯರನ್ನು ಬರಮಾಡಿಕೊಂಡು ಹೀಗೆ ಅಪ್ಪಣೆ ಮಾಡುವರು: "ಸಚ್ಛಿಷ್ಯರೆ, ದಿನದಿನಕ್ಕೆ ನಮ್ಮ ಅನಾರೋಗ್ಯ ಹೆಚ್ಚುತ್ತಿದೆ. ಶಿವನಿಚ್ಛೆಯಾದಂತಿದೆ. ನಮ್ಮ ತರುವಾಯ ಈ ಮಠಕ್ಕೆ ಮತ್ತಾರನ್ನು ಉತ್ತರಾಧಿಕಾರಿಗಳನ್ನಾಗಿ ತರಬಾರದು. ತನ್ನೂರಿಗೆ ಹೋದ ನಮ್ಮ ಮನಸ್ಸಿಗೆ ಮೆಚ್ಚಿನವನಾದ ಆ ರುದ್ರನೆಂಬ ವಟುವನ್ನೆ ಕರೆತಂದು ಮಠಕ್ಕೆ ಪಟ್ಟವನ್ನು ಕಟ್ಟಿರಿ. ಆತನು ಮಹಾ ಕಾರಣಿಕ ಪುರುಷನಾಗುವನು. ಆತನಿಂದ ಈ ಮಠದ ಏಳ್ಗೆ, ನಿಮ್ಮೆಲ್ಲರ ಉದ್ಧಾರ; ಸಾಹಿತ್ಯ ಸಂಸ್ಕೃತಿಗಳ ಪ್ರಸಾರ ಜರಗುವುದು" ಎಂದು ಅಪ್ಪಣೆಯನ್ನೀಯುವರು. ಇತ್ತ ಹಲವಾರು ದಿನಗಳಲ್ಲಿಯೆ ಶಾಂತವೀರ ಶಿವಾಚಾರ್ಯರು ಲಿಂಗೈಕ್ಯರಾಗುವರು. ಯಥಾವಿಧಿಯಾಗಿ ಕ್ರಿಯಾಸಮಾಧಿಯಾಗುವುದು.

ಹಲವು ದಿನಗಳು ಹೋದನಂತರ ಗುರುವಿನ ಅಪ್ಪಣೆಯಂತೆ ಊರಿನ ಹಿರಿಯರು ಸೇರಿ ತರ್ಲಗಟ್ಟಕ್ಕೆ ಒಬ್ಬರನ್ನು ಕಳಿಸಿ ಅಲ್ಲಿದ್ದ ರುದ್ರ ವಟುವನ್ನು ಕರೆತರುವರು. ಕರೆತಂದು ಮಠದಲ್ಲಿ ಇರಿಸುವರು. ರುದ್ರ ವಟು ತಾನು ಬರುವಷ್ಟರಲ್ಲಿ ತನ್ನ ಗುರುದೇವನು ಲಿಂಗೈಕ್ಯವಾದುದಕ್ಕೆ ಪರಿತಪಿಸುವನು. ಅನಾಥನಾದೆನೆಂದು ಅಳಲುವನು, ಶಿಷ್ಯರು ಸಮಾಧಾನಪಡಿಸುವರು. ಮಠಕ್ಕೆ ನಿಮ್ಮನ್ನೆ ಮಾಡಬೇಕೆಂದು ಗುರುವಿನಾಜ್ಞೆಯಾಗಿದೆಯೆಂದು ಹೇಳಿ ಒಪ್ಪಿಸುವರು.

## ಅಯ್ಯಾಚಾರ ಅಧಿಕಾರ ಅನುಗ್ರಹ :

ಅಯ್ಯತನದ ಆವಿಷ್ಕಾರ ಅಯ್ಯಾಚಾರ. ಪರಿಷ್ಕಾರ ನಿಷ್ಠವಾದ ಸಂಸ್ಕಾರ ಅಯ್ಯಾಚಾರ. ಅದಿಲ್ಲದೆ ಪೂರ್ವಾಶ್ರಮ ನಿರಸನವಾಗದು. ಮಾಂಸಮಯ ಪಿಂಡ

ಮಂತ್ರಮಯವಾಗದಂ. ಸತ್ಕ್ರಿಯಾಶ್ರಯಂ ಸದ್ರೂಪ ಸಮನಿಸದಂ. ತನುತ್ರಯಂ ಅಂಗತ್ರಯವಾಗದು. ಸತ್ ಚಿತ್ ಆನಂದ ಕಳೆಗಳು ಆಯಂತ ಸ್ವಾಯಂತ ಸಂನಿಹಿತ ವಾಗವು. ನಾಮರೂಪ ಗುಣ ಕ್ರಿಯೆಗಳು ಪರಿವರ್ತನವಾಗವು. ಇದರಿಂದಾಗಿ ರುದ್ರ ವಟುವಿಗೆ ಮಠಾಧಿಕಾರಕ್ಕೆ ಮೊದಲು ಮಾಡಬೇಕಾದ ಶಿವದೀಕ್ಷಾ ಸಂಸ್ಕಾರ ವನ್ನು ಶಿಷ್ಟರಂ ಏರ್ಪಡಿಸುವರಂ.

ಕ್ರಿ.ಶ. ೧೯೦೫ ರಲ್ಲಿ ದೀಕ್ಷಾಸಂಸ್ಕಾರ. ಇದನ್ನು ನೆರವೇರಿಸಿದ ದೀಕ್ಷಾಗುರುಗಳು ದೇವರ ಹಿಪ್ಪರಗೆಯ ಹಿರಿಯ ಮಠದ ಶ್ರೀ ಸಿದ್ಧರಾಮ ಶಿವಾಚಾರ್ಯರು; ಪೂಜ್ಯ ಪಾದರು. ವಿಧ್ಯುಕ್ತವಾಗಿ ವಟುವಿಗೆ ದೀಕ್ಷೆಯನ್ನು ಕರುಣಿಸುವರು.

ಅದೇ ವರುಷವೆ ಮಠಾಧಿಕಾರ. ಇದನ್ನು ಮನಗೂಳಿ ಹಿರಿಯಮಠದ ಶ್ರೀ ಮ. ಘ. ಸಂಗನಬಸವ ಶಿವಾಚಾರ್ಯರು ನಿರ್ವಹಿಸಿದರು. ಇದು ಅತ್ಯಂತ ವೈಭವದಿಂದ ಜರುಗಿತು. ನೂತನ ಮಠಾಧಿಕಾರಿಗಳಿಗೆ ಮಠದ ಪದ್ಧತಿಯಂತೆ ಶ್ರೀ ಷ. ಬ್ರ. ಶಾಂತ ವೀರ ಶಿವಾಚಾರ್ಯರೆಂದು ನಾಮಕರಣ ಮಾಡಲಾಯಿತು. ಪೀಠಾರೋಹಣ, ಕಾಣಿಕಾ ಸಮರ್ಪಣ, ಪ್ರಸಾದಾರೋಗಣ, ವಿದ್ವಾಂಸರ ಭಾಷಣ, ಧಾರ್ಮಿಕ ಸಮ್ಮೇಲನ ಕಾರ್ಯಗಳು ಸಾಂಗವಾಗಿ ಸಾಗಿವವು. ಪಲ್ಲಕ್ಕಿ ಉತ್ಸವವೂ ಪದ್ಧತಿಯಂತೆ ನಡೆಯಿತು.

ಇಷ್ಟೆಲ್ಲ ಆದ ಬಳಿಕ ಪ್ರಸಾದಿಸ್ಥಲ ದೀಕ್ಷೆಯಾಗುವುದು. ಇದನ್ನು "ಅನು ಗ್ರಹ" ಎಂದು ಕರೆವರು. ಇದು ಕಾರ್ತಿಕ ಶು. ಪ್ರತಿಪದೆಯ ಪವಿತ್ರ ಮುಹೂರ್ತದಲ್ಲಿ ಕ್ರಿ. ಶಕ ೧೯೦೭ ರಲ್ಲಿ ನಡೆಯಿತು. ಬಿದರಿ ಶ್ರೀ ಕುಮಾರ ಮಹಾಸ್ವಾಮಿಗಳವರಿಂದ ಒದಗುವುದು. ಇವರೊಬ್ಬರು ಮಹಾ ಸತ್ಪುರುಷರು; ಶಿವಯೋಗ ಸಿದ್ಧಪುರುಷರು.

ಹೀಗೆ ಸಂಸ್ಕಾರ ತ್ರಯವೊದಗಿ ನಾಮರೂಪ ಕ್ರಿಯೆಗಳು ಪರಿವರ್ತನಗೊಂಡವು. ತನುತ್ರಯ ವಾಸನೆಯಳಿದು ಲಿಂಗತ್ರಯವಾಸನೆ ಅಳವಟ್ಟಿತು. ಅನುಗ್ರಹದಿಂದ ಪದಾರ್ಥ ನಿಷ್ಠ ಷಡ್ರಸಗಳ ಪ್ರಾಕೃತಿಕ ರೂಪುಗಳ ಆಸೆ ಅಭಿರುಚಿಗಳು ಅಣಗುವವು. ಮಾಹೇಶತ್ವ ಪ್ರಾಸಾದಿಕತೆಗಳು ಪ್ರಾಪ್ತವಾದವು. ರುದ್ರಾರ್ಯನು ಶಾಂತವೀರ ಶಿವಾ ಚಾರ್ಯರಾದರು. ನರರೂಪವಳಿದು ಗುರುರೂಪವುಂಟಾಯಿತು. ಅಂಗ ಕ್ರಿಯೆಗಳು ತೊಲಗಿ ಲಿಂಗ ಕ್ರಿಯೆಗಳುಂಟಾದವು.

# ೪. ಪಾಠ ಶಾಲೆ, ಪಾಠ ಪ್ರಾರಂಭ

ಹೊನ್ನು ಮಣ್ಣುಗಳೆರಡರ ಅಧಿಕಾರ ವಹಿಸಿಕೊಂಡು ಆರನೆಯವರಾದ ನೂತನ ಶ್ರೀ ಶಾಂತವೀರ ಶಿವಾಚಾರ್ಯರು ಮಠದಲ್ಲಿ ಸುಮ್ಮನೆ ಕುಳಿತುಕೊಳ್ಳಲಿಲ್ಲ. ಕೇವಲ ಪ್ರಾಥಮಿಕಾಭ್ಯಾಸದಿಂದ ಅವರಿಗೆ ತೃಪ್ತಿಯಾಗಿರಲಿಲ್ಲ. ವಿದ್ಯಾಭಿಲಾಷೆ ವಿಶೇಷವಾಗಿದ್ದಿತು. ಪ್ರೌಢ ಶಿಕ್ಷಣಕ್ಕೆ ಅವರ ಮನ ತವಕಿಸುತ್ತಿತ್ತು. ತಮ್ಮಂತೆ ಬಯಸುವ ಬೇರೆಯವರಿಗೂ ಪ್ರೌಢ ಶಿಕ್ಷಣವೊದಗಲೆಂದು ಯೋಚಿಸಿದರು. ಸರಿ, ಅದರಂತೆ ಸಾಮೂಹಿಕವಾಗಿ ವಿದ್ಯಾಭ್ಯಾಸಕ್ಕೆ ಅನುಕೂಲವಾಗಲೆಂದು ತಮ್ಮ ಮಠದಲ್ಲಿಯೆ ಅದೇ ವರುಷವೆ ಒಂದು ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಲು ಯತ್ನಿಸಿದರು. ಈ ಕಾರ್ಯದಲ್ಲಿ ಶ್ರೀ ವೀರನಗೌಡರು ಪಾಟೀಲ ಇವರು ಉದಾರ ಹೃದಯದಿಂದ ಶಿವಾಚಾರ್ಯರಿಗೆ ನೆರವಾದರು. ಪಾಠಶಾಲೆ ಪ್ರಾರಂಭವಾಯಿತು. ಮೊದಲು ಶಿವಣಗಿಯ ಮಲ್ಲಿಕಾರ್ಜುನ ಶಾಸ್ತ್ರಿಗಳು, ಆ ಬಳಿಕ ಗುಳೇದಗುಡ್ಡದ ವಿರೂಪಾಕ್ಷ ಶಾಸ್ತ್ರಿಗಳು, ಹಳೆಬೀಡ ಬೈಲಹೊಂಗಲದ ಗಂಗಾಧರಶಾಸ್ತ್ರಿಗಳು ಅಧ್ಯಾಪಕರಾಗಿ ಕೆಲಸ ಮಾಡುವರು. ಮಠದ ಶಿವಾಚಾರ್ಯರೂ ಸಂಸ್ಕೃತಾಧ್ಯಯನ ಮಾಡುವರು. ಕಾವ್ಯ ಚಂಪೂ ನಾಟಕ ಅಲಂಕಾರ ಗ್ರಂಥಗಳನ್ನು ಅಭ್ಯಾಸ ಮಾಡುವರು. ಸಂಸ್ಕೃತ ಸಾಹಿತ್ಯದಲ್ಲಿ ಪರಿಣತರಾಗುವರು.

ಹೀಗೆ ಪಾಠಶಾಲೆ ಅವ್ಯಾಹತವಾಗಿ ಏಳೆಂಟು ವರುಷ ನಡೆಯುವುದು. ಬಳಿಕ ಅಧ್ಯಾಪಕರಿಲ್ಲದಂತಾಗುವುದು. ಆಗ ಶ್ರೀ ಶಾಂತವೀರ ಶಿವಾಚಾರ್ಯರೆ ಹಲವು ದಿನ ಪಾಠ ಹೇಳುವರು. ಪಾಠಶಾಲೆಯಲ್ಲಿ ಹಲವಾರು ಜನ ವಿದ್ಯಾರ್ಥಿಗಳಿದ್ದರು. ಅವರಲ್ಲಿ ಕೊಪ್ಪಳದ ಗವಿಮಠದ ಶ್ರೀ ಶಾಂತವೀರಸ್ವಾಮಿಗಳು, ಬೆಂಗಳೂರು ಸರ್ಪಭೂಷಣಮಠದ ಶ್ರೀ ಮಹಾದೇವಸ್ವಾಮಿಗಳು, ಸೊಲ್ಲಾಪುರದ ಕಿರೀಟ ಮಠದ ಸ್ವಾಮಿಗಳು, ಅಣದುರ್ಗ ಸಂಗಮೇಶ್ವರ ಸ್ವಾಮಿಗಳು, ಬಂಧನಾಳದ ಸಂಗನಬಸವ ಸ್ವಾಮಿಗಳು ಪ್ರಮುಖರು. ಬಬಲೇಶ್ವರ ಮಠದ ಪಾಠಶಾಲೆಯಲ್ಲಿಯೆ ಅಧ್ಯಯನ ಮಾಡಿದವರು ಒಟ್ಟಿಗೆ ೩೨ ಜನರು.

ಶ್ರೀ ಶಾಂತವೀರ ಶಿವಾಚಾರ್ಯರು ವ್ಯಾಕರಣ, ವೇದಾಂತ ಶಾಸ್ತ್ರಗಳನ್ನು ಓದಲು ಪಂಡಿತರೆಂದು ಪ್ರಸಿದ್ಧರಾದ ಕವಂತಗಿ ಹುಚ್ಚಪ್ಪಯ್ಯ ಸ್ವಾಮಿಗಳವರಲ್ಲಿಗೆ ಹೋಗುವರು. ಅಲ್ಲಿದ್ದು ಚೆನ್ನಾಗಿ ಓದುವರು. ಅಷ್ಟಕ್ಕೆ ತೃಪ್ತರಾಗದೆ ಉಚ್ಚ ವ್ಯಾಸಂಗಕ್ಕಾಗಿ

ಕಾಶಿಗೆ ಪಯಣ ಮಾಡುವರು. ನಡುದಾರಿಯಲ್ಲಿ ಸಂಗಡಿಗರೊಬ್ಬರಿಗೆ ಅತ್ಯಂತ ಅನಾರೋಗ್ಯವುಂಟಾಗುವುದು. ಅದನ್ನು ಕಂಡು ಮುಂದಕ್ಕೆ ಪಯಣಿಸುವುದು ಲೇಸಲ್ಲೆಂದು ಬಗೆದು ಹಿಂದಿರುಗುವರು. ತಮ್ಮ ಮಠದಲ್ಲಿಯೆ ತಾವೆ ತಾತ್ತ್ವಿಕ ಮತ್ತು ದಾರ್ಶನಿಕ ಗ್ರಂಥಗಳನ್ನು ಓದತೊಡಗುವರು. ವೀರಶೈವ ಷಟ್‌ಸ್ಥಲ ಸಿದ್ಧಾಂತವನ್ನು ಸಮಗ್ರವಾಗಿ ಪ್ರತಿಪಾದಿಸುವ 'ರೇಣುಕ ಗೀತೆ'ಯೆಂದು ಹೆಸರಾದ ಸಿದ್ಧಾಂತ ಶಿಖಾಮಣಿ, ಶ್ರೀಕರ ಭಾಷ್ಯ, ಶಿವಾದ್ವೈತಮಂಜರಿ, ಅನುಭವಸೂತ್ರ ಮೊದಲಾದ ಶಿವಾದ್ವೈತ ಸದ್ಗ್ರಂಥಗಳನ್ನು ಸಮಗ್ರವಾಗಿ ಅಧ್ಯಯನ ಮಾಡುವರು. ಅಲ್ಲದೆ ಅದ್ವೈತ ವಿಶಿಷ್ಟಾದ್ವೈತ ದ್ವೈತ ಸಿದ್ಧಾಂತಗಳ ಪರಿಚಯವನ್ನು ಪಡೆವರು. ಇಷ್ಟಾದರೂ ಬರೀ ಶಾಸ್ತ್ರಾಧಾರದಲ್ಲಿದ್ದು ಹೋದವರಲ್ಲ; ಜೊತೆಗೆ ಸ್ವಾನುಭವ ಸಂಪನ್ನರು.

### ಪ್ರಗತಿ ಪಥದಲ್ಲಿ ಶಿವಾಚಾರ್ಯರು :

ಅಧಿಕಾರ ಮಾತ್ರದಿಂದ ಕೃತಾರ್ಥರಾದೆವೆಂದು ಶ್ರೀ ಶಾಂತವೀರ ಶಿವಾಚಾರ್ಯರು ಭಾವಿಸಲಿಲ್ಲ. ಹೊರಗಿನ ಅಧಿಕಾರ ಮುಖ್ಯವಲ್ಲ. ಆಚಾರ ವಿಚಾರಗಳ ಅಧಿಕಾರ ಮುಖ್ಯ. ಇವಿಲ್ಲದೆ ವ್ಯಷ್ಟಿ ಪ್ರಗತಿಯಾಗಲಿ, ಸಮಷ್ಟಿ ಪ್ರಗತಿಯಾಗಲಿ ಸಾಗವು. ಸ್ವಯಗತಿ ಪರಗತಿಗಳು ಸಮನಿಸವು; ಎಂದು ಭಾವಿಸಿದ ಶಿವಾಚಾರ್ಯರು ಆಚಾರವನ್ನು ಆರಂಭಿಸುವರು. ಸ್ವೇಚ್ಛೆಯಾಗಿರಲಿಲ್ಲ. ಸಿಕ್ಕ ಸ್ವಾತಂತ್ರ್ಯವನ್ನು ದುರುಪಯೋಗ ಪಡಿಸಿಕೊಳ್ಳಲಿಲ್ಲ. ಬಹಿರಂಗ ಅಂತರಂಗಗಳ ಶುಚಿ ಪ್ರಗತಿಗೊಂದು ಹಂತವೆಂದು ನೆನೆದು ಯಾರ ನಿರ್ಬಂಧವಿಲ್ಲದೆ ತಾವೆ 'ಪಕ್ಕಾಮಡಿ' ಮಾಡತೊಡಗುವರು. ತಮ್ಮ ಅಡುಗೆಯನ್ನು ತಾವೇ ಮಾಡತೊಡಗುವರು. ತಮ್ಮ ಲಿಂಗಾರ್ಚನೆಗೆ ಬೇಕಾದ ಸಾಹಿತ್ಯವನ್ನು ತಾವೇ ಒದಗಿಸಿಕೊಳ್ಳುವರು. ಅವರದು ಜಡಕರ್ಮವಲ್ಲ, ಮೂಢಾ ಚಾರವಲ್ಲ. ಮನವರಿದು ಆಚಾರ–ಅರ್ಚನ ನಿರತರಾದವರು. ತಮ್ಮ ಅಡುಗೆಯನ್ನು ತಾವೆ ಮಾಡಿಕೊಳ್ಳುವಲ್ಲಿ ಪ್ರಗತಿಯಿದೆಯೆಂದು ತಾವೆ ಕಂಡುಕೊಂಡರು. ಆರೋಗ್ಯದ ಜೊತೆಗೆ ಸಾತ್ವಿಕ ಗುಣಗಳು ಮೈಗೂಡಿ ಬರುವವೆಂದು ಬಗೆದು 'ಸ್ವಯಂಪಾಕ'ಕ್ಕೆ ಕೈ ಹಾಕುವರು. ವಿಚಾರ (ವಿದ್ಯಾ) ಪ್ರಗತಿಯೊಡನೆ ಆಚಾರ ಪ್ರಗತಿಯನ್ನೂ ಸಾಧಿಸತೊಡಗಿದರು. ಆಚಾರ ಪ್ರಥಮ ಧರ್ಮವೆಂಬುದನ್ನು ಅರಿದಾಚರಿಸಿ ಆದರ್ಶ ವ್ಯಕ್ತಿಗಳಾಗಿ ಬಾಳತೊಡಗಿದರು. ಗುರುವಿಗೆ ಆಚಾರ ಅತ್ಯಗತ್ಯ. ಅದಿಲ್ಲದೆ 'ಆಚಾರ್ಯ'ನೆನಿಸನು. ಮೊದಲು ತಾನಾಚರಿಸಿ ಆಮೇಲೆ ಶಿಷ್ಯರನ್ನು ಆಚರಿಸ ಹಚ್ಚುವವನೆ ಆಚಾರ್ಯ. ಜೊತೆಗೆ ಶಾಶ್ವತವಾದ ಯಥಾರ್ಥವಾದ ಶಾಸ್ತ್ರಾರ್ಥಗಳನ್ನು ಸ್ವಾನುಭವಗಳನ್ನು ಸಂಗ್ರಹಿಸಿ ಸಂಗಳಿಸಿ ಶಿಷ್ಯರಿಗೂ ಬೋಧಿಸುವರು. ಮಹಾಲಿಂಗದ ಮೇಲುಪ್ಪರಿಗೆಯನೇರಬೇಕಾದರೆ, ಆಚಾರಲಿಂಗ ಗುರು(ಜ್ಞಾನ)ಲಿಂಗ ಶಿವಲಿಂಗಗಳ ಹಂತಗಳನ್ನು ಹತ್ತಬೇಕು. ಚರಲಿಂಗದಿಂದ ಒಳಕ್ಕೆ ದೂರ ದೂರ ಚರಿಸಬೇಕು.

ಪ್ರಸಾದಲಿಂಗ ಪ್ರಸಾದವನ್ನು ಪಡೆಯಬೇಕು. ಆಗ ಆ ಮಹಾಚೇತನತ್ವ ಮೈಗೂಡು ತ್ತದೆ; ಮನಗೂಡುತ್ತದೆ. ಮಹಾನುಭಾವತ್ವ ವಾಸ್ತವವಾಗಿ ಅಳವಡುತ್ತದೆ. ಸತ್ಯಕ್ಕೂ ಶ್ರೀ ಶಾಂತವೀರ ಶಿವಾಚಾರ್ಯರಿಗೆ ಈ ಕ್ರಮದಲ್ಲಿ ಅಳವಟ್ಟಿದೆ. ಅವರು ಆಚಾರಶುದ್ಧರು, ವಿಚಾರಸಿದ್ಧರು; ಅನುಭಾವ ಪ್ರಸಿದ್ಧರು.

ಅವರು ಅಂಗ ಲಿಂಗಗಳ ಸಕೀಲಗಳನ್ನು ಚನ್ನಾಗಿ ಬಲ್ಲರು. ಅಷ್ಟಾವರಣ ಪಂಚಾಚಾರಗಳಿಂದ ಅಂಗಪ್ರಗತಿಯನ್ನು, ಷಟ್‌ಸ್ಥಲಗಳಿಂದ ಲಿಂಗಪ್ರಗತಿಯನ್ನು ಸಾಧಿಸಿದರು. ಅಂಗದಲ್ಲಿ ಆಚಾರ ಅಳವಟ್ಟು ಆತ್ಮನಲ್ಲಿ ಅರಿವು ಅಳವಟ್ಟು ಸ್ವಯಂಪೂರ್ಣರಾಗಿದ್ದಾರೆ. ಶಿವಾಚಾರ್ಯರಲ್ಲಿ ಸರ್ವಾದರ್ಶನರಾಗಿದ್ದಾರೆ. ಇದನ್ನು ಅವರು ತಮ್ಮ ಸ್ವಂತದ ವ್ಯಾಸಂಗದಿಂದ ಸಂಪಾದಿಸಿದರು. ಇದರಲ್ಲಿ ಅವರ ಆದರ್ಶ ಅಡಗಿದೆ. ಯಾರ ಪ್ರೇರಣೆಯಿಲ್ಲದೆ ಸ್ವಯಂ ಪ್ರೇರಣೆಯಿಂದ ಪ್ರಗತಿಯನ್ನು ಸಾಧಿಸಿದ ಸತ್ಕೀರ್ತಿ ಇವರದಾಗಿದೆ; ಸಚ್ಛಕ್ತಿ ಇವರದಾಗಿದೆ.

ಭಕ್ತಿ ಶಕ್ತಿಗಳೆರಡರ ಸಮನ್ವಯವನ್ನು ಇವರಲ್ಲಿ ಕಾಣಬೇಕು. ಇವರ ಅಂಗದಲ್ಲಿ ಭಕ್ತಿಯಿದೆ; ಲಿಂಗದಲ್ಲಿ ಶಕ್ತಿಯಿದೆ. ಇವರು ತಮ್ಮ ಭಕ್ತಿಯನ್ನು ಆಗಾಗ ಅಂತಃಕರಣಪೂರ್ಣವಾಗಿ ಅಭಿವ್ಯಕ್ತಿಗೊಳಿಸಿದ್ದಾರೆ. ಅಂತೆಯೆ ಆತ್ಮಶಕ್ತಿಯು ಅವರರಿಯದೆ ತನ್ನಿಂದ ತಾನೆ ಹಲವಾರು ಪ್ರಸಂಗಗಳಲ್ಲಿ ಪ್ರಕಾಶಿತವಾಗಿದೆ. ನುಡಿದಂತೆ ನಡೆಯುವುದರಲ್ಲಿ ಇವರಿಗೆ ಅತ್ಯಂತ ಆಸಕ್ತಿ. ಈ ದಿಸೆಯಲ್ಲಿ ಇವರಿಗೆ ಪ್ರತಿಯಿಲ್ಲದ ಪ್ರಗತಿ. ಅಹಂಕಾರ ಮಮಕಾರಗಳಿಗಿಂಬಿಲ್ಲ. ಪರಹಿತಪರಾಯಣರು. ಕಷ್ಟ ಸಹಿಷ್ಣುಗಳು. ಶಿಷ್ಯರ ಸರ್ವರ ಕ್ಷೇಮಕ್ಕಾಗಿ ಶ್ರಮಿಸುತ್ತಾರೆ; ಯೋಗಕ್ಕಾಗಿ ಚಿಂತಿಸುತ್ತಾರೆ. ತಮ್ಮಿಂದಾದಷ್ಟು ಸಹಾಯವನ್ನು ಅನುಗ್ರಹಿಸುತ್ತಾರೆ. ಪ್ರತಿಷ್ಠೆ ಪ್ರಖ್ಯಾತಿಗಳನ್ನು ಅದೆಂದಿಗೂ ಅದೆಷ್ಟು ಬಯಸರು. ಎಲ್ಲಕ್ಕೂ ಮಿಗಿಲಾಗಿ ಸಮಾಜವನ್ನು ಬಲಹೀನವನ್ನಾಗಿ ಮಾಡಿ ನಂಜುವಳ್ಳಿಯಂತೆ ಬೆಳೆಯುತ್ತಿರುವ ಗುರು ವಿರಕ್ತ ಭೇದ ಭಾವದಲ್ಲಿ ಇವರಿಗೆ ಅದೆಷ್ಟೂ ಆಸಕ್ತಿಯಿಲ್ಲ. ಇಬ್ಬರಲ್ಲಿಯೂ ಸಮಭಾವಿಗಳಾಗಿ ತಮ್ಮ ವಿನಯಕ್ಕೆ ವಿದ್ವತ್ತಿಗೆ ಹೊಂಗಳಸವನ್ನಿತ್ತಿದ್ದಾರೆ. ಸೇವಾ ಮನೋಭಾವಿಗಳು. ಶಿವಪೂಜಾಲೋಲರು.

ಇವರು, ಅಥಣಿ ಮುರುಘೇಂದ್ರ ಶಿವಯೋಗಿಗಳು, ಬಿದರಿ ಕುಮಾರ ಶಿವಯೋಗಿಗಳು, ಹಾನಗಲ್ಲ ಕುಮಾರ ಮಹಾಸ್ವಾಮಿಗಳು, ಬಬಲೇಶ್ವರ ಮಠದ ಎರಡನೆಯವರಾದ ಗುರುಪಾದ ಶಿವಾಚಾರ್ಯರು, ಈ ನಾಲ್ಕು ಜನ ಆಧುನಿಕ ವಿಭೂತಿ ಪುರುಷರ ಮೇಲೆ, ಪರಮೇಶ್ವರನ ಮೇಲೆ ಆಯ್ದಾರು ಅಷ್ಟಕಗಳನ್ನು, ಸಂಸ್ಕೃತದಲ್ಲಿ ಬರೆದಿದ್ದಾರೆ. ಶಾರ್ದೂಲವಿಕ್ರೀಡಿತ, ವಸಂತತಿಲಕ, ಉಪಜಾತಿ ವೃತ್ತಗಳಲ್ಲಿ ತಮ್ಮ ಇಪ್ಪತ್ತು ಇಪ್ಪತ್ತೆರಡನೆ ವಯಸ್ಸಿನಲ್ಲಿ ಉತ್ತಮವಾಗಿ ಬರೆದಿದ್ದಾರೆ. ಇವು ಅಚ್ಚಾಗಿವೆ.



 

ಇವರ ಪ್ರಥಮ ಹಾರ್ದಿಕ ಗುರು ಆ ಪರಮೇಶ್ವರ. 'ಕಾರುಣ್ಯಾಮೃತಸಾಗರಂ ಗುರುವರಂ ವಂದೇ ಸದಾ ಪಾತು ಮಾಂ' ಎಂದಿದ್ದಾರೆ. ಏಕೆಂದರೆ ಆತನು 'ನಿಜ ಲೀಲೆಯಿಂದ ಪಶುಪತಿ'ಯಾಗಿದ್ದಾನಂತೆ ! ಆತನನ್ನು 'ಭಕ್ತ್ಯಾಭಜೇ' 'ಈಡೇ ಮುದಾ' 'ದೇಹೀಷ್ಟಸಿದ್ಧಿಂ ಸದಾ' 'ವಸತು ಮೇ ಸ್ವಾಂತೇ ಸ ಮೃತ್ಯುಂಜಯಃ' 'ಮೇ ಹೃದಯಂ ಸುಖೇನ ರಮತಾಂ' ಎಂದು ಪ್ರಾರ್ಥಿಸಿದ್ದಾರೆ. 'ಸ್ವಾಮಿನ್ ಶ್ರೀ ಮುರುಘೇಂದ್ರ ನಿರ್ಮಲತರಾಂ ಬುದ್ಧಿಂ ಸದಾ ದೇಹಿ ಮೇ' 'ನಿಜ ಬೋಧೇನೈವ ಮಾಮುದ್ಧರ' 'ತೇ ಪಾದಪದ್ಮಭಜನಂ ಭಗವನ್... ಸೇವಾರತಸ್ಯಮಯ ದೇಹಿ ಕುಮಾರಯೋಗಿನ್' 'ಗುರುಕುಮಾರೇಶಂ ಭಜೇ ಸಾದರಂ' 'ಶ್ರೀದಂ ಭಜೇsಹಂ ಗುರುಪಾದದೇವಂ' ಎಂದು ನಿರಾಭಾರಿ – ಸಾಭಾರಿ ಗುರುಗಳನ್ನು ಭಾವತುಂಬಿ ಭಜಿಸಿದ್ದಾರೆ. ಇಲ್ಲಿ ಅವರಿಗಿರುವ ಭಕ್ತಿಯನ್ನು ಧೀಶಕ್ತಿಯನ್ನು ನೋಡಬೇಕು. ಜೊತೆಗೆ ಗುರು–ವಿರಕ್ತರನ್ನು ಸಮಗಾಣುವ ಶ್ರೇಷ್ಠ ಸ್ವಭಾವವನ್ನು ಮನಗಾಣಬೇಕು.

ಕ್ರಿ. ಶ. ೧೯೧೨ರಲ್ಲಿ ಊರ ಹಿರಿಯರೂ, ಮಠದ ಮಹಾಭಕ್ತರೂ, ಶ್ರೀ ಶಾಂತವೀರ ಶಿವಾಚಾರ್ಯರಿಗೆ ಸರ್ವರೀತಿ ಸೇವೆ ಸಲ್ಲಿಸುತ್ತ ಬಂದವರೂ ಆದ ಪಾಟೀಲ ವೀರನಗೌಡರು ಪರಲೋಕವಾಸಿಗಳಾದರು. ಬಬಲೇಶ್ವರ ಮಠಕ್ಕೂ, ಮಹಾಜನರಿಗೂ ಮಾಯಲಾರದ ಪೆಟ್ಟು ಬಿದ್ದಿತು. ಮೇಟಿಯೇ ಮುರಿದಂತಾಯಿತು. ವೀರನಗೌಡರಿದ್ದಾಗ ಹತ್ತು ವರುಷ ಹರುಷದಿಂದ ಕಾಲ ಕಳೆದೆ; ಮುಂದಿನ ಎಪ್ಪತ್ತು ವರುಷ ವಿಪತ್ತಿನಿಂದ ಕೂಡಿವೆ ಎಂದು ಸ್ವತಃ ಶ್ರೀ ಶಾಂತವೀರ ಶಿವಾಚಾರ್ಯರು ಹೇಳಿದ ಮಾತನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಕ್ರಿ. ಶ. ೧೯೧೫ರಲ್ಲಿ ಇವರು ಅಥಣಿಗೆ ಹೋಗುವರು. ಪೂಜ್ಯರಾದ ಶ್ರೀ ಮುರುಘೇಂದ್ರ ಸ್ವಾಮಿಗಳವರಲ್ಲಿ ಇರುವರು. ಅವರ ಅಪೇಕ್ಷೆಯಂತೆ ಅನೇಕ ದಿನ ಅಲ್ಲಿದ್ದು ಅನುಷ್ಠಾನ ಮಾಡುವರು. ಪೂಜಾನುಷ್ಠಾನದಲ್ಲಿ ಇವರಿಗಿದ್ದ ಪ್ರೇಮವನ್ನು ಪರವಶತೆಯನ್ನು ಕಂಡು ಶಿವಯೋಗಿಗಳವರು ಸಂತೋಷಿಸುವರು. ಆ ಸಂತಸದ ಸಂಕೇತವಾಗಿ ಶಿವಾಚಾರ್ಯರನ್ನು ಸನಿಹಕ್ಕೆ ಕರೆದು ಕುಳ್ಳಿರಿಸಿಕೊಂಡು ಕೃಪಾದೃಷ್ಟಿಯಿಂದ ನೋಡುವರು; ಮಸ್ತಕದ ಮೇಲೆ ತಮ್ಮ ಅಮೃತ ಹಸ್ತ ವನ್ನಿಡುವರು. ಮನವಿಟ್ಟು ನೋಟ ನಟ್ಟು ಮಾಡಿದ ಪೂಜಾನುಷ್ಠಾನವನ್ನು ಮನಸಾರೆ ಮೆಚ್ಚಿ, ಹೀಗೆಯೆ ಲಿಂಗಾರ್ಚನೆಯನ್ನು ಮುಂದುವರಿಸಿದರೆ ನಿಮಗೆ ನಿಜಕ್ಕೂ ಶಿವನು ಮೆಚ್ಚುವನು; ಶಿವಾನುಗ್ರಹದಿಂದ ಮುಂದೆ ಮಹಾಪುರುಷರಾಗುವಿರೆಂದು ಹೃದಯಾರೆ ಹರಸುವರು. ಹಾಗೂ ತಾವು ಧರಿಸಿದ್ದ ದಿವ್ಯವಾದ ಒಂದು ಮುಖದ ರುದ್ರಾಕ್ಷಿಯನ್ನು ತೆಗೆದು ಇವರಿಗೆ ಆಶೀರ್ವದಿಸುವರು. ಇದರ ಧಾರಣದಿಂದ ಇವರಲ್ಲಿ ಒಂದು ಬಗೆಯ ಕಳೆ ಮೂಡಿ ಬರುವುದು; ಕೂಡಿ ಬರುವುದು. ಬಾಹ್ಯಾಂತರ

ದೃಷ್ಟಿದೀಪ್ತಿ ದಿವ್ಯವಾಗುವುದು. ಏಕಾಗ್ರತೆ ಅಂತಃಕರಣಗಳಲ್ಲಿ ಏಕೀಭವಿಸುವುದು. ಪ್ರಗತಿಗೆ ಪುಷ್ಟಿಯನ್ನೀಯುವುದು.

**ಪುರಾತನ ಪೂಜೆಗೆ ಸೇವೆ :**

ಕ್ರಿ. ಶ. ೧೯೧೬ರಲ್ಲಿ ಅದೇ ಅಥಣಿ ಮುರುಘೇಂದ್ರ ಶಿವಯೋಗಿಗಳು ತಮ್ಮ ಮಠದಲ್ಲಿ ಅರುವತ್ತು ಮೂವರು ಪುರಾತನರ ಮಂಟಪ ಪೂಜೆಯನ್ನು ಏರ್ಪಡಿಸಿದ್ದರು. ಅದಕ್ಕೆ ಗೋದಿ ಕಾಳು, ಕಾಸುಗಳ ಅಗತ್ಯವಿತ್ತು. ಮಹಾಗಣ ಸಂತೃಪ್ತಿಯಾಗ ಬೇಕಾಗಿದ್ದಿತು. ಇದರಿಂದ ಶಿವನಿಗೆ ಸಂತೋಷ. ಶಿವಲಿಂಗಕ್ಕೆ ಶಿವಗಣಗಳೆ ಮುಖ. ಶಿವಗಣಂಗಳ ಸಂತೃಪ್ತಿ ಸೇವೆಗಿಂತ ಶ್ರೇಷ್ಠವಾದ ಆರಾಧನವಿಲ್ಲ. ಇದು ನಿಮಗೆ ತಿಳಿದ ವಿಚಾರ; ಇದರಿಂದ ನೀವು ಮಾಡಿದ ಲಿಂಗಪೂಜಾನುಷ್ಠಾನ ಸಫಲವಾಗುತ್ತದೆ ; ಎಂದು ಮುಂತಾಗಿ ಬಬಲೇಶ್ವರದ ಶ್ರೀ ಶಾಂತವೀರ ಶಿವಾಚಾರ್ಯರಿಗೆ ಶಿವಯೋಗಿಗಳು ಹೇಳುವರು. ಅವರ ಅಂತರಂಗದ ಇಂಗಿತವನ್ನು ಇಷ್ಟರಿಂದಲೆ ತಿಳಿದು ತುಂಬು ಮನದಿಂದ ಅಂಗೀಕರಿಸುವರು. ಅಭಿವಂದಿಸಿ ಆಶೀರ್ವಾದ ಪಡೆದು ಊರಿಗೆ ಬರುವರು.

ಅತಾಲಟ್ಟಿ ಸಿದ್ಧನಗೌಡರನ್ನು ಕರೆಯಿಸುವರು. ವಿದ್ಯಮಾನವನ್ನು ಹೇಳುವರು. ಅವರ ಒಪ್ಪಿಗೆಯೊಡನೆ ಊರಲ್ಲಿ ಪಟ್ಟಿ ಮಾಡುವರು. ಒಟ್ಟು ಮೂವತ್ತು ಚೀಲ ಗೋದಿ, ಮೂರು ಸಾವಿರ ರೂಪಾಯಿಗಳು ಕೂಡುವವು. ಐದು, ಆರು ಎತ್ತಿನ ಗಾಡಿಗಳಲ್ಲಿ ಕಾಳನ್ನು ಕಳಿಸುವರು. ಬಡಚಿ ಎಂಬ ಹಳ್ಳಿಯ ಬಳಿಯಿರುವ ಹಳ್ಳ ತುಂಬಿ ಹರಿಯುತ್ತಿತ್ತು. ಹೆಚ್ಚಾದ ನೀರಿನ ಸೆಳವಿಗೆ ಕೊಚ್ಚಿ ಹೋಗುವ ಭಯದಿಂದ ದಾಟುವ ಧೈರ್ಯವಾಗದಾಯಿತು. ಹಳ್ಳದ ನೀರು ಇಳಿಯಲೆಂದು ಈಚೆಯ ತೀರದಲ್ಲಿಯೆ ನಿಂತುಕೊಳ್ಳುವರು.

ಅಷ್ಟರಲ್ಲಿ ಆಚೆಯ ದಡದಲ್ಲಿ ಒಬ್ಬ ದೀವಟಿಗೆಯವನು ಕಾಣಿಸಿಕೊಳ್ಳುವನು. ಆತನು ನೀರಲ್ಲಿ ಇಳಿದು ನಿರಾತಂಕವಾಗಿ ಬಂಡಿಯವರ ಬಳಿ ಬರುವನು. ಭಕ್ತರೆ, ಹಳ್ಳದ ನೀರು ಇಳಿದಿದೆ. ಸೆಳವಿಲ್ಲ. ನಾನೀಗ ನಿರಾಯಾಸವಾಗಿ ದಾಟಿ ಬಂದೆ. ನಿಮ್ಮ ಚಕ್ಕಡಿಗಳು ದಾಟುವಲ್ಲಿ ಯಾವ ಭಯವಿಲ್ಲ. ನಿಮ್ಮನ್ನು ಕರೆತರಲು ಅಥಣಿ ಶಿವಯೋಗಿಗಳು ನನ್ನನ್ನು ಕಳಿಸಿರುವರು. ಅವರ ಸನ್ನಿಧಿ ಸೇವಕನು ನಾನು. ನನ್ನ ಮಾತನ್ನು ನಂಬಿ ಹೊರಡಿರಿ; ಎಂದು ಹೇಳಿ ಹೊರಡಿಸುವನು.

ತಾನು ಮುಂದೆ ಮುಂದೆ ದಾರಿ ತೋರಿಸುತ್ತ ತನ್ನ ದೀವಟಿಗೆಯಿಂದ ಬೆಳಕನ್ನು ಬೀರುತ್ತ ತುಂಬಿದ ಬಂಡಿಗಳನ್ನು ಯಾವ ತೊಂದರೆಯಿಲ್ಲದೆ ತೀರಕ್ಕೆ ಮುಟ್ಟಿಸುವನು. ಎಲ್ಲರೂ ಜಯಘೋಷ ಮಾಡುವರು. ಇದು ಅರ್ಥವಿಲ್ಲದ ಸಾಂಪ್ರದಾಯಿಕ

ಘೋಷವಾಗಿರಲಿಲ್ಲ. ಸರಸ್ತರಣ ಸಂಕೇತವಾಗಿತ್ತು. ಹಳ್ಳವನ್ನು ದಾಟಿದ ಉಲ್ಲಾಸ ಉಕ್ಕುತ್ತಿತ್ತು ಆ ಘೋಷದಲ್ಲಿ. ಉತ್ಸಾಹ ಇಮ್ಮಡಿಯಾಗಿ ಮುಮ್ಮಡಿಯಾಗಿ ಹೊರಹೊಮ್ಮಿ ಅಥಣಿಯತ್ತ ಸಾಗಿದರು.

ಊರು ಸಮೀಪಿಸುವುದು. ಊರ ಮುಂದೆ ಒಂದು ಗವಿಮಠ. ಅದರ ಆವರಣದಲ್ಲಿ ಒಂದು ತೋಟ. ಅದರಲ್ಲಿ ಬಿಲ್ವಮರಗಳಿದ್ದವು. ಬಿಲ್ವದಳಗಳನ್ನು ನಿತ್ಯ ತಾವೇ ಒಯ್ಯುವ ವ್ರತ ಶಿವಯೋಗಿಗಳಿಗೆ. ಶಿವಯೋಗಿಗಳ ಪಾದಸ್ಪರ್ಶದಿಂದ ಪವಿತ್ರವಾದ ಆ ಪ್ರದೇಶವನ್ನು ನೋಡಿ ಧನ್ಯರಾಗಬೇಕೆಂದು ಗಾಡಿಗಳನ್ನು ದಾರಿಯಲ್ಲಿ ನಿಲ್ಲಿಸಿ ಅಲ್ಲಿಗೆ ಎಲ್ಲರೂ ಹೋಗುವರು. ಆ ಪ್ರಶಾಂತ ಸ್ಥಾನವನ್ನು ನೋಡಿ ನಲಿದಾಡುವರು. ಮರಳಿ ಬಂದು ಬಂಡಿಗಳನ್ನು ಹೊಡೆದುಕೊಂಡು ಹೊರಡುವರು. ಆದರೆ ಬಂಡಿ ಕಾವಲಿದ್ದ ದೀವಟಿಗೆಯವನೆ ಇರಲಿಲ್ಲ.

ಹುಡುಕಿದರೂ ಸಿಕ್ಕಲಿಲ್ಲ. ಏನಾದನೋ ಎಂದು ಎಲ್ಲರಿಗೆ ಅಳಲೂ ಆಯಿತು, ಅಚ್ಚರಿಯೂ ಆಯಿತು. ಮಠದ ಮನುಷ್ಯ ಮಠಕ್ಕೆ ಹೋಗಿರಬಹುದೆಂದು ಬಗೆದು, ಕಳಿಸಿದ ಶಿವಯೋಗಿಗಳ ಕಾರುಣ್ಯದೃಷ್ಟಿಗೆ ಮನದಂದು, ಮುಂದುವರಿದು ಊರೊಳಗಿನ ಗಚ್ಚಿನ ಮಠಕ್ಕೆ ಬರುವರು. ಅಲ್ಲಿರುವ ಶ್ರೀ ಮುರುಘೇಂದ್ರ ಶಿವಯೋಗಿಗಳ ದರ್ಶನ ಪಡೆದು ಬಬಲೇಶ್ವರ ಶ್ರೀ ಶಾಂತವೀರ ಶಿವಾಚಾರ್ಯರು ೩೦ ಚೀಲ ಗೋದಿ ಕಳಿಸಿರುವರೆಂದು ಬಿನ್ನವಿಸಿಕೊಳ್ಳುವರು. ತಂದು ಗೋದಿಯನ್ನು ಶಿವಯೋಗಿಗಳ ಶ್ರೀಚರಣಕ್ಕೆ ಒಪ್ಪಿಸುವರು. ಶಿವಯೋಗಿಗಳ ಶಿವಪ್ರಸಾದವನ್ನು ಆರೋಗಿಸಿ ಧನ್ಯರಾಗುವರು.

ಮರುದಿನ ಶ್ರೀ ಶಾಂತವೀರ ಶಿವಾಚಾರ್ಯರು ಅತಾಲಟ್ಟಿ ಶ್ರೀ ಸಿದ್ಧನಗೌಡರು ಮತ್ತು ಬೇರೆ ಹಲವು ಜನ ಸದ್ಭಕ್ತರು ಬರುವರು. ಮಂಟಪ ಪೂಜೆಗಾಗಿ ತಾವು ಕೂಡಿಸಿದ ಮೂರು ಸಾವಿರ ರೂಪಾಯಿಗಳನ್ನು ಶಿವಾಚಾರ್ಯರು ಶಿವಯೋಗಿಗಳಿಗೆ ಸಮರ್ಪಿಸುವರು. ಇಷ್ಟೊಂದು ಹಣವನ್ನು ಧಾನ್ಯವನ್ನು ಇಷ್ಟು ಬೇಗ ಸಂಗ್ರಹಿಸಿ ತಂದುದಕ್ಕೆ ಅವರಿಗೆ ತುಂಬಾ ಆನಂದವಾಗುವುದು. ಮತ್ತು ಶಿವಾಚಾರ್ಯರ ಜನಾನುರಾಗ ಶಕ್ತಿಯನ್ನು ಭಾವಿಸುವರು; ಬಣ್ಣಿಸುವರು. ಪುರಾತನರು ನಿಮಗೆ ಇನ್ನು ಹೆಚ್ಚಿನ ಆಯು ಶ್ರೇಯಗಳನ್ನೀಯಲೆಂದು ಮನದಂದು ಹರಸುವರು.

ಹೀಗೆ ಶಿವಯೋಗಿಗಳ ಘನಕೃಪೆಗೆ ಪಾತ್ರರಾದ ಶಿವಾಚಾರ್ಯರು ಅಲ್ಲಿ ವೈಭವದಿಂದ ನಡೆದ ಮಂಟಪ ಪೂಜೆಯನ್ನು ಪೂರೈಸಿಕೊಂಡು ಊರಿಗೆ ಬರುವರು. ಆ ಸಮಾರಂಭಕ್ಕೆಲ್ಲ ತಾವು ತಂದ ಗೋದಿಯು ವಿನಿಯೋಗವಾದುದನ್ನು ಮತ್ತು ವೆಚ್ಚಕ್ಕೆ ಹಣ ನೆರವಾದುದನ್ನು ನೆನೆದು ಕೃತಾರ್ಥರಾದೆವೆಂದು ಭಾವಿಸುವರು. ಅಥಣಿ ಶಿವಯೋಗಿಗಳು ಮಂಟಪ ಪೂಜೆಗೆ ಬಂದ ಭಕ್ತರ ಮುಂದೆ ಬಬಲೇಶ್ವರ ಶಿವಾಚಾರ್ಯರನ್ನು ಭಕ್ತರನ್ನು ಬಗೆದುಂಬಿ ಬಣ್ಣಿಸಿದರು. ಇದರಿಂದ ಬಬಲೇಶ್ವರದ ಬೆಳಕು ಹೆಚ್ಚುವುದು.

# ೫. ಹಿರಿಯ ಮಠದಿಂದ ಹರಳೇಶ್ವರ ಕ್ಷೇತ್ರಕ್ಕೆ !

ಶಿವಾಚಾರ್ಯರು ಪಟ್ಟಕ್ಕೆ ಬಂದಾಗಿದೆ ಒಂದು ಪಟ್ಟ. ಅಂದರೆ ಹನ್ನೆರಡು ವರುಷಗಳಾಗಿವೆ. ಹದಿಮೂರನೆಯ ವರುಷದಲ್ಲಿ ಹೆಜ್ಜೆ ಹಾಕಿದ್ದಾರೆ. ಅವರ ವಯಸ್ಸು ಕೇವಲ ಮೂವತ್ತು. ಈ ವಯಸ್ಸಿನಲ್ಲಿ ತಮಗೂ ಮಠಕ್ಕೂ ಊರಿಗೂ ಕೀರ್ತಿ ಬರುವ ಕೆಲಸಗಳನ್ನೆ ಮಾಡುವರು. ವಿದ್ಯಾರ್ಜನೆಯನ್ನು ಮಾಡುವರು. ಅಷ್ಟಕಗಳನ್ನು ರಚಿಸುವರು. ಅಥಣಿ ಶಿವಯೋಗಿಗಳ ಅನುಗ್ರಹಕ್ಕೆ ಪಾತ್ರರಾಗುವರು.

ಹೆಸರಿಗೆ ತಕ್ಕ ಹಿರಿದಾದ ಮಠ. ಗಾತ್ರದಲ್ಲಿ ಮಾತ್ರವಲ್ಲ ಪಾತ್ರದಲ್ಲಿಯೂ ಹಿರಿಯದು. ಹಿಂದೆ ಆಗಿಹೋದ ಮಠಾಧೀಶ್ವರರಂತೆ ಇಂದಿನವರೂ ಗಾಂಭೀರ್ಯದಲ್ಲಿ ಗೌರ ಜೀವನದಲ್ಲಿ ಘನವಂತರು. ಶಿವಾಚಾರದಲ್ಲಿ ಶಿವಯೋಗದಲ್ಲಿ ಶಿಷ್ಯೋದ್ಧಾರದಲ್ಲಿ ಸದಾ ನಿರತರು. ಹೀಗಿದ್ದೂ ಕ್ರಿ. ಶ. ೧೯೧೮ರಲ್ಲಿ ವಿಷಮ ವಾತಾವರಣ ತಲೆದೋರಿತಂತೆ! ಹಾಲಲ್ಲಿ ನಂಜು ಹುಟ್ಟಿದಂತೆ ಹುಟ್ಟಿತಂತೆ ! ಏಕೆ ಹುಟ್ಟಿತೆಂಬುದನ್ನು ಹೇಳುವುದಿಲ್ಲ; ಯಾರಾರಲ್ಲಿ ಹುಟ್ಟಿತೆಂಬುದನ್ನು ತಿಳಿಸುವುದಿಲ್ಲ. ಗುರು–ಶಿಷ್ಯರಲ್ಲಿಯೆ ಇರಬೇಕು. ಇದರಿಂದ ಶಿವಾಚಾರ್ಯರ ಮನಸ್ಸು ಸಮಾಧಾನಗೊಳ್ಳುವುದಿಲ್ಲ. ಶಾಂತಿಪ್ರಿಯರಾದ ಅವರಿಗೆ ಹೇಗೆ ಒಗ್ಗೀತು ? ಮಠವು ಅವರಿಗೆ ಒಂದು ಕಾರಾಗೃಹದಂತೆ ಕಾಣಿಸಿತಂತೆ ! ಲೌಕಿಕರ ಕಾಕು ನುಡಿಗಳನ್ನು ಕೇಳದಾದರು. ಮಠ ಮಾನ್ಯಗಳು ಬೇಡಾದವು. ಆಡಂಬರದ ಹಂಗಿನ ಜೀವನ ಬೇಡವಾಯಿತು. ಯಾವಾಗಲೂ ಏಕಾಂತದಲ್ಲಿದ್ದು ಲಿಂಗ ಪೂಜಾನಂದದಲ್ಲಿ ಕಾಲ ಕಳೆಯಬೇಕೆಂದೆನಿಸಿತು. ಸ್ವಾನುಭಾವದ ಸದ್ಗ್ರಂಥಗಳ ವ್ಯಾಸಂಗದಲ್ಲಿರಬೇಕೆಂದೆನಿಸಿತು. ನಿವೃತ್ತಿಗೊಲಿದ ಅವರಿಗೆ ಈ ಪ್ರವೃತ್ತಿ ಪಥ ಸಾಕೆನಿಸಿತು. ವಿರತಿ ಭಾವ ಸ್ಫುರಣಗೊಂಡಿದೆ. ಮಠದ ಸಿರಿಸಂಪತ್ತನ್ನು ವೈಭವ ವಿಲಾಸವನ್ನು ತ್ಯಜಿಸಲು ಸ್ಫೂರ್ತಿಯನ್ನಿತ್ತಿದೆ. ಮನಸ್ಸು ಬುದ್ಧಿ ಭಾವಗಳು ಅದೇ ಚಿಂತೆಯಲ್ಲಿ ಮುಳುಗಿವೆ. ಅಂತಹ ಸುಸಮಯವನ್ನೇ ಕಾಯ್ದಿವೆ.

ನಟ್ಟಿರುಳು; ಎಲ್ಲೆಲ್ಲು ನೀರವ. ಪ್ರಶಾಂತ ವಾತಾವರಣ. ಊರೆಲ್ಲ ಮಲಗಿ ನಿದ್ದೆ ಹೋಗಿದೆ. ಶಿವಾಚಾರ್ಯರಿಗೆ ಮಾತ್ರ ನಿದ್ದೆಯಿಲ್ಲ; ನಿಲುಗಡೆಯಿಲ್ಲ. ಹಗಲು ನಿರ್ಧರಿಸಿದಂತೆ ಹರಳೇಶ್ವರ ಕ್ಷೇತ್ರಕ್ಕೆ ಹೊರಡುವ ಸನ್ನಾಹ. ತಮ್ಮ ಲಿಂಗ ಪೂಜೆಗೆ ಮಾತ್ರ ಬೇಕಾದುದನ್ನು ತೆಗೆದುಕೊಂಡಿದ್ದಾರೆ. ಮಠದ ಸ್ವತ್ತಿನಲ್ಲಿ ಒಂದು ಬಿಡಿಗಾಸನ್ನೂ ಮುಟ್ಟಿದವರಲ್ಲ. ತಾವೊಬ್ಬರೆ ಆ ಮಧ್ಯರಾತ್ರಿಯಲ್ಲಿ ಚರಣಚಾರಿಗಳಾಗಿ ಹೊರಟಿದ್ದಾರೆ. ಬುದ್ಧನಿಗಿರುವ ರಥ ಸಾರಥಿಯರ ನೆರವೂ

ಇವರಿಗಿಲ್ಲ. ತಾವಾಯ್ತು, ತಮ್ಮ ಎದೆಯ ಮೇಲಿರುವ ಲಿಂಗಯ್ಯನಾಯ್ತು. ವಿಭೂತಿ, ರುದ್ರಾಕ್ಷಿ, ಯೋಗದಂಡಗಳೆ ಇವರ ರಕ್ಷೆಗಳು. ನಿರ್ಭೀತಿ ವಿರತಿಗಳೆ ಆಶ್ರಯಗಳು.

ಮಠದಲ್ಲಿರುವ ಸೇವಕರಿಗೂ ಸಹ ಹೇಳದೆ ಜೊತೆಗೆ ಕರೆದುಕೊಳ್ಳದೆ ಹೊರಟಿದ್ದಾರೆ. ಮಠದ ಮಮತೆ ಮನಸ್ಸಿನಲ್ಲಿ ಮುಳ್ಳು ಮೊನೆಯನಿತೂ ಇಲ್ಲ. ವಿಷಜಂತುಗಳ ಕಳ್ಳಕಾಕರ ನಿಶೀಥದ ಭಯ ಮುನ್ನಿಲ್ಲ. ಬೇಡೆನಿಸಿದ ಮಠ ಹಿರಿಯದಾದರೇನು; ಹರನದಾದರೇನು ? ಘನವಾದ ಗುರಿಗೊಲಿದ ಬಳಿಕ ಸಿರಿಯಿದ್ದರೇನು; ಕರಿಯಿದ್ದ ರೇನು ? ಹಿರಿದಪ್ಪ ರಾಜ್ಯವಿದ್ದರೇನು ? ಶಿವಾಚಾರ್ಯರು ಯಾವುದನ್ನೂ ಮನಸ್ಸಿಗೆ ತಂದುಕೊಳ್ಳಲಿಲ್ಲ; ಮಮಂಕರಿಸಲಿಲ್ಲ. ದಿಟ್ಟತನದಿಂದ ಮುಂದಿಟ್ಟ ಹೆಜ್ಜೆಯನ್ನು ಹಿಂದಕ್ಕೆ ತೆಗೆದುಕೊಳ್ಳಲಿಲ್ಲ. ಮನವನ್ನು ಮಾರ್ಪುಗೊಳಿಸಲಿಲ್ಲ. ಮಹೋತ್ಸಾಹದಿಂದ ಮುಂದೆ ಮುಂದೆ ಸಾಗಿದರು.

ಯಾವ ಭಯವಿಲ್ಲದೆ ಇರುಳೆಲ್ಲ ಅಡವಿ ಮಾರ್ಗವಾಗಿ ನಡೆದರು. ಬೆಳ್ಳು ಬೆಳಗಾಯಿತು. ಪ್ರಶಾಂತಸ್ಥಲವಾದ ಹರಳೇಶ್ವರ ಕ್ಷೇತ್ರಕ್ಕೆ ಹುಣ್ಣಿಮೆಯ ಚಂದ್ರ ಬಂದಂತೆ ಬಂದರು. ಕ್ಷೇತ್ರಕ್ಕೆ ಕ್ಷೇತ್ರಜ್ಞ ಬಂದಂತೆ ಬಂದರು. ಅಂಗಕ್ಕೆ ಲಿಂಗ ಬಂದಂತೆ ಬಂದರು. ಜಡ ಚೇತನಗೊಂಡಿತು. ಹರಳಯ್ಯ ಶರಣನಿಲ್ಲದೆ ಅನಂತ ಕಾಲದಿಂದ ಅನಾಥವಾದ ಕ್ಷೇತ್ರ ಮತ್ತಿಂದು ಸನಾಥವಾಯಿತು. ಗುರು ಚೇತನ ಗೊಂಡಿತು. ಶಾಂತ ಶಕ್ತಿ ಸಂಪನ್ನ ಗುರುವಿನಾಗಮನ, ಶುದ್ಧ ಸತ್ವ ಮನದ ವೀರ ಶಿವಾಚಾರ್ಯನಾಗಮನ. ಜೀವನದಲ್ಲಿ ಶಾಂತತೆಗಿರುವಷ್ಟು ಶ್ರೇಷ್ಠತೆ ಮತ್ತಾವುದಕ್ಕಿದೆ ? ಪ್ರಶಾಂತ ಕ್ಷೇತ್ರದಲ್ಲಿ ಶಾಂತವೀರರು ಆಗಮಿಸಿ ನೆಲೆನಿಂತುದು ಲಾಭಕ್ಕೆ ಲಾಭವೊದಗಿದಂತೆ ಶುಭಕ್ಕೆ ಶುಭವೊದಗಿದಂತೆ ಆಗಿದೆ.

ಕ್ಷೇತ್ರಕ್ಕೂ ಕ್ಷೇತ್ರಜ್ಞನಿಗೂ ಸರಿಯಾದ ನಂಟು. ಜಡಕ್ಷೇತ್ರಕ್ಕೆ ಜೀವಂತ ಕ್ಷೇತ್ರ ಬಂದೊದಗಿದರೆ ಕೇಳಬೇಕೆ ? ಕ್ಷೇತ್ರಕ್ಕೆ ಪವಿತ್ರ ಚೇತನದ ಅವತರಣವಾಯಿತು. ಜೀವಂತ ಜ್ಯೋತಿಯ ಅವತರಣವಾಯಿತು. ಕ್ಷೇತ್ರದ ಅಣು ಅಣುವಿಗೂ ಸಚ್ಚಿತ್ಕಳೆ ಸಮನಿಸಿತು. ಹೊಳಪಿನ ಹೊಚ್ಚ ಹೊಸತನವನ್ನು ಹರಳಯ್ಯ ಕ್ಷೇತ್ರ ಹೆತ್ತಿತು. ಜಡ-ಜಂಗಮ ಸಂಗಮವಾಯಿತು. ಶಾಂತವೀರ ಶಿವಾಚಾರ್ಯರೆಂಬ ಚಿತ್ಕಳೆಯ ಕಿರಣ ಚರಣಗಳು ಕ್ಷೇತ್ರದ ಮಣ್ಣಿನ ಅಣು ಅಣುವಿನಲ್ಲಿ ಅವತರಣ ಗೊಳ್ಳುವವು. ಅಣು ಮಹತ್ತಾಗುವ ಮುಹೂರ್ತ ಮೂಡಿತು. ಅಂದಿನ ಆ ಹಳೆಯ ಶಕ್ತಿ ಮತ್ತಿಂದು ಹೊಸ ಅಭಿವ್ಯಕ್ತಿಯನ್ನು ತಳೆಯಿತು; ಶಿವಾಚಾರ್ಯ ಸತ್ತೆಯನ್ನು ತಳೆಯಿತು.

ಶಾಂತಮೂರ್ತಿ ಶಾಂತವೀರ ಶಿವಾಚಾರ್ಯ ಮಹಾಸ್ವಾಮಿ, ಶಾಂತಿಗಾಗಿ ಮನೆಯನ್ನು ಬಿಟ್ಟು ಮಠವನ್ನು ಅವಲಂಬಿಸಿದ. ಅಲ್ಲಿಯೂ ತನ್ನ ಶಾಂತಿಗೆ ಚ್ಯುತಿ ಬಂದಾಗ ಅದನ್ನೂ ಬಿಟ್ಟ. ನಿರ್ಜನ ವನವಾಸವನ್ನು ತೊಟ್ಟ. ನೀರವ ಪ್ರದೇಶದಲ್ಲಿ ನಿರ್ಮಲ ಮನವನ್ನಿಟ್ಟ. ಶಾಂತಿ ಸಾಧನ ಕ್ಷೇತ್ರವನ್ನಾಗಿಸಿಕೊಂಡ.

ದಾಂತಿ ಸಾಧನ ಧಾಮುವನ್ನಾಗಿಸಿಕೊಂಡ. ನಿರ್ಜನತೆ ನೀರವತೆ ಕ್ಷೇತ್ರಸತ್ವ; ನೈರ್ಮಲ್ಯ ನೈಜಾನುಸಂಧಾನ ಲೌಲ್ಯ ಪಾತ್ರಸತ್ವ. ಅದರ ಏಕಾಂತವನ್ನು ತಾನು ಅನಂಭವಿಸಿದ; ತನ್ನ ತಪಸ್ತೇಜಸ್ಸನ್ನು ಅದಕ್ಕೆ ಅನುಬಂಧಿಸಿದ. ನಿಷ್ಕಂಟಕವಾಗಿ ನಿತ್ಯಾನುಷ್ಠಾನದಲ್ಲಿ ನಿರತರಾಗಿರತೊಡಗಿದರು.

ಇವರ ಹೆಸರು ಸುತ್ತ್ಮ ಮುತ್ತ್ಮ ಇರುವ ಊರುಗಳಲ್ಲಿ ಹಬ್ಬುವುದು. ಸಾರವಾಡ, ಸಂಗಾಪುರ, ಹಲಗಣಿ, ಕಾಖಂಡಕಿ, ಶೇಗುಣಶಿ ಊರುಗಳ ಭಕ್ತರು ಬಂದು ಶಿವಾಚಾರ್ಯರ ಸಂದರ್ಶನ ಶುಭಾಶೀರ್ವಾದಗಳನ್ನು ಪಡೆಯುವರು; ಪಾವನರಾಗುವರು. ನಿತ್ಯ ಶಿವಪೂಜೆ, ಶಿವಧ್ಯಾನಾದಿ ಶಿವಯೋಗದಲ್ಲಿ ತಲ್ಲೀನತೆಯನ್ನು ಸ್ವಯಂಸುಖಿಗಳಾಗಿದ್ದರು. ಹೀಗೆ ಸುಮಾರು ಆರು ತಿಂಗಳ ಕಾಲ ಕಳೆಯುವುದು. ಕಾಲ ಗೊತ್ತೇ ಆಗಲಿಲ್ಲ. ಆರು ದಿನ ಕಳೆದಂತೆ ಕಳೆದರು.

ಬಬಲೇಶ್ವರ ಭಕ್ತರ ಬವಣೆ ಹೇಳತೀರದು. ತಾಯಿಯನ್ನು ಕಳೆದುಕೊಂಡ ತಬ್ಬಲಿ ಮಕ್ಕಳಂತಾಗಿದ್ದರು. ಗುರುವಿಲ್ಲದ ಮಠ ನೋಡಲಿಕ್ಕಾಗದು. ತಮ್ಮ ಕಷ್ಟ ಸುಖಗಳನ್ನು ಕೇಳುವವರೇ ಇರಲಿಲ್ಲ. ಕೇಳಿ ಕರುಣಿಸುವ ಗುರುದೇವನೆ ಇರಲಿಲ್ಲ. ಇದ್ದಾಗ ಆ ಮಹಾ ವ್ಯಕ್ತಿ ಶಕ್ತಿ ಜನರಿಗೆ ಗೊತ್ತಾಗಿರಲಿಲ್ಲ. ಇದೀಗ ಗೊತ್ತಾಗತೊಡಗಿದೆ. ಬಲ್ಲಿದ ಬಡವನಾದಂತೆ ಬಳಲ ತೊಡಗಿದರು. ತೊಳಲ ತೊಡಗಿದರು. ದುಮ್ಮಾನ ದಿಮ್ಮಿತ್ತಾಗುತ್ತ ಬಂದಿತು. ದಿನಗಳೆವುದು ದುರ್ಧರ ವಾಯಿತು.

ಹಲವರು ಹಿರಿಯರು ಸೇರಿ ಹೇಗಾದರೂ ಮಾಡಿ ಹೋಗಿ ಕರೆದುಕೊಂಡೇ ಬರಬೇಕೆಂದು ತರಿಸಂದು ಆಶ್ರಮಕ್ಕೆ ಬರುವರು. ತುಂಬಾ ಭಯ ಭಕ್ತಿಯಿಂದ ಸನ್ನಿಧಿಯ ಸನಿಹಕ್ಕೆ ಬರುವರು. ಬಂದು ಕೈಮುಗಿದು ಕಣ್ಣೀರ್ಗರೆವರು. ಓ ತಂದೆ, ಮಕ್ಕಳಾದ ನಮ್ಮ ತಪ್ಪುಗಳಿಗೆ ಲೆಕ್ಕವಿಲ್ಲ. ಮಕ್ಕಳಿಗೆ ತಪ್ಪೇನು, ಒಪ್ಪೇನು ? ತಮ್ಮ ಸೈರಣೆ, ಕರುಣೆ ಅಪಾರ. ಅಂತಹ ಮಠವನ್ನೂ ನಮ್ಮನ್ನೂ ಒಂದೇ ಮನಸ್ಸಿನಿಂದ ತ್ಯಾಗ ಮಾಡಿ ಇಲ್ಲಿಗೆ ಆಗಮಿಸಿ ಯೋಗದಲ್ಲಿ ಇರುವಿರಿ. ಭೋಗಿಗಳಾದ ನಮ್ಮ ಗತಿಯೇನು ? ಭವದಲ್ಲಿ ಬಿದ್ದು ಒದ್ದಾಡುತ್ತಿದ್ದೇವೆ. ಎತ್ತಿ ಕಾಪಾಡುವವ ರಿಲ್ಲದೆ ಒರಲುತ್ತಿದ್ದೇವೆ. ಒಂದಿನಿತೂ ಮನಕ್ಕೆ ನೆಮ್ಮದಿಯಿಲ್ಲ.

ಗುರು ಮುನಿದರೆ ಹರ ಕಾಯನೆಂಬ ನಾಣ್ಣುಡಿ ನಿಜಕ್ಕೂ ದಿಟವಾಗಿದೆ. ನಮ್ಮೆಲ್ಲರ ಅನುಭವಕ್ಕೆ ಬಂದಿದೆ. ನಮ್ಮನ್ನು ಕೇಳುವವರೇ ಇಲ್ಲವಾಗಿದೆ. ತಾವು ಅಲ್ಲಿಗೆ ಬಾರದಿದ್ದರೆ ನಾವು ಬದುಕುವಂತಿಲ್ಲ; ಬಾಳುವಂತಿಲ್ಲ. ಬಗೆಗೆ ನೆಮ್ಮದಿ ಮೊದಲೇ ಇಲ್ಲ. ದಯಾಂತಃಕರಣಿಗಳಾದ ತಾವೇ ನಮ್ಮನ್ನು ದೂರ ಮಾಡಿದರೆ ನಮ್ಮ ಗತಿಯೇನು ? ನಮಗೆ ದಾರಿ ತೋರುವವರಾರು ? ನಮ್ಮನ್ನು ಕ್ಷಮಿಸಿ

ಬಬಲೇಶ್ವರಕ್ಕೆ ಬಿಜಯಂಗೈಯಬೇಕು. ನಾವೆಲ್ಲ ತ್ರಿಕರಣಪೂರ್ವಕವಾಗಿ ತಮ್ಮ ಸೇವೆ ಸಲ್ಲಿಸುತ್ತೇವೆ. ತಮಗೆ ಎದುರಾಗಿ ಎಂದಿಗೂ ಹೋಗುವವರಲ್ಲ. ತಮ್ಮನ್ನು ಬಿಟ್ಟು ನಾವು ಊರಿಗೆ ಹೋಗಲಾರೆವು. ಕೊಲ್ಲು ಕಾಯಿ ನಿಮ್ಮ ಧರ್ಮ. ಎಂದು ಕರುಣರಸ ಕೋಡಿಯಾಗಿ ಹರಿವಂತೆ ಬೇಡಿಕೊಳ್ಳುವರು. ಬಂದವರ ಭಾವ ಪರಿವರ್ತನವನ್ನು ಅರಿತ ಆಚಾರ್ಯರು ಅನಿವಾರ್ಯವಾಗಿ ಅಂತಃಕರಣದಿಂದ ಒಪ್ಪಿಕೊಳ್ಳುವರು.

ಗುರುವರ್ಯರು ಮರಳಿ ಬಬಲೇಶ್ವರಕ್ಕೆ ಬಿಜಯಂಗೈಯುವರೆಂಬ ಸುದ್ದಿ ಸುತ್ತಲೂ ಹಬ್ಬುವುದು. ಅಂತೆಯೇ ಶೇಗುಣಸಿ ಭೀಮನಗೌಡರಿಗೂ ತಿಳಿಯುವುದು. ತುಂಬಾ ನೋಯುವರು. ಕಳೆದ ಆರು ತಿಂಗಳ ಕಾಲ ತುಂಬಾ ಭಕ್ತಿಯಿಂದ ಸೇವೆ ಸಲ್ಲಿಸಿದ್ದರು. ಬೇಕಾದ ಸೌಕರ್ಯಗಳನ್ನೆಲ್ಲ ಮಾಡಿಕೊಟ್ಟಿದ್ದರು. ಗುರುಗಳಲ್ಲಿ ಅಪಾರ ಭಕ್ತಿಯುಳ್ಳವರಾಗಿದ್ದರು. ನಿತ್ಯದರ್ಶನ ಪಡೆಯದೆ ಸೇವೆ ಸಲ್ಲಿಸದೆ ಇರುತ್ತಿರಲಿಲ್ಲ. ಪರಮ ಪಾವನಮೂರ್ತಿ ಗುರುದೇವರ ಪ್ರಭಾವಕ್ಕೆ ಒಗುಮಿಗೆಯಾಗಿ ಒಳಗಾಗಿದ್ದರು.

ತಮ್ಮ ಭಾಗ್ಯದೇವರು ಬಬಲೇಶ್ವರಕ್ಕೆ ದಯಮಾಡುವುದನ್ನು ಸಹಿಸದಾದರು. ಆಗಲೇ ಇದ್ದಬಿದ್ದ ಕೆಲಸಗಳನ್ನೆಲ್ಲ ಕೈಬಿಟ್ಟು ವೇಗ ಆವೇಗಗಳಿಂದ ಆಶ್ರಮಕ್ಕೆ ಬರುವರು. ಒಳಕ್ಕೆ ನುಗ್ಗುವರು. ಶಿವಾಚಾರ್ಯರನ್ನು ಏಕಾಂತದಲ್ಲಿ ದರ್ಶನ ಪಡೆವರು. ತುಂಬಿದ ಎದೆಯಿಂದ ತಲೆಬಾಗುವರು. ತಮಗಾದ ತೊಳಲನ್ನು ತೋಡಿಕೊಳ್ಳುವರು. ತಾವು ತೆರಳಕೂಡದು. ನಮ್ಮನ್ನು ಆಶ್ರಮವನ್ನು ಅನಾಥರನ್ನಾಗಿಸಬಾರದು. ತಮ್ಮ ಸೇವೆಗೆ ಈ ಶಿಷ್ಯನು ಸದಾಕಾಲ ಸಿದ್ಧ. ಎಂದು ಪರಿಪರಿಯಾಗಿ ಪ್ರಾರ್ಥಿಸುತ್ತ ಪ್ರಾರ್ಥಿಸಿಕೊಳ್ಳುವರು.

ಆತ್ಮೀಯ ಗೌಡರೆ, ನೀವೇನೂ ಯೋಚಿಸಬೇಡಿರಿ. ನಿಮ್ಮ ಸೇವೆಯ ನೆನಹು ನಮಗಿದೆ. ನೀವು ನೆರವೀಯದಿದ್ದರೆ ನಾವಿಲ್ಲಿರಲು ನಿಜಕ್ಕೂ ಆಗುತ್ತಿರಲಿಲ್ಲ. ನಿಮ್ಮ ತ್ಯಾಗಪೂರ್ಣವಾದ ಸೇವೆಗೆ ಸತ್ಯಸಂಕಲ್ಪಕ್ಕೆ ಎಂದಿಗೂ ಚ್ಯುತಿಯಿಲ್ಲ. ಮುಂದಕ್ಕೂ ಫಲಿಸುವುದರಲ್ಲಿ ಸಂದೇಹವಿರದು. ಬಂದವರನ್ನು ಸಮಾಧಾನ ಪಡಿಸುವುದು ನಮ್ಮ ಧರ್ಮ. ಆಗಲೇ ಅವರಿಗೆ ಮಾತು ಕೊಟ್ಟಾಗಿದೆ. ತಪ್ಪುವುದು ಸರಿಯಲ್ಲ ತಾನೆ? ಸದ್ಯಕ್ಕೆ ನೀವು ಸಂತೋಷದಿಂದ ಅಲ್ಲಿಗೆ ದಯಮಾಡಲು ಒಪ್ಪಿಕೊಳ್ಳಿರಿ. ನಿಮ್ಮ ಸಂತಸವೆ ನಮ್ಮ ಸಂತಸ. ನೀವು ಹರುಷದಿಂದ ಕಳುಹಿದರೆ ಎಲ್ಲವೂ ಲೇಸಾಗುವುದು. ಅಲ್ಲಿದ್ದರೂ ನಿಮಗೆ ಬೇರಲ್ಲ. ನಮ್ಮ ಮನಸ್ಸಿಗೂ ಇಲ್ಲಿನ ಪ್ರಶಾಂತ ವಾತಾವರಣ ತುಂಬಾ ಹಿಡಿಸಿದೆ. ಬಿಟ್ಟು ಹೋಗಲು ಮನಸ್ಸಿಲ್ಲ; ಭಕ್ತರ ಬೇಡಿಕೆಯನ್ನು ನಿರಾಕರಿಸುವಂತಿಲ್ಲ. ಎಲ್ಲವೂ ಆತನಿಚ್ಛೆ. ಆತ ನಡಿಸಿದಂತೆ ನಡೆಯಬೇಕಲ್ಲವೆ? ನೀವೂ ವಿಚಾರಪರರು, ವಿಶಾಲ ಹೃದಯರು, ಎಂದು ಹೇಳಿ ಸಮಾಧಾನಗೊಳಿಸಿ ಸಮ್ಮತಿಯನ್ನು ಪಡೆಯುವರು.

ಭೀಮನಗೌಡರು ಉಳಿದ ಭಕ್ತರು ಸೇರಿ ಇಲ್ಲಿಯವರೆಗೆ ಶಿವಾಚಾರ್ಯರು ಇಲ್ಲಿ ನೆರವೇರಿಸಿದ ಶಿವಯೋಗಾನುಷ್ಠಾನದ ಸಮಾಪ್ತಿ ಗಣಾರಾಧನೆಯಾಗಬೇಕೆಂದು ಯೋಚಿಸುವರು. ಒಂದು ದಿನವನ್ನು ನಿರ್ದಿಷ್ಟಪಡಿಸುವರು. ಶಿವಾಚಾರ್ಯರು ಬಂದ ಬಬಲೇಶ್ವರ ಭಕ್ತರಿಗೆ ಗಣಾರಾಧನೆಯನ್ನು ಪೂರೈಸಿ ನಿಮ್ಮ ಬೇಡಿಕೆಯಂತೆ ನಿಮ್ಮಲ್ಲಿಗೆ ಬರುವೆವು; ಆದರೆ ನಮ್ಮ ಶಿವಯೋಗಾನುಷ್ಠಾನವು ಅಲ್ಲಿಯೂ ಮುಂದುವರಿಯಬೇಕು. ನಿಲ್ಲಿಸುವಂತಿಲ್ಲ. ಇದಕ್ಕೆ ತಕ್ಕ ಏಕಾಂತ ಸ್ಥಾನವೊಂದನ್ನು ನೀವು ಅಲ್ಲಿ ಮಾಡಿ ಕೊಡುವದಾಗಬೇಕೆಂದು ಹೇಳಿ ಕಳುಹಿಸುವರು.

ಇತ್ತ ಸಂಗಾಪುರ (ಜೈನಾಪುರ) ಭಕ್ತರು ಗಣಾರಾಧನೆಯ ಸಾಹಿತ್ಯ ಸಂಗ್ರಹ ನಿರತರಾದರು. ಶಕ್ತಿ ಮೀರಿ ಎಲ್ಲರೂ ಸಹಾಯ ಮಾಡುವರು. ನಿರೀಕ್ಷಣೆಗೀತ ಹೆಚ್ಚಾಗಿ ಪಡಿ ಪದಾರ್ಥವೊದಗುವುದು. ನಿರ್ದಿಷ್ಟ ದಿನವೂ ಬಂದಿತು. ಅದು ಬೇಸಿಗೆಯ ಕಾಲ. ನೀರಿನ ಕೊರತೆ. ಜನದಟ್ಟಣೆ ಮಿತಿ ಮೀರುವ ಲಕ್ಷಣ ತೋರಿ ಬಂತು. ನೀರಿಗಾಗಿ ಎಲ್ಲ ಹಳ್ಳಿಗಳಲ್ಲಿರುವ ಎತ್ತಿನ ಬಂಡಿಗಳನ್ನು ತರಿಸುವರು. ಆ ಆ ಊರುಗಳ ಬಾವಿಗಳಿಂದ ನೀರು ತರುವಂತೆ ಏರ್ಪಡಿಸುವರು. ಬಾಣಸಿಗರು ಬರುವರು. ಬಯಲಲ್ಲಿ ಒಲೆ ಹೂಡಿ ಅಡುಗೆ ಮಾಡುವರು.

ಅತ್ತ ಶಿವಾಚಾರ್ಯರ ಶಿವಯೋಗಾನುಷ್ಠಾನ. ಇತ್ತ ಸಾರ್ವಜನಿಕ ಪಾಕಸಿದ್ಧತೆ. ಪೂಜಾನುಷ್ಠಾನ ಪೂರೈಸುವುದು. ಶಿವಾಚಾರ್ಯರು ಪ್ರಸಾದಾರೋಗಣೆಯನ್ನು ಪೂರೈಸಿಕೊಂಡು ಶಿವಪೂಜಾ ಮಂದಿರದ ಮುಂದಿರುವ ಶಿವಾನುಭವ ಮಂಟಪದಲ್ಲಿ ಮಂಡಿಸಿದ್ದಾರೆ. ಇತ್ತ ಬಂದ ಜಂಗಮರು ಭಕ್ತಜನರು ಆರೋಗಣೆಗೆ ಸಾಲು ಸಾಲಾಗಿ ಕುಳಿತಿದ್ದಾರೆ. ನೂರಾರು ಜನ ತರುಣರು ಉಲ್ಲಾಸದಿಂದ ಓಡಾಡಿ ನೀಡತೊಡಗಿದ್ದಾರೆ. ಬಂದವರೆಲ್ಲ ಆನಂದದಿಂದ ಪ್ರಸಾದವನ್ನು ಸ್ವೀಕರಿಸುತ್ತಿದ್ದಾರೆ. ಒಂದೆರಡು ಪಂಕ್ತಿ ಮುಗಿದು ಮೂರನೆಯ ಪಂಕ್ತಿ ಮೊದಲಾಗುವುದು. ಆದರೆ ತಂದ ನೀರು ತೀರಿಹೋಗಿ ಹಾಹಾಕಾರ ಏಳುವುದು. ಹಲವು ಭಕ್ತರು ಬಂದು ಗುರುಗಳಲ್ಲಿ ಭಿನ್ನವಿಸಿ ಕೊಳ್ಳುವರು.

ಆಗ ಶಿವಾಚಾರ್ಯರು ಶಿವಧ್ಯಾನ ಮಾಡುತ್ತ ಹೊರಬಂದು ಬಳಿಯಿರುವ ನೀರಿಲ್ಲದ ಹಳ್ಳದಲ್ಲಿ ತಾವೇ ತಮ್ಮ ಹಸ್ತಗಳಿಂದ ನೆಲವನ್ನು ಬಗೆಯುವರು; ಶಿವಾನುಗ್ರಹದಿಂದ ನೀರು ಕಾಣಿಸುವುದು. ಇನ್ನಷ್ಟು ಆಳ ಮಾಡಿದರು. ಹೆಚ್ಚಾಗಿ ನೀರಿನ ಚಿಲುಮೆ ಚಿಮ್ಮುವುದು. ಒರತೆ ತುಂಬಿ ತುಳುಕುವುದು. ತುಸು ಹೊತ್ತಿನಲ್ಲಿ ಹೊರಸೂಸಿ ಹರಿವುದು. ಇದನ್ನು ನೋಡಿ ನೆರೆದವರಿಗೆಲ್ಲರಿಗೂ ಹಿಡಿಸಲಾರದ ಹರುಷ; ಹೊಗಳಲಾರದ ಹುಮ್ಮಸ.

ಯಾರು ತೋಡಿದರೂ ನೀರು ಬಾರದ ಹಳ್ಳದಲ್ಲಿ ಗುರುವರ್ಯರು ತಮ್ಮ ಅಮೃತ ಹಸ್ತದಿಂದ ತೋಡಿದೊಡನೆ ನೀರು ಬಂದಿತಲ್ಲಾ ಎಂದು ಬೆಕ್ಕಸಬೆರಗಾದರು. ಗುರು

ಮಹಿಮೆಯನ್ನು ಮನಸಾರೆ ಕೊಂಡಾಡಿದರು. ಆ ನೀರಿನಿಂದ ಗಣಾರಾಧನೆ ಸಾಂಗವಾಗಿ ಸಾಗಿ ಮುಗಿಯುವುದು. ಸಂತಸಗೊಂಡ ಸದ್ಭಕ್ತರು ಆ ನೀರಿನ ಗುಂಡದ ಸುತ್ತಲೂ ಗೋಡೆಯನ್ನು ಕಟ್ಟಿಸುವರು. ಆದಕ್ಕೆ ಶಿವಾಚಾರ್ಯರ ಅಪ್ಪಣೆ ಯಂತೆ "**ಶ್ರೀ ಕುಮಾರ ತೀರ್ಥ**" ಎಂದು ಹೆಸರನ್ನಿಡುವರು. ಇದನ್ನು ಈಗಲೂ ಅಲ್ಲಿ ಕಾಣಬಹುದು.

ಈಗಲೂ ಅದರಲ್ಲಿ ನೀರು ಕಡಿಮೆಯಾಗುವುದಿಲ್ಲ. ಕ್ರಿಯಾಸಿದ್ಧಿ ಚಿತ್ತ ಶುದ್ಧಿಯಿದ್ದರೆ ಯಾವ ಕೊರತೆ ಬಾರದು. ದೇವಾನುಗ್ರಹ ತಾನಾಗಿಯೇ ಒದಗುತ್ತದೆ. ಚಿತ್ತದ ಚಿಲುಮೆಯಲ್ಲಿ ಒಲುಮೆಯ ಗಂಗೆ ಹರಿದು ಬರುತ್ತದೆ. ಮೊದಲು ಗುರುದೇವನಲ್ಲಿ ಬಂದಿದೆ; ಬಳಿಕ ಭಕ್ತ ಸಮೂಹದಲ್ಲಿ ಬಂದಿದೆ. ಭಕ್ತರ ಮೇಲೆ ಗುರುಕರುಣೆ; ಗುರುದೇವನ ಮೇಲೆ ಭಕ್ತರ ಭಕ್ತಿರಸ ಚಿಲುಮೆಯ ನೀರಿನಂತೆ ಚಿಮ್ಮಿವೆ ಅಂತರಂಗದ ಗಂಗೆಯಾಗಿ! ಚಿಮ್ಮಿ ಹರಿದಿವೆ ಕ್ರಿಯಾಕಲಾಪ ತರಂಗವಾಗಿ!!

"ಬತ್ತಿರುವ ಹೊಂಡ ಬಸಿಯೊಡೆದು ತುಂಬೆ
ನಿರ್ಮ್ಮಲುಮ ಚಿಲುಮೆಯಿಂದ
ಮುತ್ತಿರುವ ಜನರ ತೃಷೆ ಹಿಂಗೆ ಹಾಡಿ
ಹರಸಿದರು ಭಕ್ತಿಯಿಂದ!"

ಶ್ರೀ ಶಂ. ಗು. ಬಿರಾದಾರ.

## ೬. ಹರಳೇಶ್ವರದಿಂದ ಬಬಲೇಶ್ವರಕ್ಕೆ !

ಹರಳೇಶ್ವರ ಕ್ಷೇತ್ರದಲ್ಲಿ ಅನುಷ್ಠಾನದ ಆರಾಧನೆ ಅತ್ಯಂತ ವೈಭವದಿಂದ ನಡೆದ ಸುದ್ದಿ ಬಬಲೇಶ್ವರದವರಿಗೆಲ್ಲ ತಿಳಿದು ಬರುತ್ತದೆ. ಇದನ್ನೆ ಕಾಯ್ದಿದ್ದ ಅವರಿಗೆ ಆದ ಆನಂದ ಅಷ್ಟಿಷ್ಟಲ್ಲ. ಮರುದಿನವೆ ಹಲವರು ಹೋಗಿ ಬಬಲೇಶ್ವರಕ್ಕೆ ಬರಲು ಬಿನ್ನವಿಸಿಕೊಳ್ಳುವರು. ಈ ಮೊದಲೆ ಒಪ್ಪಿಗೆಯನಿತ್ತಂತೆ ಶಿವಾಚಾರ್ಯರು ಬಿಜಯಂಗೈಯುವರು. ಊರಿನವರು ಆದರೋತ್ಸಾಹಗಳಿಂದ ಆಗಮಿಸಿಕೊಳ್ಳುವರು; ಆದರದಿಂದ ಕಾಣುವರು.

ಭಕ್ತರ ಪ್ರೇಮಕ್ಕಾಗಿ ಬಬಲೇಶ್ವರಕ್ಕೆ ಬರುವರು. ಆದರೆ ಅವರ ಸಂಸಾರ ವ್ಯವಹಾರಗಳಲ್ಲಿ ಇರಲು ಅವರಿಗಿಷ್ಟವಿಲ್ಲ. ಅಂತರ್ಮುಖಿಗಳಾಗಬೇಕು. ಶಿವಯೋಗ ಸಾಧನೆ ಸಾಗಬೇಕು. ಅದಕ್ಕೆ ತಕ್ಕ ಅನುಕೂಲವಾಗಬೇಕು, ಎಂಬುದೇ ಅವರ ಯೋಚನೆ. ಅದೇ ಮಾತಿನ ಮೇಲೆ ಅವರ ಆಗಮನ. ಅವರಿಗೆ ಮಠಮಾನ್ಯಗಳ ಹಂಗೂ ಇರಲಿಲ್ಲ. ಅವರು ಮಠದಲ್ಲಿ ಬಂದಿದ್ದರೂ ಮಠದ ಆಗುಹೋಗುಗಳಲ್ಲಿ ಸಿರಿಸಂಪದದಲ್ಲಿ ಮನವಿಟ್ಟಿರಲಿಲ್ಲ. ಮಠದ ವಾತಾವರಣದಲ್ಲಿಯೂ ಅವರಿಗೆ ಬೇಕೆನಿಸಿತು ಏಕಾಂತ ಸಿಕ್ಕುತ್ತಿರಲಿಲ್ಲ. ಅವರು ತಮ್ಮ ಮನ ಪ್ರಾಣಗಳನ್ನು ಕೇಂದ್ರೀಕರಿಸಿ ಅಂತಃಶಕ್ತಿಯನ್ನು ಪೂರ್ಣ ಪಡೆಯಬೇಕು. ಪೂರ್ಣ ಚೇತನರಾಗಬೇಕು— ಎಂಬುದೇ ಅವರ ಹಿರಿಯ ಹಂಬಲ.

ಪ್ರಾಣಲಿಂಗದ ಪ್ರಕಾಶವನ್ನು ಪಡೆಯದೆ ಅಂತರಂಗದ ಜಾಗ್ರುತೆ ಮೈಗೂಡದು. ಅಂತರಂಗದ ಹೋರಾಟದಲ್ಲಿ ಜಯ ಲಭಿಸದು. ಹಗೆಗಳ ಹಗರಣ ತಪ್ಪದು. ಒಳಗೆ ಹಗಲೆನ್ನದೆ ಇರುಳೆನ್ನದೆ ನುಗ್ಗುವ ಹಗೆಗಳನ್ನು ಒಕ್ಕಲಿಕ್ಕಲು ಅಪಾರ ಅಂತಶ್ಶಕ್ತಿ ಬೇಕು; ಅಂತರ್ದೃಷ್ಟಿ ಬೇಕು. ಪ್ರಾಣೇಶ್ವರನ ಪರಮಾನುಗ್ರಹ ಬೇಕು. ಅದಾಗ ಬೇಕಾದರೆ ಒಳ ಮಾಟ ಚಲುವಾಗಬೇಕು. ಒಳಮಾಟ ರೂಪಿತವಾಗದೆ ಒಳನೋಟ ಒಡಗೂಡದು; ಒಳಗೈಮೆಯ ಒಲುಮೆ ಒಡಮೂಡದು. ಇವೆಲ್ಲ ಉಂಟಾಗುವುದೆ ಅಂತಶ್ಶುದ್ಧಿ ಸಿದ್ಧಿಗಳ ಸಂಕೇತ; ಸತ್ಯಸಮೃದ್ಧಿಯ ಸಂಕೇತ. ಈ ನಿರ್ವಹಣೆಯೆ ಅವರ ನಿಜಧ್ಯೇಯ. ಅದನ್ನೆ ಕಣ್ಣಲ್ಲಿ ಕಣ್ಣಿಟ್ಟು ಕಾಯ್ದಿದೆ ಅವರ ಹೃದಯ. ಅದಾಗದೆ ಬಬಲೇಶ್ವರಕ್ಕೆ ಬಂದು ಫಲವಿಲ್ಲ. ಈ ಊರಿನ ಪರಿಸರ ಬಬ್ಬುಳಿಯಿಂದ ಕೂಡಿದಂತೆ ಒಳ ಊರಿನ ಪರಿಸರವೂ ಬಬ್ಬುಳಿ (ಜಾಲಿಮರ)ಯಿಂದ ಕೂಡಿದರೆ

ಪ್ರಯೋಜನವೇನು ? ಮುಳ್ಳಿನ ನೆಲೆಯಾದರೆ ಬಂದ ಭಾಗ್ಯವೇನು ? ಹಗೆಗಳು ಹಗಲಿರುಳು ಮುಳ್ಳು ಮೊನೆಗಳಿಂದ ಚುಚ್ಚುತ್ತಿದ್ದರೆ ನೋವಾಗದಿರದೆ ? ಅಚ್ಚತನ ಅಳವಡುವುದೆ ? ಇದೇ ಅವರ ಅಂತರಂಗದ ಚಿಂತನ ಮಂಥನವಾಗಿ ನಿಲ್ಲುತ್ತದೆ.

ಶಿವಾಚಾರ್ಯರ ಈ ಮನದ ಹೆಬ್ಬಯಕೆಯನ್ನು ಗುರುತಿಸಿದವರು ಆ ಊರಿನ ಶ್ರೀಮಂತ ಬಸವನಗೌಡರು ಕಡೆಮನಿ. ಇವರು ಮಲ್ಲನಗೌಡರ ಮಕ್ಕಳು. ಪಾಟೀಲ ಮನೆತನದವರು. ಶಿವಾಚಾರ್ಯ ಸನ್ನಿಧಿಯವರ ಸಂಕಲ್ಪವನ್ನು ನೆರವೇರಿಸದ ಧನ ವೇತಕ್ಕೆ ? ಜೀವನವೇತಕ್ಕೆ ? ಎಂದು ಯೋಚಿಸಿ ತ್ಯಾಗಕ್ಕೆ ಸಿದ್ಧರಾಗುವರು. ಊರಿನ ಮೂಡಣಕ್ಕೆ ಹದಿನೆಂಟು ಎಕರೆಯಷ್ಟು ಹರವಾದ ನೆಲವನ್ನು ಬೆಲೆಗೆ ಕೊಳ್ಳುವರು. ಹತ್ತಾರು ಸಾವಿರ ಹಣವನ್ನು ವೆಚ್ಚ ಮಾಡಿ ಶಿವಪೂಜಾ ಮಂದಿರವನ್ನು ಸುಂದರವಾಗಿ ಕಟ್ಟಿಸುವರು. ಬಳಿಯಲ್ಲಿಯೆ ಬಾವಿಯೊಂದನ್ನು ತೆಗೆಯಿಸುವರು. ಅದರ ಬಳಿಯಲ್ಲಿ ಬಿಲ್ವ ವನವನ್ನು ಬೆಳೆಸುವರು. ಹೂಬನವನ್ನು ರೂಪಿಸುವರು. ಶ್ರೀ ಶಿವಾಚಾರ್ಯರಿಗೆ ಸಲ್ಲಿಸುವರು.

ಕ್ರಿ. ಶ. ೧೯೧೮ ಕೊನೆಗೆ ಬಬಲೇಶ್ವರಕ್ಕೆ ಬರುವರು. ನಂತರ ೧೯೨೨ರಲ್ಲಿ ಬಸವನಗೌಡರು ಸಲ್ಲಿಸಿದ ಹೊರಗಿನ ಮಠಕ್ಕೆ ಬಂದು ತಂಗುವರು. ಏಕಾಂತ ಸ್ಥಲ, ಪ್ರಶಾಂತ ಸ್ಥಲ; ಮಹಂತತೆಯನ್ನು ಮೈಗೂಡಿಸಿಕೊಳ್ಳಲು ತಕ್ಕುದಾದ ಸ್ಥಲ. ಅದು ಶಿವಾಚಾರ್ಯರ ಮನವನ್ನು ಆಕರ್ಷಿಸುವುದು. ಅಲ್ಲಿದ್ದು ಶಿವಯೋಗ ಸಾಧನೆಯನ್ನು ಮುಂದುವರಿಸುವರು. ಶಿವಯೋಗದ ಉಪಾಂಗಗಳಾದ ಪೂಜೆ, ಜಪ, ಧ್ಯಾನ, ಜ್ಞಾನ ವ್ರತಗಳನ್ನು ಕಟ್ಟಾಚರಣೆಯಲ್ಲಿ ತರುವರು. ಅವರಿಗೆ ಈ ಭವದ ಬೇನೆಯು ಅರಿವಿದೆ. ಅದು ಜೀವಭಾವದ ಅಪಥ್ಯದಿಂದ ಉದ್ರಿಕ್ತಗೊಳ್ಳುವುದೆಂಬುದೂ ಅವರಿಗೆ ಅರಿಕೆ.

ಜೀವ ಭಾವದ ಭವವನ್ನು ತೊಲಗಿಸಲು ಶಿವಯೋಗವೊಂದೇ ಸಿದ್ಧ ಮದ್ದು. ಇದ ರಿಂದಾಗಿ ಶಿವಾಚಾರ್ಯರು ಶಿವಯೋಗ ಸಾಧನೆಗೆ ಸಾಂದ್ರವಾಗಿ ಅಂಟಿಕೊಂಡಿದ್ದರು. ಹಗಲಿರುಳು ಶಿವಯೋಗ ಸಾಮ್ರಾಜ್ಯ ಸಾರ್ವಭೌಮರಾಗಿದ್ದರು. ಸ್ವಸ್ಥಚಿತ್ತರಾಗಿದ್ದರು. ಇದರಲ್ಲಿ ಅವರು ಸುಮಾರಾಗಿ ಮೂವತ್ತು ವರುಷಗಳ ಕಾಲವಿದ್ದರು. ಈ ದೀರ್ಘಾವಧಿ ಕಾಲದಲ್ಲಿ ಅನೇಕ ಭಕ್ತರು ದಾನ ದತ್ತಿಗಳನ್ನಿತ್ತರು. ಮಠ ಮಂದಿರಗಳನ್ನು ಕಟ್ಟಿಸಿದರು. ಬಬಲೇಶ್ವರದ ಶ್ರೀಮಂತಿ ಶಾಂತಲಿಂಗಮ್ಮನವರು ವೀರನಗೌಡರು ಪಾಟೀಲ ಇವರು ಪ್ರಮುಖರು. ಒಂದು ಮನೋಹರವಾದ ಮಂದಿರವನ್ನು ಕಟ್ಟಿಸಿಕೊಟ್ಟರು, ಮತ್ತು ಒಂದು ಉತ್ತಮವಾದ ಭೂಮಿಯನ್ನು ಶ್ರೀ ಚರಣಕ್ಕೆ ಸಲ್ಲಿಸಿದರು. ಮಂದಿರವು ಶಿವಾಚಾರ್ಯರ ಸಂದರ್ಶನಕ್ಕೆ ಬರುವ ಭಕ್ತರ ವಾಸಕ್ಕೆ ಪ್ರಸಾದ ವಿನಿಯೋಗಕ್ಕೆ ಅನುಕೂಲವಾಗಿದೆ. ಭವನ ಭೂಮಿ ಸುಮಾರು ಹತ್ತು ಹದಿನೈದು ಸಾವಿರ ಬೆಲೆ ಬಾಳುತ್ತವೆ. ಈಗ ಇನ್ನೂ ಹೆಚ್ಚಾಗಬಹುದು.

ಮತ್ತೊಬ್ಬ ಪ್ರಮುಖರು ಶ್ರೀಮಂತ ಬಸವನಗೌಡರು, ಶ್ರೀಮತಿ ನೀಲಮ್ಮ ತಾಯಿ ಎಂಬ ದಂಪತಿಗಳು. ಇವರ ಸೇವೆ ಅಷ್ಟಿಷ್ಟೆಂದು ಹೇಳಲು ಸಾಧ್ಯವಿಲ್ಲ. ಸದಾಕಾಲ ಸ್ವಾಮಿ ಸೇವೆಗಾಗಿ ಮೀಸಲಾಗಿದ್ದರು. ಕ್ರಿ. ಶ. ೧೯೫೫ರಲ್ಲಿ ಶಿವಾಚಾರ್ಯರ ಸನ್ನಿಧಿಯಲ್ಲಿ ಬಸವನಗೌಡರು ಶಿವಾಧೀನರಾಗುವರು. ಇವರ ಅಗಲಿಕೆಯನ್ನು ಶಿವಾಚಾರ್ಯರೂ ಸಹ ಸಹಿಸದಾದರೆಂದರೆ ಗೌಡರ ಗುರುಭಕ್ತಿಯೆಂತಹದೆಂಬುದು ವ್ಯಕ್ತವಾಗುತ್ತದೆ. ನೀಲಮ್ಮನ ನೋವಿಗಂತೂ ಮಿತಿಯೇ ಇರಲಿಲ್ಲ. ಶಿವಾಚಾರ್ಯರೇ ತಾಯಿಗೆ ಸಮಾಧಾನವನ್ನು ಹೇಳುವರು.

ಪ್ರಾಣಾರ್ಪಣಕ್ಕೆ ಸಿದ್ಧರಾದ ಅವರಿಗೆ ಓ ತಾಯಿ, ಅಳದಿರು ಅಣು ಚೇತನ ಮಹಾಚೇತನದಲ್ಲಿ ಬೆರೆತಿದೆ. ಪತಿಯ ಆತ್ಮಶಾಂತಿಗಾಗಿ ಸತಿ ಶ್ರಮಿಸುವುದು ಧರ್ಮ. ನಿನ್ನ ಲಿಂಗದಲ್ಲಿ ಆ ಪತಿ ಚೇತನವಿದೆ. ನಿನ್ನ ಲಿಂಗಾರಾಧನೆಯ ಪತಿದೇವನಾರಾಧನೆ. ಆತನಿಗಾಗಿಯೇ ನೀನಿಲ್ಲಿರುವೆ. ನಮಗೆ ತಾಯಾಗಿರುವೆ. ನೀನು ಆತ್ಮಹತ್ಯಕ್ಕೆ ದುಡುಕಿದರೆ ನಮಗೂ ತೀರದ ನೋವಲ್ಲವೆ ? ಅಲ್ಲದೆ ಆತ್ಮಹತ್ಯ ಮಹಾಪಾಪ. ಅದನ್ನು ಕನಸು ಮನಸುಗಳಲ್ಲಿಯೂ ತಂದುಕೊಳ್ಳದಿರು. ಎಂದು ಪರಿಪರಿಯಾಗಿ ಅಪ್ಪಣೆಗಳನ್ನಿತ್ತು ಉಳಿಸುವರು. ಇದರಿಂದ ಸಮಾಧಾನವನ್ನು ತಳೆದ ತಾಯಿ ಗುರುಸೇವಾ ನಿರತಳಾಗಿರುವಳು. ಶಿವಶರಣೆ ಬಿಜ್ಜ ಮಹಾದೇವಿಯನ್ನು ನೆನವಿಗೆ ತರುವಳು.

ಶಿವಾಚಾರ್ಯರ ನಿಡುಗಾಲದ ಶಿವಯೋಗ ಸಾಧನೆ ಸಣ್ಣದಾಗಿರಲಿಲ್ಲ. ಅದರಿಂದ ಶುದ್ಧಿ ಸಿದ್ಧಿಗಳನ್ನು ಪಡೆದು ಪ್ರಬುದ್ಧರಾಗಿರುವರು. "ಲಿಂಗ ಮುಖಾರ್ಪಣೇಯ ವಿರುದ್ಧ ಪದಾರ್ಥ ಸೇವನೆಯಿಂದ ಅವರ ಕಾಯವು ಪ್ರಸಾದಕಾಯವಾಯಿತು. ವಾಣಿಯು ನಿರಂತರ ಮಂತ್ರಪಠನ, ಶಿವಾಗಮ ಕಥನ, ಪ್ರಸಾದ ಗ್ರಹಣಗಳಲ್ಲಿ ಆಸಕ್ತವಾದುದರಿಂದ ಅದು ಪ್ರಸಾದವಾಣಿಯೆನಿಸಿತು. ಮನವು ವೃತ್ತಿ ನಿರೋಧ ಮೂಲಕ ಏಕಾಗ್ರವಾಗಿ ಶಿವಧ್ಯಾನಾಸಕ್ತವಾದುದರಿಂದ ಸುಮನವಾಯಿತು. ಹೀಗೆ ತ್ರಿಕರಣಗಳು ಶುದ್ಧವಾದುದರಿಂದ ಶ್ರೀಗಳವರು ಪರಿಶುದ್ಧರಾದರು. ಇದರಿಂದಾಗಿ ಶಿವಯೋಗ ಸಿದ್ಧರೆಂದು ನಾಡತುಂಬೆಲ್ಲ ಪ್ರಸಿದ್ಧರಾದರು.

# ೭. ಸಾಹಿತ್ಯಪ್ರೇಮ, ಸಾಹಿತಿಪ್ರೋತ್ಸಾಹ

"ಶಾಂತ ವೃತ್ತಿಯುಳ್ಳವರೂ ಮನೋವಿಜಯ ವೀರರೂ ಇರುವುದರಿಂದಲೇ ಶ್ರೀಗಳವರು ಶಾಂತವೀರಸ್ವಾಮಿಗಳೆಂಬ ಅನ್ವರ್ಥಕ ನಾಮದಿಂದ ಒಪ್ಪುತ್ತಿರುವರು." ಎಂದು ತೆಲಸಂಗದ ಹಿರಿಯ ಮಠದ ಪಟ್ಟಾಧ್ಯಕ್ಷರು ತಾವು ಬರೆದ ಚರಿತ್ರೆಯ ಪುಟ ೪೮–೪೯ರಲ್ಲಿ ಹೇಳಿರುವರು.

ಶ್ರೀ ಶಾಂತವೀರ ಶಿವಾಚಾರ್ಯ ಸ್ವಾಮಿಗಳವರಿಗೆ ಶಿವಯೋಗದಲ್ಲಿರುವ ಪ್ರೇಮ ಸಾಹಿತ್ಯದಲ್ಲಿದೆ. ಜೊತೆಗೆ ಸಾಹಿತಿಗಳಲ್ಲಿಯೂ ಇದೆ. ಕವಿ ಕಲಾವಿದರಲ್ಲಿಯೂ ಇದೆ. ಅವರವರಲ್ಲಿರುವ ಶಕ್ತಿಯನ್ನು ಕಂಡು ಮೆಚ್ಚದೆ ಕರುಣಿಸದೆ ಇರುವವರಲ್ಲ. ಸೈದ್ಧಾಂತಿಕ ಸಾಹಿತ್ಯವೆಂದರೆ ಶಾಸ್ತ್ರೀಯ ಸಂಗೀತವೆಂದರೆ ಶಿವಾಚಾರ್ಯರಿಗೆ ಸೀಮೆ ಮೀರಿದ ಪ್ರೇಮ, ಸಂತಸ. ತಾವು ಬಲ್ಲಿದರಾದ್ದರಿಂದ ಬಲ್ಲಿದರ ಬೆಲೆಯನ್ನು ಕಲಾವಿದರ ಕಲೆಯನ್ನು ಗುರುತಿಸುವ, ಗುರುತಿಸಿ ಗೌರವಿಸುವ ಉತ್ತಮ ಸ್ವಭಾವ ಶಾಂತವೀರ ಶಿವಾಚಾರ್ಯರದು. ಅವರು ಉದಾರ ಹೃದಯರು, ಉತ್ತಮ ವಿದ್ವಾಂಸರು. ಅವರ ಬಳಿಗೆ ಬಂದವರು ಬರಿಗೈಯಿಂದ ಹಿಂದಿರುಗುವಂತಿಲ್ಲ. ಬಂದವರ ಬೌದ್ಧಿಕ ಶಕ್ತಿಯನ್ನು ಅರಿವ ಶಕ್ತಿ ಅವರಿಗಿದೆ.

ಅವರ ಸಾಹಿತ್ಯಪ್ರೇಮ ಇಂದಿನದಲ್ಲ, ನಿನ್ನೆಯದಲ್ಲ; ಬಾಲ್ಯದಿಂದಲೂ ಬಂದ ಪ್ರೇಮ. ಮತ್ತೊಬ್ಬರ ಪ್ರೇರಣೆಯಿಂದ ಬಂದುದಲ್ಲ; ಸ್ವತಃ ಸಿದ್ಧವಾದ ಪ್ರೇಮ. ತಾವೇ ಅದನ್ನು ಬೆಳಸಿಕೊಂಡು ಉಳಿಸಿಕೊಂಡು ಬಂದ ಆದರ್ಶ ಅವರದು. ಸತ್ವ ಸಾಹಿತ್ಯ ಸುಧಾಪಾನದಲ್ಲಿ ಅವರು ತಮ್ಮನ್ನು ತಾವೇ ಮರೆಯುತ್ತಾರೆ. ಅವರ ಒಂದು ಕಣ್ಣು ಶಿವಾರಾಧನ; ಇನ್ನೊಂದು ಕಣ್ಣು ಸಾಹಿತ್ಯಾರಾಧನ. ಅವರಿಗೆ ಬೇರೊಂದಿಲ್ಲ ಪ್ರಿಯಸಾಧನ. ಅದರಿಂದ ಅವರ ಆತ್ಮಾನುಭವ ಅಪಾರ. ಸಮಗ್ರ ವಿಜಯ ಯಾರ ಸೊತ್ತಲ್ಲ; ವಿಲಕ್ಷಣ ವಿಜಯ ವಿಚಕ್ಷಣತೆಯ ಸಂಕೇತ ಎಂಬುದನ್ನು ಚೆನ್ನಾಗಿ ಮನವರಿಕೆ ಮಾಡಿಕೊಂಡ ಅವರು ಅವರವರ ಕಲೆಗಳಲ್ಲಿ ವಿಲಕ್ಷಣ ಶಕ್ತಿಯನ್ನು ಪಡೆದು ಬಂದವರನ್ನು ಪ್ರೋತ್ಸಾಹಿಸುವರು.

"ಹಲಸಂಗಿಯ ಶ್ರೀ ಮಧುರ ಚನ್ನರು ಬಡಕಲು ಮೈಯವರು. ಮೈ ಬಡಕಲಾಗಿದ್ದರೂ ಅವರ ಮನ ಮತಿ ಬಡಕಲವಾಗಿರಲಿಲ್ಲ. ಅವರಲ್ಲಿ ಬುದ್ಧಿಬಲ

ಆತ್ಮಬಲಗಳು ಸಬಲವಾಗಿದ್ದವು. ಶ್ರೀ ಮಧುರ ಚೆನ್ನರು ಶ್ರೀಗಳವರ ಶಾಸ್ತ್ರಸಂದೇಹ ನಿರಾಕರಣ, ಸದಯಾಂತಃಕರಣ, ಮಾತೃವತ್ಪರಿಪಾಲನ, ಶಿಷ್ಯವಾತ್ಸಲ್ಯ ಮುಂತಾದ ಉದಾತ್ತ ಮತ್ತು ಉದಾರ ಗುಣಗಳಿಗಾಗಿ ಮೆಚ್ಚಿ ಆರಾರು ತಿಂಗಳುಗಳ ವರೆಗೆ ಶ್ರೀಗಳವರ ಸನ್ನಿಧಿಯಲ್ಲಿಯೆ ಇರುತ್ತಿದ್ದರು. ಮೃದು ಮಧುರ ಸ್ವಭಾವದ—ಆತ್ಮ ಸಾಕ್ಷಾತ್ಕಾರಕ್ಕೆ ಆತುರನಾಗಿ ಉಗ್ರ ತಪಸ್ಸಾಧನೆಯನ್ನು ಕೈಕೊಂಡ ಓರ್ವ ಸುಶೀಲ ಸುಶಿಕ್ಷಿತ ಸಾಧಕನ ಆಧ್ಯಾತ್ಮದ ಒಲವನ್ನು ಕಂಡು ಶ್ರೀಗಳವರು ಆನಂದ ಭರಿತರಾಗುತ್ತಿದ್ದರು.

ದ್ಯಾವಾಪುರ ಬಸವಲಿಂಗ ಶಾಸ್ತ್ರಿಗಳವರು ಪರಮ ಪೂಜ್ಯ ಹಾನಗಲ್ಲ ಕುಮಾರ ಮಹಾಸ್ವಾಮಿಗಳವರ ಕೃಪೆಗೆ ಪಾತ್ರರಾದವರು. ಕೀರ್ತನ ಕಲೆಯಲ್ಲಿ ಅಪ್ರತಿಮರು; ಕೀರ್ತಿವಂತರು. ಸಂಸಾರದಲ್ಲಿದ್ದು ಶರಣರಾದವರು. ಇವರು ಶಿವಾಚಾರ್ಯರ ಸನ್ನಿಧಿಯಲ್ಲಿ ನಿಡುಗಾಲವಿದ್ದು ಸಿದ್ಧಾಂತ ಶಿಖಾಮಣಿ, ದಶೋಪನಿಷತ್ತುಗಳು, ಯೋಗವಾಶಿಷ್ಟ, ಪಂಚದಶಿ ಮೊದಲಾದ ದಾರ್ಶನಿಕ ಕೃತಿಗಳನ್ನು ಅಧ್ಯಯನ ಮಾಡಿದವರು. ಶಿವಾಚಾರ್ಯರ ಪ್ರತಿಭೆಗೆ ಮೆಚ್ಚಿಕೊಂಡವರು. ಶುಶ್ರೂಷುಗಳಾಗಿ ಆಗಾಗ ಸನ್ನಿಧಿಗೆ ಬಂದು ಹೋಗುತ್ತಿದ್ದರು. ಶಿವಾಚಾರ್ಯರ ಶಿವಾದ್ವೈತಾನುಭವಕ್ಕೆ ಮನ ಮೆಚ್ಚಿ ಮಾರುಹೋಗಿದ್ದರು. ಅದರಂತೆ ಸುಪ್ರಸಿದ್ಧರಾದ ಲಿಂ. ಪಂಚಾಕ್ಷರ ಗವಾಯಿಗಳು ಕೂಡ ಆಗಾಗ ಶಿವಾಚಾರ್ಯರ ಕಡೆಗೆ ಬಂದು ಕೆಲವೊಂದು ದಿನ ನಿಂತು ಹೋಗುತ್ತಿದ್ದರು.

ಕನ್ನಡ ಸಾಹಿತ್ಯಕ್ಕೆ ಕೀರ್ತಿಯನ್ನು ತಂದ ಸಾಹಿತ್ಯ ವಚನ ಸಾಹಿತ್ಯ. ಇದು ಶರಣ ಸಾಹಿತ್ಯವೆಂದು ಕನ್ನಡ ಉಪನಿಷತ್ತೆಂದು ಹೆಸರಾಗಿದೆ. ಭಾವಪೂರ್ಣ ಸಾಹಿತ್ಯ. ವಿಪುಲ ಸಾಹಿತ್ಯ. ಇದು ತಾಳೆಗರಿಗಳಲ್ಲಿ ಕೋರಿಕಾಗದಗಳಲ್ಲಿ ನಿಂತು ಹೋಗಿತ್ತು; ನಶಿಸಿ ಹೋಗುವಂತಿತ್ತು. ಇದನ್ನೆಲ್ಲ ಸಂಗ್ರಹಿಸಿ, ಸಂಶೋಧಿಸಿ, ಸಂಪಾದಿಸಿ, ಮುದ್ರಿಸಿ ಪ್ರಕಟಿಸುವ ಕಾರ್ಯವನ್ನು ಕೈಕೊಂಡರು ಲಿಂಗೈಕ್ಯ ಫ. ಗು. ಹಳಕಟ್ಟಿಯವರು.

ಇವರು ದೇವರ ದಾಸಮಯ್ಯನ ಅನುಯಾಯಿಗಳು. ಶ್ರೀಶೈಲ ಜಗದ್ಗುರು ನಿಡುಮಾಮಿಡಿ ಪೀಠದ ಪರಮ ಶಿಷ್ಯರು.

ಇವರಿಗೊಮ್ಮೆ ಹಣದ ಕೊರತೆಯುಂಟಾಗಿ ವಚನ ವಾಙ್ಮಯ ಪರಿಶೋಧನ ಕಾರ್ಯ ಪ್ರಕಟನಕಾರ್ಯ ನಿಂತು ಹೋಗುವ ಸಂಭವವೊದಗಿಬಂದಿತ್ತು. ಯಾರಿಂದಲೂ ನೆರವು ದೊರೆಯದೆ ತುಂಬಾ ತೊಂದರೆಗೆ ಒಳಗಾಗಿದ್ದರು. ಯೋಚಿಸಿ, ದಯಾಮಯಿಗಳೂ ದಾತೃಗಳೂ ಆದ ಶಿವಾಚಾರ್ಯರ ಬಳಿಗೆ ಬರುವರು. ದೊಡ್ಡದೊಂದು ಹೊತ್ತಗೆಯ ಗಂಟನ್ನು ಹೊತ್ತುಕೊಂಡು ಬಂದು ಶಿವಾಚಾರ್ಯರ ಶ್ರೀಪಾದಕ್ಕೆ ಅವನ್ನು ಸಮರ್ಪಿಸುವರು.

ಅತ್ಯಂತ ದೀನವಾಣಿಯಿಂದ ಹೀಗೆ ಅರಿಕೆ ಮಾಡಿಕೊಳ್ಳುವರು: "ಬುದ್ಧಿ, ನಿಮ್ಮ ಕೃಪೆಗಾಗಿ ಬಂದೆ. ಇದೀಗ ನಮ್ಮ ಶಿವಾನುಭವ ಸಂಸ್ಥೆ ನಿಂತು ಹೋಗುವ ಪ್ರಸಂಗವೊದಗಿದೆ. ಹಣದ ಮುಗ್ಗಟ್ಟು. ಆಳುಗಳಿಗೆ ಸಂಬಳ ಕೊಡಲು ಹಣವಿಲ್ಲ. ಜೀವನಕ್ಕೂ ತುಂಬಾ ತೊಂದರೆ. ಸದ್ಯಕ್ಕೆ ಇನ್ನೂರು ರೂಪಾಯಿಗಳನ್ನು ಅನುಗ್ರಹಿಸಬೇಕು. ಅನುಗ್ರಹಿಸದಿದ್ದರೆ ವಿಧಿಯಿಲ್ಲದೆ ವಚನ ವಾಙ್ಮಯ ಸೇವೆಯನ್ನು ನಿಲ್ಲಿಸಿ ಬಿಡಬೇಕಾಗುತ್ತದೆ. ತಾವು ಕರುಣಿಸಿದರೆ ಒಂದು ಹೊಸ ಚೇತನ ಬರುತ್ತದೆ;" ಎಂದು ಬತ್ತಿದ ಮೊಗದಿಂದ ಬೇಡಿಕೊಳ್ಳುವರು.

ಉತ್ತಮ ವಾಙ್ಮಯಾರಾಧಕನಿಗೆ ಈ ಬಗೆಯ ದುರ್ದೆಸೆ ಒದಗಿದುದನ್ನು ಕವಿಯಾರೆ ಕೇಳಿ ಕಣ್ಣಾರೆ ಕಂಡು ಶಿವಾಚಾರ್ಯರ ಮನ ಮಿಡುಕಿತು; ಹೃದಯ ಹಲ್ಲಣಿಸಿತು. ಅವರು ಬೇರೆ ಏನನ್ನೂ ಯೋಚಿಸದೆ ತುಂಬಾ ಸಹಾಯ ಮಾಡಬೇಕೆಂದು ಬಗೆದು ಊರೊಳಗಿನ ಮಠಕ್ಕೆ ಬಂದು ಕಬ್ಬಿಣ ಪೆಟ್ಟಿಗೆಯನ್ನು ತೆಗೆದು ನೋಡುತ್ತಾರೆ. ಕೇವಲ ಇನ್ನೂರೈವತ್ತು ರೂಪಾಯಿಗಳು ಮಾತ್ರ ಇರುತ್ತವೆ. ಮನಸ್ಸಿಗೆ ಸಮಾಧಾನವಾಗಲಿಲ್ಲಾದರೂ ಬೇರೆ ಯಾವ ಹೊಲಬಿಲ್ಲದೆ ಇದ್ದುದನ್ನೆಲ್ಲ ಎತ್ತಿಕೊಂಡು ಬಂದು ಹಳಕಟ್ಟಿಯವರಿಗೆ ಕೊಟ್ಟು ವಿದ್ಯಮಾನವನ್ನು ತಿಳಿಸುತ್ತಾರೆ. ಮತ್ತು ನೀವು ತಂದ ಗ್ರಂಥಗಳನ್ನೂ ನೀವೇ ಕೊಂಡೊಯ್ಯಿರಿ. ನಮ್ಮ ಆಳು ಇವನ್ನು ಹೊತ್ತು ಕೊಂಡು ಬರುತ್ತಾನೆ. ಬೇರೆ ಮಾರಿದರೆ ಇವುಗಳಿಂದಷ್ಟು ಹಣವೊದಗುತ್ತದೆ; ಎಂದು ಅಪ್ಪಣೆಯನ್ನೀಯುವರು.

ಆಗ ಹಳಕಟ್ಟಿಯವರ ಹೃದಯಕ್ಕೆ ಹಿಡಿಸಲಾರದಷ್ಟು ಹರುಷ. ನೇಸರನ ಉದಯಕ್ಕೆ ಅರಳಿದ ತಾವರೆಯಂತೆ ಅವರ ಮೊಗ ಅರಳಿತು. ಆನಂದದಿಂದ ಶ್ರೀ ಶಾಂತವೀರ ಶಿವಾಚಾರ್ಯರನ್ನು ಹೃದಯ ತುಂಬಿ ಹೊಗಳುವರು. ಆಗ ಶಿವಾಚಾರ್ಯರು, ಅದೇಕೆ ಹೊಗಳುವಿರಿ? ಕೊಡಬಾರದಷ್ಟನ್ನು ನಾವೇನು ಕೊಟ್ಟಿಲ್ಲ. ಕೊಟ್ಟಿದ್ದು ತೀರ ತುಸು. ಅಲ್ಲದೆ ಕೊಟ್ಟ ಹಣ ಸಾರ್ಥಕವಾಯಿತು. ಶರಣ ಸಾಹಿತ್ಯ ಸೇವೆ ಸಲ್ಲುವಂತಾಯಿತು. ಹೋಗಿ ಬನ್ನಿ ಎಂದು ಹೇಳಿ ಕಳುಹಿಸಿದರು.

ಇದಿಷ್ಟೆ ಅಲ್ಲ; ಹಳಕಟ್ಟಿಯವರಿಗೆ ಮತ್ತೊಂದು ಪ್ರಸಂಗದಲ್ಲಿ ತುಂಬಾ ತೊಂದರೆಯೊದಗಿದ್ದಿತು. ಇದನ್ನು ಶಿವಾಚಾರ್ಯರು ಹೇಗೋ ತಿಳಿದುಕೊಂಡು ಅವರು ಬಂದು ಕೇಳದ ಮುನ್ನವೆ ತಾವೆ ನಾಲ್ಕು ಚೀಲ ಜೋಳ, ಎರಡು ಚೀಲ ಗೋದಿ ಮತ್ತು ೩೫೦ ರೂಪಾಯಿಗಳನ್ನು ಕೊಟ್ಟು ಕಳಿಸುವರು. ಮತ್ತೊಮ್ಮೆ ಎರಡು ಚೀಲ ಕಡಲೆ, ಮೂರು ಚೀಲ ತೊಗರೆ ಕಳಿಸಿದರು.

# ೮. ಆದರ್ಶ ಉದಾರ ಕೊಡುಗೆ!

ಶೈಕ್ಷಣಿಕ ಧಾರ್ಮಿಕ ತಾಂತ್ರಿಕ ಶಾರೀರಕ ಪ್ರಾಸಾದಿಕ ಮೊದಲಾದ ಸಂಸ್ಥೆಗಳಿಗೆ ಶ್ರೀ ಶಾಂತವೀರ ಶಿವಾಚಾರ್ಯರು ಕರುಣಿಸಿದ ಕೊಡುಗೆ ಉದಾರವಾದುದು; ಅಂತೆಯೆ ಆದರ್ಶ ವಾದುದು. ಒಂದಲ್ಲ ಎರಡಲ್ಲ ಹಲವಾರು ಸಂಸ್ಥೆಗಳಿಗೆ ಕೊಡ ಮಾಡಿದ್ದಾರೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಉಲ್ಲೇಖಿಸಲಾಗುತ್ತದೆ.

ಬಬಲೇಶ್ವರ ಪ್ರೌಢಶಾಲೆಗೆ ಊರಹೊರಗಿರುವ ತಮ್ಮ ಹೊಸ ಮಠವನ್ನು ಮತ್ತು ಹದಿನೆಂಟು ಎಕರೆ ತೋಟದ ನೆಲವನ್ನು ೧೯೬೧ರಲ್ಲಿ ಕೊಟ್ಟಿದ್ದಾರೆ. ಊರಿನ ಹಿರಿಯರು ಪ್ರೌಢಶಾಲೆಗೆ ನಿಧಿ ಸಂಗ್ರಹಿಸಲು ದಯಮಾಡಬೇಕೆಂದು ಬಿನ್ನವಿಸಿ ಕೊಳ್ಳಲು, ಅವರಿಗಿತ್ತ ಉತ್ತರವಿದು: "ನಿಧಿ ಸಂಗ್ರಹಿಸಲು ನನ್ನನ್ನು ಕರೆಯಬೇಡಿರಿ. ನಾನು ಯಾರನ್ನೂ ಬೇಡಲಾರೆ. ಬೇಕಾದರೆ ಮಠದ ಆಸ್ತಿಯನ್ನೇ ಪ್ರೌಢಶಾಲೆಗೆ ಕೊಡುವೆ. ಬಾಲಕರ ಬೌದ್ಧಿಕ ವಿಕಾಸಕ್ಕೆ ನೆರವಾದ ಸಿರಿಯೆ ಸಾರ್ಥಕ ಸಿರಿ" ಎಂದು ವಿಶಿಷ್ಟ ವಿಚಾರಧಾರೆಯ ನಿರೂಪವನ್ನಿತ್ತು ಮೇಲೆ ಹೇಳಿದ ಮಠ ಮಾನ್ಯಗಳನ್ನು ದಯ ಪಾಲಿಸುವರು. ಇದಲ್ಲದೆ ಸಾರವಾಡ ಸಂಗಾಪುರ ಹಲಗಣಿ ಮೊದಲಾದ ಊರು ಗಳಲ್ಲಿರುವ ಪ್ರಾಥಮಿಕಶಾಲೆ, ತಾಂತ್ರಿಕಶಾಲೆ, ಆರೋಗ್ಯ ನಿಲಯ, ವಾಚನಾಲಯ, ಪ್ರಸಾದ ನಿಲಯಗಳನ್ನು ಪ್ರಾರಂಭಿಸಿದ್ದಾರೆ. ಅವನ್ನು ಅಭಿವೃದ್ಧಿಗೆ ತರಲು ಪ್ರಯತ್ನಿಸಿದ್ದಾರೆ. ಇವಲ್ಲದೆ ಇನ್ನೆಷ್ಟೋ ಸಾಮಾಜಿಕ ಸತ್ಕಾರ್ಯಗಳನ್ನು ರೂಪಿ ಸಿದ್ದಾರೆ.

ಜಿಲ್ಲೆಯ ನೆಲೆಯಾದ ನಗರವೂ ಆದ ವಿಜಾಪುರದ ವಿಜಯ ಕಾಲೇಜಕ್ಕೆ ಶ್ರೀ ಶಾಂತವೀರ ಶಿವಾಚಾರ್ಯರು ಅಷ್ಟಿಷ್ಟಲ್ಲ ಲಕ್ಷಾಂತರ ಹಣವನ್ನು ಕೂಡಿಸಿಕೊಟ್ಟು ಅನುಗ್ರಹಿಸಿದ್ದಾರೆ. ಆ ಮಹೋನ್ನತ ವಿದ್ಯಾಸಂಸ್ಥೆಯು ನಾಡಿನಲ್ಲಿ ಆದರ್ಶವಾಗಿರ ಬೇಕೆಂದು ಹಗಲಿರುಳು ಪರಿಶ್ರಮಿಸಿದರು. ಕೀರ್ತಿ ಪ್ರತಿಷ್ಠೆಗಳನ್ನು ಕಾಂಕ್ಷಿಸದೆ ಶಿಕ್ಷಣ ಸಂಸ್ಥೆಗಳಿಗೆ ಸಾಕಷ್ಟು ಸೇವೆ ಸಲ್ಲಿಸಿದ್ದಾರೆ. ಇದಲ್ಲದೆ ಶಿವಾನುಭವ, ನವಕರ್ನಾಟಕ, ಉದಯ, ವಿಶ್ವವಾಣಿ ಮೊದಲಾದ ಮಾಸಿಕ ಸಾಪ್ತಾಹಿಕ ದೈನಿಕ ಪತ್ರಿಕೆಗಳಿಗೆ ಸಹಾಯ ಸಂಪತ್ತು ಸಾಕಷ್ಟು ಸಂದಿದೆ.

ವಿಜಾಪುರ ಜಿಲ್ಲೆಯಲ್ಲಿರುವ ಧಾರ್ಮಿಕ ಸಂಸ್ಥೆಗಳಲ್ಲಿ ದೊಡ್ಡದಾದ ಸಂಸ್ಥೆ ಶಿವಯೋಗ ಮಂದಿರ. ಇದನ್ನು ಸ್ಥಾಪಿಸಿದ ಲಿಂಗೈಕ್ಯ ಹಾನಗಲ್ಲ ಕುಮಾರ ಮಹಾ

ಸ್ವಾಮಿಗಳವರಿಗೆ ಶಿವಯೋಗ ಮಂದಿರಕ್ಕಾಗಿ ಅತಾಲಟ್ಟಿ ಗ್ರಾಮದ ಸಿದ್ಧನಗೌಡರಿಂದ ಮೂರು ಸಾವಿರ ರೂಪಾಯಿಗಳನ್ನು ಕೊಡಿಸಿದ್ದಲ್ಲದೆ, ಹಲಗಣಿ, ಕಾಖಂಡಿಕಿ, ಸಾರವಾಡ, ಶೇಗುಣಸಿ ಮೊದಲಾದ ಊರುಗಳಲ್ಲಿ ಹೆಚ್ಚಾಗಿ ಕಾಣಿಕೆಯ ರೂಪದಲ್ಲಿ ಶಿವಯೋಗಮಂದಿರ ಸಂಸ್ಥೆಗೆ ಸಹಾಯವನ್ನು ಮಾಡಿಸುವರು. ಸ್ವಾರ್ಥಕ್ಕೆ ಸ್ವಲ್ಪ ವಾದರೂ ಅಪೇಕ್ಷಿಸದೆ ಸೇವೆ ಸಲ್ಲಿಸಿದರು. ಇವರಮೇಲೆ ಲಿಂ. ಹಾನಗಲ್ಲ ಪೂಜ್ಯರಿಗೆ ವಿಶೇಷ ಕರುಣೆ !

ಕ್ರಿ. ಶ. ೧೯೫೪ರಲ್ಲಿ ವಿಜಾಪುರದಲ್ಲಿ ೭೭೦ ಅಮರ ಗಣಾಧೀಶ್ವರರ ಮಂಟಪ ಮಹಾಪೂಜೆಯನ್ನು ಬಂಥನಾಳ ಶಿವಯೋಗಿಗಳು ಹಮ್ಮಿಕೊಂಡಿದ್ದರು. ಅದು ಯಶಸ್ವಿಯಾಗಿ ಸಾಗಬೇಕಾದರೆ ಸರ್ವಸಮರ್ಥರೊಬ್ಬರು ಬೇಕಾಗಿದ್ದರು. ತುಂಬಾ ಯೋಚಿಸಿ ಶಿವಯೋಗಿಗಳವರು ಶಿವಾಚಾರ್ಯರನ್ನೆ ಯೋಜಿಸುವರು. ಇವರು ದೂರ ದರ್ಶಿಗಳು ದಯಾಮಯರು ದಾತೃಹೃದಯರೂ ಆಗಿರುವುದರಿಂದ ಇವರನ್ನೆ ಆ ಸಮಾರಂಭದ ಕಾರ್ಯಕಾರಿ ಸಮಿತಿಯ ಅಧ್ಯಕ್ಷರನ್ನಾಗಿ ಮಾಡುವರು. ಅವರ ಒತ್ತಾಯಕ್ಕೆ ಮಣಿದು ಅವರ ಮೇಲಿನ ವಾತ್ಸಲ್ಯಕ್ಕಾಗಿ ಒಪ್ಪಿಕೊಳ್ಳುವರು. ಪ್ರಸಾದ ವಿನಿಯೋಗಕ್ಕೆ ಯಾವ ಪಡಿಪದಾರ್ಥ ಕಡಿಮೆಯಾಗದಂತೆ ವ್ಯವಸ್ಥೆ ಮಾಡಿದರು. ಲಕ್ಷಲಕ್ಷ ಜನರು ಪ್ರಸಾದ ಸ್ವೀಕರಿಸಿ ತಣಿದರು. ಅಲ್ಲದೆ ಜ್ಞಾನದಾಸೋಹದ ಕಾರ್ಯಕ್ರಮಗಳನ್ನು ತೃಪ್ತಿಕರವಾಗಿ ನೆರವೇರಿಸಿದರು. ಬಂದ ಜನರೆಲ್ಲ ಆನಂದ ಹೊಂದಿ ಹೋದರು. ಹಿಡಿವ ಕೆಲಸವನ್ನು ಅಚ್ಚುಕಟ್ಟಾಗಿ ಮಾಡುವ ಮಾಡಿಸುವ ಕರ್ತವ್ಯ ದಕ್ಷತೆಯಿದೆ ; ಪ್ರತಿಭಾನ್ವಿತ ಸಾಮರ್ಥ್ಯವಿದೆ.

ಕ್ರಿ.ಶ. ೧೯೬೧ರಲ್ಲಿ ಅಷ್ಟಗ್ರಹಗಳ ಅನಿಷ್ಟಕೂಟವುಂಟಾಯಿತು. ಪ್ರಜಾ ಕೋಟಿಗೆ ವಿವಿಧ ವಿಪತ್ತುಗಳು ಸಂಭವಿಸುವವೆಂದು ಪ್ರಚಾರವಾಯಿತು. ಪ್ರಾಂತ ದಲ್ಲೆಲ್ಲ ಪುಣ್ಯಕಾರ್ಯಗಳು ಏರ್ಪಟ್ಟವು. ಶಿವಾಚಾರ್ಯರೂ ಲೋಕಕಲ್ಯಾಣಕ್ಕಾಗಿ ತುಂಬಾ ತ್ಯಾಗ ಮಾಡಿದರು. ಹಳ್ಳಿ ಹಳ್ಳಿಗೆ ಸಂಚರಿಸಿದರು. ಧರ್ಮಬೋಧೆಯನ್ನೆಸಗಿ ದರು. ಜಪಯಜ್ಞ ಸಮಾರಂಭಕ್ಕೆ ಅಪಾರ ಧನವನ್ನು ಸಂಗ್ರಹಿಸಿದರು. ಹರಳೇಶ್ವರ ಆಶ್ರಮದಲ್ಲಿ ಜಂಗಮಾರ್ಚನ ಜಂಗಮಾರಾಧನ ಜಪಯಜ್ಞಗಳನ್ನು ಏರ್ಪಡಿಸಿದರು. ಅದೆ ಸಮಯದಲ್ಲಿ ಆಶ್ರಮದಲ್ಲಿ ಜಪಯಜ್ಞ ಮಂಟಪ, ಮಂತ್ರಪಠನ ಪೀಠ, ಪ್ರಸಾದ ಕುಂಡ ವಸತಿ ಗೃಹಗಳನ್ನು ನಿರ್ಮಿಸಿದರು. ಆ ಸಮಾರಂಭಕ್ಕೆ ಮುಧೋಳದ ಮೃತ್ಯುಂಜಯ ಸ್ವಾಮಿಗಳು, ಬೊಮ್ಮನಹಳ್ಳಿ ಶಾಂತಲಿಂಗ ಶಿವಾಚಾರ್ಯರು, ತೆಲಸಂಗದ ಬಸವಲಿಂಗ ಶಿವಾಚಾರ್ಯರು, ಗದಗಿನ ವೇದಾಂತ ಕೇಸರಿ ಮಲ್ಲಿಕಾರ್ಜುನ ಸ್ವಾಮಿಗಳು ದಯಮಾಡಿಸಿದ್ದರು. ಅಲ್ಲದೆ ಹತ್ತು ಹದಿನೈದು ಸಾವಿರ ಜನರು ಬಂದಿ ದ್ದರು. ಮಂತ್ರ ಜಪಯಜ್ಞ ಮಹಾವೈಭವದಿಂದ ನಡೆಯಿತು. ಬಂದವರಿಗೆಲ್ಲ

ಪ್ರಸಾದ ವಿನಿಯೋಗವಾಯಿತು. ಏನೆಲ್ಲವನ್ನು ಶ್ರೀ ಶಾಂತವೀರ ಶಿವಾಚಾರ್ಯರೆ ನಿರ್ವಹಿಸಿದರು.

ಕ್ರಿ.ಶ. ೧೯೬೩ರಲ್ಲಿ ವಿಜಾಪುರದಲ್ಲಿ ೭೭೦ ಲಿಂಗ ಪ್ರತಿಷ್ಠಾಪನೆಯ ಮಹಾ ಕಾರ್ಯದ ಮುಂದಾಳತ್ವವನ್ನು ಶಿವಾಚಾರ್ಯರು ವಹಿಸಿ ಮಾಡಿದ ಸೇವೆಯು ಸ್ಮರಣೀಯವಾಗಿ ಉಳಿದಿದೆ. ಬಂಥನಾಳ ಲಿಂ. ಸಂಗನಬಸವ ಶಿವಯೋಗಿಗಳು ಈ ಸಮಾರಂಭದ ಅಧ್ಯಕ್ಷ ಪದದ ಹೊರೆಯನ್ನು ಅವರಮೇಲೆ ಹೊರಿಸಿದ್ದರೆಂಬ ಮಾತನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಸಾರ್ವಜನಕ ಜೀವನವನ್ನು ಶ್ರೀಮಂತಗೊಳಿಸಿದ ಶ್ರೀಶಕ್ತಿ ಶಾಂತವೀರ ಶಿವಾ ಚಾರ್ಯರದು. ತಮ್ಮ ಸಂಪತ್ಪ್ರದಾನದಿಂದ ಶ್ರೀಮಂತಗೊಳಿಸಿದರು. ಸದ್ಗುಣ ಪ್ರದಾನ ದಿಂದ ಶಾಂತಗೊಳಿಸುತ್ತಿರುವರು. ಜನತೆಯ ಉದ್ಧಾರವೆ ಅವರ ಉಸಿರು. ನಿಸ್ವಾರ್ಥ ಸೇವೆಯೆ ಅವರ ಉದ್ದೇಶ. ಜನಹಿತವೇ ಅವರ ಹಿತ. ಮಠದ ಆಸ್ತಿ ಅಪಾರ. ಆದರೆ ಅದನ್ನೆಲ್ಲ ಜನ ಹಿತಕ್ಕಾಗಿ ವಿದ್ಯಾರ್ಜನೆಗಾಗಿ ತ್ಯಾಗಮಾಡಿದ್ದಾರೆ. ತ್ಯಾಗ ಮಾಡಲು ತಡಮಾಡರು. ಆಗ ಈಗ ಎಂದು ಹೇಳಿ ಮುಂದು ಮುಂದುಕ್ಕೆ ಹಾಕರು. ಮನಸ್ಸಿಗೆ ಬಂದೊಡನೆ ಮಾತಿಗಿಂತ ಮೊದಲು ಮಾಡಿ ಆಮೇಲೆ ಮಾತು. ಅವರ ತ್ಯಾಗಕ್ಕೆ ಬೇರೆಯವರ ಸಲಹೆ–ಸೂಚನೆಗಳು, ಪ್ರೇರಣೆ–ಪ್ರೋತ್ಸಾಹಗಳು ಬೇಕಾಗುವು ದಿಲ್ಲ; ಅವರು ಪಡೆಯುವುದಿಲ್ಲ. ಉತ್ತಮವಲ್ಲದ ಉದ್ದೇಶಗಳಿಗೆ ಅವರು ಮನಸ್ಸನ್ನು ಮಾಡುವುದೂ ಇಲ್ಲ. ಸಾರ್ವಜನಿಕ ಸದುದ್ದೇಶಗಳಿಗಾಗಿ ಹಣ ಕೊಡುವುದರಲ್ಲಿ ಅವರದು ಎತ್ತಿದ ಕೈ! 'ನನಗೆ ಇವೆಲ್ಲ ಏತಕ್ಕೆ ಬೇಕು? ಕೊಡುವವರು ಅವರೆ! ತೆಗೆದುಕೊಳ್ಳುವವರು ಅವರೆ!' ಎಂದು ಅಪ್ಪಣೆ ಮಾಡುತ್ತಾರೆ. ವೈಭವ ಜೀವನ ಅವರದಲ್ಲ. ಲೋಭಮನ ಅವರದಲ್ಲ. ಶಿವಾಚಾರ್ಯರ ಈ ಸುದೀರ್ಘ ಜೀವನ; ತ್ಯಾಗಮಯ ಜೀವನ; ಸ್ವಾರ್ಥರಹಿತ ಜೀವನ.

ಔದಾರ್ಯ ಎಂಬುದೊಂದು ಅಪೂರ್ವ ಐಶ್ವರ್ಯ. ಅದು ಸಾಂಸ್ಕಾರಿಕ ಹೃದಯಗುಣ. ಅದರ ಮುಂದೆ ಐಹಿಕ ಐಶ್ವರ್ಯ ಒಂದು ತೃಣ. ಅದರಿಂದ ಉದಾರ ಹೃದಯರು ಈ ಐಶ್ವರ್ಯವನ್ನು ಧಾರಾಳವಾಗಿ ದಾನ ಮಾಡುತ್ತಾರೆ. ದಾನಿಯಾಗುವುದು ಸುಲಭವೇನಲ್ಲ. ಅದರಲ್ಲಿಯೂ ಸಹಜ ದಾನಿಯಾಗುವುದು ಮತ್ತೂ ಸುಲಭವಲ್ಲ. ಸಹಜವಾದ ಮೈಗೂಡದೆ ಸದ್ಭಕ್ತನೆನಿಸನು ಶಿವಾದ್ವೈತದಲ್ಲಿ! ಭಕ್ತನಿಗೆ ಬೇಕೆಂದರೆ, ಭಕ್ತನನ್ನು ಸಂಸ್ಕರಿಸುವ ಗುರುವಿಗೆ ಬೇಡವೆ? ಜಂಗಮಗೆ ಬೇಡವೆ? ಅದು ಬರಬೇಕಾದರೆ ಕ್ರಿಯಾಕ್ಷಮತೆಯಿಂದ! ಸಕ್ರಿಯಾಶೀಲತೆ ಅದೊಂದು ಗುರು ಕರುಣೆಯ ಫಲ. ಗುರು ಕರುಣೆ ಅದೊಂದು ಶ್ರೇಷ್ಠ ಸಂಸ್ಕಾರ. ಆದರಿಂದ ಸತ್ಕ್ರಿಯಾವಿಷ್ಕಾರ. ಶಿಷ್ಯಸಾಧಕ ಶ್ರದ್ಧೆ ಅದಕ್ಕೆ ಒಡಗೂಡಿದರೆ ಸುಳಿದೆಗೆದು ಬೆಳೆವ

ಮರಕ್ಕೆ ನೀರು ಹುಯ್ದಂತೆ! ಆಗ ಅದು ಅಂತಃಕರಣದ ಆಳದಿಂದ ಹೊರಹೊಮ್ಮು ತ್ತದೆ ಸಹಜವಾಗಿ! ಕಾರ್ಯ ನಿರ್ವಹಣೆ ತ್ಯಾಗ ಕ್ಷಿತಜದ ರಸಫಲ. ಅಂತೆಯೇ ಶ್ರೀ ಶಾಂತವೀರ ಶಿವಾಚಾರ್ಯ ಮಹಾಸ್ವಾಮಿಗಳವರ ಸಹಜ ತ್ಯಾಗವೆಂಬ ಸಹಕಾರ ವೃಕ್ಷದಲ್ಲಿ ವಿವಿಧ ಕಾರ್ಯಗಳು ಫಲಿಸಿವೆ; ಪಕ್ವವಾಗಿವೆ.

ಶ್ರೀ ಶಾಂತವೀರ ಶಿವಾಚಾರ್ಯರದು ಊದಬತ್ತಿ (ಊದಿನ ಕಡ್ಡಿ) ಯಂತಹ ಜೀವನ. ಇದರಲ್ಲಿ ಯಾವ ಸಂಶಯವಿಲ್ಲ; ಅತಿಶಯೋಕ್ತಿಯಿಲ್ಲ. ತಾವು ನೊಂದರೂ ಉಳಿದವರು ನೋಯಬಾರದೆಂಬುದೇ ಅವರ ಜೀವನ ಜೀವಂತಸಾಧನ. ಸ್ವಾರ್ಥ ವನ್ನು ಸುಟ್ಟು ಪರಾರ್ಥವನ್ನುಂಟುಮಾಡುತ್ತಾರೆ. ಸರ್ವರಿಗೆ ಸದ್ವಾಸನೆಯನ್ನು ತುಂಬುತ್ತಾರೆ. ಪರಾರ್ಥವೇ ಅವರ ಸ್ವಾರ್ಥ. ಸಮಾಜಕ್ಕೆ ತಾವೇ ಒಂದು ಆರ್ಥ ವಾಗಿ ಪರಿಣಮಿಸಿದ್ದಾರೆ. ತಮಗೆ ವಿರೋಧಿಸಿದವರೊಡನೆ ಅವರೆಂದಿಗೂ ಪ್ರತಿ ಭಟಿಸುವುದಿಲ್ಲ. ಎದುರಿಸುವ ಎದೆಗಾರಿಕೆಯಿದ್ದರೂ ಎದುರಿಸುವುದಿಲ್ಲ. ಪ್ರತಿಯಾಗಿ ಅವರ ಪ್ರತಿಭಟನೆಯನ್ನು, ವಿರೋಧವನ್ನು ತಮ್ಮ ಸತ್ಸಾಧನೆಗೆ ಉಪಯೋಗಿಸಿ ಕೊಳ್ಳುತ್ತಾರೆ. ತಮ್ಮ ಸತ್ಸಾಧನೆಯ ಬಲದಿಂದ ಫಲದಿಂದ ಮರಳಿ ಅವರನ್ನೇ ಆಕರ್ಷಿಸುತ್ತಾರೆ.

ಅವರ ತ್ಯಾಗಕ್ಕೆ ಇಮ್ಮೊಗಗಳುಂಟು. ಒಂದು ಹಣ ತ್ಯಾಗ; ಇನ್ನೊಂದು ಹೃದಯ ಪೂರ್ಣತ್ಯಾಗ. ಗುಣತ್ಯಾಗವೆಂದರೆ ಗುಣಗಳನ್ನು ಬಿಟ್ಟುಬಿಡುವರೆಂದಲ್ಲ. ಗುಣಹೀನರೆಂದಲ್ಲ, ತಮ್ಮ ಸದ್ಗುಣಗಳನ್ನು ಪರರರಿಗೂ ಕಲಿಸುವರೆಂದರ್ಥ. ಸರ್ವ ರಿಗೂ ಸದ್ವಾಸನೆಯನ್ನು ಕರುಣಿಸುವರೆಂದರ್ಥ. ಅವರು ತಮ್ಮ ಚಿಕ್ಕ ವಯಸ್ಸಿ ನಿಂದಲೂ ಸದ್ಗುಣ ಶ್ರೀಮಂತರು; ಸದ್ಗುಣ ದಾನಿಗಳು. ಅವರಿಗೆ ಕೀರ್ತಿ ಕಾಸುಗಳ ಕಾಂಕ್ಷೆಯಿಲ್ಲ. ಸದ್ಗುಣಶೀಲರಾಗಬೇಕು; ಶಾಂತಿಶೀಲರಾಗಬೇಕು. ಇದನ್ನು ಎಲ್ಲರಿಗೂ ಹಂಚಬೇಕು. ಮಠದ ಹಣವನ್ನು ತ್ಯಾಗ ಮಾಡುವಂತೆ ತಮ್ಮ ಘಟನೆಯ ಈ ಸದ್ಗುಣ ಸಂಪತ್ತನ್ನು ತ್ಯಾಗಮಾಡುವ ಅಂದರೆ ಎಲ್ಲರ ಹಿತಕ್ಕಾಗಿ, ಕ್ಷೇಮಕ್ಕಾಗಿ ವ್ಯಯಿಸುವ ಸುಸ್ವಭಾವದವರು. ಎಲ್ಲಕ್ಕೂ ಮಿಗಿಲಾಗಿ ಕಲ್ಯಾಣಕಾರಕ ಕಾರುಣ್ಯ ಹೃದಯ ದಾತೃ ಗಳು. ಅವರ ಆ ಹೊಂಪುಳಿಯ ಹೃದಯ ಹೊನಲಿನಲ್ಲಿ ಮೀಯದವರಿಲ್ಲ. ಮಿಂದು ಮಡಿ ಮನಸ್ಕರಾದವರಿಲ್ಲ. ಅವರು ಸಂನ್ಯಾಸಯೋಗ, ಸದ್ವಿಚಾರಯೋಗ, ಸಹೃದಯ ಯೋಗ–ಈ ಮೂರರ ತ್ರಿವೇಣಿ ಸಂಗಮ. ಅಲ್ಲಿ ಹೋಗಿ ಮೀಯದವರು ಅಭಾಗ್ಯರು. ಆ ಸಂಗಮ ಸ್ನಾನಮಾಡಿದವರು ಅವರನ್ನು ಆದೆಂದಿಗೂ ಮರೆಯುವಂತಿಲ್ಲ. ಆ ಸಂಗಮೋದಕ ಪಾನಮಾಡಿದವರು ಸಂಸಾರ ಬಂಧನದಿಂದ ಸಾತಿಶಯ ತೃಷ್ಣೆಯಿಂದ ಪಾರಾಗದಿರರು. ಅವರ ಆ ಅಪೂರ್ವ ಕೊಡುಗೆಯಿಂದ ಎಂಥವರ ಹೃದಯಗಳನ್ನೂ ಅವರು ಗೆಲ್ಲುವರು. ಇದು ಔಪಚಾರಿಕ ಮಾತಲ್ಲ. ದಿಟಕ್ಕೆ ದಿಟವಾದ ಮಾತು.

ಅವರದು ನರ್ಹೇತುಕ ಭಾವ. ಪ್ರತಿಫಲಾಕಾಂಕ್ಷೆಯಿಂದ ಅವರು ಯಾರನ್ನೂ ಆಕರ್ಷಿಸುವುದಿಲ್ಲ. ಏನನ್ನೂ ಕೋರುವುದಿಲ್ಲ. ಅವರು ವೈಭವ ಜೀವಿಯಾಗಿದ್ದರಲ್ಲವೆ ಈ ಪ್ರವೃತ್ತಿ ಪ್ರವಾಹಕ್ಕೆ ಹೋಗುವುದು? ತಮ್ಮ ಸಿರಿ ಸಂಪತ್ತನ್ನ ತಾವು ಭೋಗಿಸದವರು. ಬೇರೊಬ್ಬರ ಸಿರಿ ಸಂಪತ್ತಿಗೆ ಏತಕ್ಕೆ ಬಾಯಾಕೆ ಬಿಟ್ಟಾರು? ಈ ಭಾವ ತಮಸ್ಸು ಅವರ ತ್ಯಾಗತೇಜಸ್ಸಿನ ಸುತ್ತು ಸುಳಿಯದು. ಸಾಮಾನ್ಯರು ಅವರ ಬಳಿ ಬಂದು ಅವರನ್ನು ನಂಬಿಸಿ ಅವರನ್ನು ಸುಲಿಗೆ ಮಾಡಿದವರು ನೂರಕ್ಕೆ ನೂರು ಜನ. ಅವರು ಯಾರೊಬ್ಬರ ಸ್ವತ್ತಿಗೂ ಆಶಿಸುವವರಲ್ಲ. ಆಶಿಸಿದ ಕಪ್ಪು ಚುಕ್ಕೆ ಅವರ ಆ ಬಾಳಿನ ಬೆಳುಗೋಡೆಯ ಮೇಲೆ ಬಿದ್ದಿಲ್ಲ. ಅವರು ತಮ್ಮ ಮಠದ ಸ್ವತ್ತನ್ನು ಧಾರೆಯೆರೆದಿರುವುದಲ್ಲದೆ ತಾವು ಹರಳೇಶ್ವರ ಪುಣ್ಯಕ್ಷೇತ್ರದಲ್ಲಿ ಆಚರಿಸಿದ ತೀವ್ರ ತಪಸ್ಸಿನ ಫಲವನ್ನೂ ಸರ್ವೋದ್ಧಾರಕ್ಕಾಗಿ ಧಾರೆಯೆರೆದಿದ್ದಾರೆ; ಎರೆಯುತ್ತಿದ್ದಾರೆ. ಜೀವನದಲ್ಲಿ ಜರ್ಜರಿತರಾದವರಿಗೆ ಜೀವಾಮೃತವನ್ನು ಕರುಣಿಸುವ ಮಹಾಮಹಿಮರು ಅವರು. ಸಂಜೆಯ ಮುಂದೆ ಹಲವು ದಿಕ್ಕುಗಳಿಂದ ಹಾರಿಬರುವ ಹಕ್ಕಿಗಳಿಗೆ ಆಶ್ರಯ ನೀಪ ಊರ ಮುಂದಿನ ಹೆಮ್ಮರದಂತೆ ಆಶ್ರಯದಾತರಾಗಿರುವರು ಶಾಂತವೀರ ಶಿವಾಚಾರ್ಯರು. ಆರ್ಥಿಕವಾಗಿ ಮಾನಸಿಕವಾಗಿ ಬೌದ್ಧಿಕವಾಗಿ ಆಧ್ಯಾತ್ಮಿಕವಾಗಿ ಪ್ರಾಪಂಚಿಕವಾಗಿ ನೊಂದು ಬೆಂದು ಬಂದವರು ಅವರಲ್ಲಿ ಆ ಆ ನಿಟ್ಟಿನ ಆಶ್ರಯವನ್ನು ಪಡೆಯುವರು; ಆನಂದವನ್ನು ಹೊಂದುವರು.

# ೯. ವಿಶಿಷ್ಟ ವಿಚಾರಧಾರೆ

**ಯಾಚನೆ ಉಚಿತವಲ್ಲ :**

ಸಾರ್ವಜನಿಕ ಸಂಸ್ಥೆಗಳಿಗೆ ನಿರಂತರ ಜನ ಧನ ಸಹಾಯ ಬೇಕು. ಆದರೆ ಒತ್ತಾಯ, ಬಿಡೆ ಮುರವತ್ತುಗಳಿಗೆ ಒಳಗಾಗಿ ಕೊಟ್ಟ ದಾನ ಕ್ಷಣಿಕವಾದುದು; ಅಸಹಜ ವಾದುದು. ಸ್ವಾಮಿಗಳು ಬಂದು ಬೇಡುತ್ತಾರೆಂದಾಗಲಿ, ದೊಡ್ಡವರು ಮನೆಬಾಗಿಲಿಗೆ ಬಂದಿರುವರೆಂದಾಗಲಿ ಕೊಡುವ ದಾನ ಸಾರ್ಥಕವಾಗದು. ಜನರು ಸ್ವಯಂಪ್ರೇರಣೆ ಯಿಂದ ಪವಿತ್ರ ಕಾರ್ಯಗಳಿಗೆ ಸಹಾಯ ಮಾಡಬೇಕು. ಅಂದರೆ ನಾವು ಕಟ್ಟುವ ಸಂಸ್ಥೆ ಪವಿತ್ರವಾಗಿ ಬೆಳೆದು ಬರುವುದು ; ಜನರ ಹೃದಯವೂ ಶುದ್ಧವಾಗುವುದು.

ಯಾಚನೆ ಮಾಡಬಾರದು. ಸ್ವಾರ್ಥಕ್ಕಾಗಲಿ, ಪರಾರ್ಥಕ್ಕಾಗಲೀ, ಯಾಚನೆ ಒಳ್ಳೆಯದಲ್ಲ. ಯಾಚನೆ ಮಾಡುವುದರಿಂದ ದಾನಿಯ ಭಾರವನ್ನು ನಾವು ಹೊರ ಬೇಕಾಗುತ್ತದೆ. ಇಂದಿನವರ ದಾನ ನಿಃಸ್ವಾರ್ಥ ದಾನವಲ್ಲ. ಸ್ವಾಮಿಗಳಿಗೆ ಇಂದು ದಾನ ಕೊಟ್ಟರೆ ನಾಳೆ ಅವರು ನಮ್ಮ ಯಾವುದೇ ಕೆಲಸ ಮಾಡಿಕೊಡುತ್ತಾರೆಂಬ ಉದ್ದೇಶವಿದ್ದೇ ಇರುತ್ತದೆ. ಈ ಉದ್ದೇಶ ಅನೇಕ ಸಲ ಸದುದ್ದೇಶವಾಗಿರುವುದಿಲ್ಲ. ಆಗ ನಾವು ತೊಂದರೆಯಲ್ಲಿ ಬೀಳಬೇಕಾಗುತ್ತದೆ.

ಭಕ್ತರು ತಮ್ಮ ಶಕ್ತಿ ಮೀರಿ ಕಾಣಿಕೆ ಅರ್ಪಿಸಿದರೆ, ಆಗ ಶಿವಾಚಾರ್ಯರು : "ನೀನು ಬಡವ. ಇಷ್ಟೊಂದು ಕಾಣಿಕೆಯನ್ನು ನೀನು ಕೊಡಬಾರದು. ಅದು ನಿನ್ನಲ್ಲಿಯೇ ಇರಲಿ. ಅದು ನಮ್ಮಿಂದ ನಿನಗೆ ಆಶೀರ್ವಾದ." ಎಂದು ಹೇಳಿ ತಿರುಗಿ ಕೊಟ್ಟು ಬಿಡುತ್ತಾರೆ. ಇಲ್ಲವೇ ಆಯಾ ಊರುಗಳಲ್ಲಿ ದಕ್ಷಿಣೆ ರೂಪದಲ್ಲಿ ಬಂದ ಹಣವನ್ನು ಅಲ್ಲಿಯ ಸಾರ್ವಜನಿಕ ಸಂಸ್ಥೆಗಳಿಗೆ ಕೊಟ್ಟುಬಿಡುತ್ತಾರೆ.

ಶಿವಾಚಾರ್ಯರದು ಹಾಲಿನಂತಹ ಹೃದಯ ; ತುಂಬಾ ಸರಳ. ಯಾರ ಮನ ಸ್ಸನ್ನು ಎಂದೂ ನೋಯಿಸರು. ಅವರಲ್ಲಿಗೆ ಯಾರೇ ಬರಲಿ ನಂಬುತ್ತಾರೆ. ಅವರ ಆ ನಂಬಿಗೆಯನ್ನು ದುರುಪಯೋಗ ಮಾಡಿಕೊಂಡರೆ ಹೆಚ್ಚು. ಅವರ ಬಾಳಿ ನುದ್ದಕ್ಕೂ ಅವರನ್ನು ಅನೇಕರು ವಂಚಿಸಿದ್ದಾರೆ. ಆದರೆ ಶಿವಾಚಾರ್ಯರು ಈ ಬಗೆಗೆ ಎಂದೂ ಹಳಹಳಿಸಿಲ್ಲ. ಮರಳಿ ಅದೇ ಜನರನ್ನು ಅವರು ನಂಬುತ್ತಾರೆ. ಎಲ್ಲ ಕೆಲಸಕ್ಕೆ ಅವರನ್ನೆ ಮುಂದೆ ಮಾಡುತ್ತಾರೆ. ಇದನ್ನು ನೋಡಿ ಕೆಡಕೆನಿಸಿ ಯಾರಾದರು,

ತಾವು ಮತ್ತೆ ಅವರನ್ನೆ ನಂಬುತ್ತೀರಲ್ಲಾ– ಎಂದು ಕೇಳಿದರೆ, ಶಿವಾಚಾರ್ಯರು ಮುಗುಳು ನಗೆ ನಗುತ್ತ ಹೀಗೆ ಹೇಳುತ್ತಾರೆ: "ಒಳ್ಳೆಯವರು ಕೆಟ್ಟವರು ಎಲ್ಲರೂ ಇರ ಬೇಕು. ಒಳ್ಳೆಯವರು ಎಲ್ಲ ಕಡೆಗೂ ಒಳ್ಳೆಯವರಾಗಿರುತ್ತಾರೆ. ಗುರು ಅವರ ಬಗೆಗೆ ಚಿಂತಿಸಬೇಕಾಗಿಲ್ಲ. ಆದರೆ ದುಷ್ಟರನ್ನು ದೂರ ಬಿಟ್ಟರೆ ಅವರು ಮತ್ತಷ್ಟು ದುಷ್ಟ ರಾಗುತ್ತಾರೆ. ಅವರಿಗೆ ತಮ್ಮ ತಪ್ಪು ತಿದ್ದಿಕೊಳ್ಳಲು ಮತ್ತೆ ಮತ್ತೆ ಅವಕಾಶ ಕೊಡಬೇಕು. ಒಂದೆರಡುಸಲ ತಪ್ಪು ಮಾಡಿದಾಕ್ಷಣ ಅವರನ್ನು ದೂರ ಮಾಡ ಬಾರದು. ಅದರಿಂದ ಅವರು ಸುಧಾರಿಸದೆ ಮತ್ತಿಷ್ಟು ಕೆಡುತ್ತಾರೆ. ಅವರೂ ಮನುಷ್ಯರು ಅದೆಷ್ಟು ಸಲ ತಪ್ಪು ಮಾಡುತ್ತಾರೆ? ಅದೆಷ್ಟು ಸಲ ಮೋಸ ಮಾಡ ಬಹುದು? ಒಂದಿಲ್ಲೊಂದು ದಿನ ಅವರಲ್ಲಿ ತಿಳುವಳಿಕೆ ಮೂಡೀತು! ಅಂಥ ವರನ್ನು ದಾರಿಗೆ ತರುವುದೇ ಗುರುಗಳ ಕೆಲಸ."

### ಗುರುತ್ವದ ಹಕ್ಕು :

ಕಲ್ಯಾಣದಲ್ಲಿ ವೀರಶೈವ ಮಹಾಸಭೆ ಏರ್ಪಟ್ಟಿತ್ತು. ಅದಕ್ಕೆ ಅಧ್ಯಕ್ಷರಾಗಿ ಶ್ರೀ ಬಂಥನಾಳ ಸ್ವಾಮಿಗಳವರು ಆಯ್ಕೆಯಾಗಿದ್ದರು. ಅದಕ್ಕಾಗಿ ಶಿವಾಚಾರ್ಯರು ತುಂಬಾ ಸಂತಸಗೊಂಡು ಅವರನ್ನು ಕಾಣಲು ಬಂದಿದ್ದರು. ಒಂದು ತಮ್ಮ ಸಲಹೆ ಯನ್ನು ಅವರ ಮುಂದಿರಿಸುವರು.

"ಇಷ್ಟು ದಿನ ದೊಡ್ಡ ದೇಸಾಯಿ-ದೇಶಮುಖರು, ಉಚ್ಚ ಅಧಿಕಾರಿಗಳು ರಾಜಕಾರಣಿಗಳು, ಉನ್ನತ ಸಿರಿವಂತ ಭಕ್ತ ಜನರು–ಇಂಥವರ ಕೈಯಲ್ಲಿ ಅಧ್ಯಕ್ಷ ಪದ ಸಿಕ್ಕಿತ್ತು. ಆದರೆ ಈ ಸಲ ತಮ್ಮಂತಹ ಒಬ್ಬ ಜಂಗಮ ಸ್ವಾಮಿಗಳಿಗೆ ದೊರ ತದ್ದು ಬಹಳೆ ಒಳಿತಾಗಿದೆ. ಆದ್ದರಿಂದ ಈ ಸಲದ ಮಹಾ ಸಭೆಯಲ್ಲಿ ತಾವೊಂದು ತೀರ ಮಹತ್ವದ ವಿಷಯವನ್ನು ಮಂಡಿಸಬೇಕು. ಅದೆಂದರೆ: "ವೀರಶೈವ ಸಮಾಜ ದಲ್ಲಿ ಕಲಹಕ್ಕೆ ಕಾರಣವಾದ ಗುರುತ್ವದ ಹಕ್ಕು ಕೇವಲ ಪಂಚಮಸಾಲಿ ಲಿಂಗವಂತರಿ ಗಷ್ಟೆ ಮೀಸಲಾಗಿದೆ. ಇದನ್ನು ಅಳಿಸಿ ಹಾಕಿ ಇನ್ನು ಮುಂದೆ ಅಷ್ಟಾವರಣಾಂತರ್ಗತ ಸಮರ್ಥ ವೀರಶೈವ ಭಕ್ತರಿಗೆಲ್ಲ ಗುರುತ್ವದ ಹಕ್ಕು ಬರುವಂತೆ ನಿರ್ಣಯವನ್ನು ತಾವು ಘೋಷಿಸಿಬಿಡಿರಿ." ಎಂದು ಹೇಳಲು ಇದನ್ನು ಬಂಥನಾಳ ಶ್ರೀಗಳವರು ಹರುಷ ದಿಂದೊಪ್ಪಿಕೊಂಡರು. ಇದು ಶಿವಾಚಾರ್ಯರ ವಿಶಾಲ ಮನೋಭಾವವಲ್ಲವೆ?

### ಸಾಂಪ್ರದಾಯಶೀಲರಲ್ಲ :

ಒಮ್ಮೆ ಬಾಗಿಲುಕೋಟೆಯಲ್ಲಿ ಡಾ| ಮೋದಿಯವರ ನೇತ್ರ ಚಿಕಿತ್ಸಾ ಶಿಬಿರು ನಡೆದಿತ್ತು. ಇದನ್ನು ಕೇಳಿ ಶಿವಾಚಾರ್ಯರು ತಮ್ಮ ದೃಷ್ಟಿ ಚಿಕಿತ್ಸೆಗಾಗಿ ಅಲ್ಲಿಗೆ ದಯಮಾಡುವರು. ನೇತ್ರಕ್ಕೆ ಶಸ್ತ್ರ ಚಿಕಿತ್ಸೆಯೂ ಆಯಿತು. ಆದರೆ ಅದರಿಂದ ಬೇರೊಂದು ದುಷ್ಪರಿಣಾಮವುಂಟಾಯಿತು. ಕತ್ತು ಕಂಪಿಸಿದರೆ ಕಣ್ಣಲ್ಲಿ ರಕ್ತ ಹನಿಯು

ತ್ರಿತ್ತು. ಏನು ಮಾಡಿದರೂ ನಿಲ್ಲದಾಯಿತು. ಇದಕ್ಕಾಗಿ ೨-೩ ತಿಂಗಳ ಕಾಲ ಉಪಚಾರ ಪಡೆಯಬೇಕಾಯಿತು. ಸ್ನಾನ ಶಿವಪೂಜೆಗಳಿಗೆ ತುಂಬಾ ತೊಂದರೆಯುಂಟಾಯಿತು. ಆದರೂ ಕೈಬಿಡದೆ ಇನ್ನೊಬ್ಬರಿಂದ ಸೂತ್ರಸಂಪರ್ಕವಿಡಿದು ಪೂಜೆ ಪುನಸ್ಕಾರಗಳನ್ನು ಮಾಡಿಸುತ್ತಿದ್ದರು. ಹೀಗಿರಲು ಒಂದು ದಿನ ಒಬ್ಬ ಜಂಗಮಶ್ರೀಗಳು ಬಂದು ಇದನ್ನು ನೋಡಿ ಸಹಿಸದೆ, "ತಾವು ಬಿದರಿಯ ಕುಮಾರ ಶಿವಯೋಗಿಗಳಂತಹ ಕಟ್ಟಾಚಾರವಂತ ಕ್ರಿಯಾಮೂರ್ತಿಯ ಹಸ್ತದಿಂದ ದೀಕ್ಷಾಬದ್ಧರು; ಅನುಗ್ರಹೀತರು. ನೀವು ಈ ರೀತಿ ಆಚಾರ ಸಡಲಿಸುವುದು ಸರಿಯಲ್ಲ."

ಶ್ರೀಗಳೇ, ನೀವು ತಿಳಿದಂತೆ ಜಲಸ್ನಾನವೊಂದೇ ಸ್ನಾನವಲ್ಲ. ಜೊತೆಗೆ ಭಸ್ಮಸ್ನಾನ, ವಾಯು ಸ್ನಾನಗಳೂ ವಿಹಿತವಾಗಿವೆ. ಇವೆರಡನ್ನೂ ನಾನು ಮಾಡುತ್ತಿದ್ದೇನೆ. ನಿತ್ಯ ಲಿಂಗದ ಮೇಲೆ ನೀರೆರೆಯಿಸುತ್ತಿದ್ದೇನೆ. ಇದರಿಂದಾಗಿ ಕ್ರಿಯೆ ಏನು ಕಡಿಮೆಯಾಗಿದೆಯೆಂದೆನಿಸದು. ನನಗಿರುವ ಈಗಿನ ಪರಿಸ್ಥಿತಿಯನ್ನು ನೋಡಿದರೆ ಇಷ್ಟನ್ನೂ ಕೂಡ ಆಚರಿಸುವುದು ಕಷ್ಟಕರ. ಅಲ್ಲದೆ ಇದಕ್ಕೆ ಪ್ರಮಥರ ವಚನದ ಅಭಯವೂ ಉಂಟು. "ಶಿವನು ಕರುಣಿಸಿದ ಈ ಪ್ರಸಾದ ಕಾಯವನ್ನು ಕೆಡಿಸಬಾರದು"– ಎಂದು! ಇದನ್ನು ಹೇಳಿದವರು ಇನ್ನಾರಲ್ಲ; ಸಾಕ್ಷಾತ್ ಬಸವಣ್ಣ; ವೀರಶೈವ ನಿರ್ಣಯ ಪರಮಾವತಾರಿ. ಈ ಉಕ್ತಿ ನಿಮಗೆ ಗೊತ್ತಿರಲು ಸಾಕು. ಹೀಗಿದ್ದ ಮೇಲೆ ಕಾಯಾರೋಗ್ಯವನ್ನು ಕಡೆಗಣಿಸಿ ಕಟ್ಟಾಚರಣೆಗೆ ಜೋತು ಬೀಳುವುದು ಶರಣ ಧರ್ಮಕ್ಕೆ ವಿರೋಧವಾದದ್ದು. ಅಲ್ಲದೆ, ಆಪತ್ಕಾಲದಲ್ಲಿ ದಯೆ ತೋರಿಸದ ಧರ್ಮ ಧರ್ಮವೇ ಅಲ್ಲ. 'ದಯವೇ ಧರ್ಮದ ಮೂಲ' ವೆಂದು ಅದೇ ಬಸವಣ್ಣನ ಧರ್ಮದ ನಿರೂಪಣೆ. ಸಂಕಷ್ಟ ಕಾಲದಲ್ಲಿ ಧರ್ಮೀಯನನ್ನು ಎತ್ತಿ ಹಿಡಿಯದ ಧರ್ಮ ಕ್ರೂರ ಧರ್ಮ. ಅಂತಹ ಧರ್ಮವನ್ನು ನಾನು ಮೆಚ್ಚುವುದಿಲ್ಲ. ದಯೆ ಕರುಣೆಗಳಿಲ್ಲದ ಧರ್ಮ ಅದೊಂದು ಧರ್ಮವೇ ? ಅಂತಹ ಯಾವುದಾದರೂ ಧರ್ಮ ಅಸ್ತಿತ್ವದಲ್ಲಿದ್ದರೆ ಅದಕ್ಕೆ ನಾನು ಬಹಿಷ್ಕಾರ ಹಾಕುತ್ತೇನೆ ;– ಎಂದು ಶಿವಾಚಾರ್ಯರು ಗಂಭೀರವಾಗಿ ನುಡಿಯಲು, ಇವರನ್ನು ಕೆಣಕಿದ ಅಭ್ಯಾಗತ ಜಂಗಮನಿಗೆ ಸಾಕು ಬೇಕಾಯಿತು. ಶ್ರೀಗಳಿಗೆ ಕೈಮುಗಿದು, ಸರಿ ಹೋಯ್ತು ; ತಮ್ಮ ಮುಂದೆ ನಮ್ಮ ಪುಂಗಿ ಬಂದಾಯಿತು. ಬರುತ್ತೇನೆ ನಮಸ್ಕಾರ ಎಂದು ನುಡಿದು ಸಿಟ್ಟುಗೊಂಡವರಂತೆ ಆಸ್ಪತ್ರೆಯಿಂದ ಬೇಗ ಬೇಗ ನಡೆದು ಹೊರಕ್ಕೆ ಹೋಗಿ ಬಿಡುವರು. ಶಿವಾಚಾರ್ಯರು ಸದಾಚಾರಶೀಲರಾದರೂ ಸಂಪ್ರದಾಯ ಶೀಲರಲ್ಲ, ವೈಚಾರಿಕ ಕ್ರಾಂತಿ ಅವರದು. ಮಾನಸಿಕ ಶುಚಿ ರುಚಿ ಅವರದು.

**ಸಂಸಾರದಲ್ಲಿ ಹೊಸ ಹೆಜ್ಜೆ :**

ಹಲಗಲಿ ಶಿವಸಿದ್ದಪ್ಪ ಸರನಾಯಕರ ತಮ್ಮಂದಿರಾದ ಮಂಟೂರ ಡಾ|| ಬಾಳಾಸಾಹೇಬ ಸರನಾಯಕರು ತುಂಬಾ ಪ್ರತಿಭಾವಂತ ವಿದ್ಯಾರ್ಥಿ. ಭಾರತದಲ್ಲಿನ ವೈದ್ಯಕೀಯ ಶಾಸ್ತ್ರದಲ್ಲಿ ಕಲಿಯಬಹುದನ್ನೆಲ್ಲ ಕಲಿತು, ಹೆಚ್ಚಿನ ವಿದ್ಯೆಗಾಗಿ 'ಆಸ್ಟ್ರಿಯಾ'ಕ್ಕೆ

ಹೋಗಿದ್ದರು. ಅಲ್ಲಿಂದ ಮರಳಿ ಬರುವಾಗ ತನ್ನನ್ನು ಮೆಚ್ಚಿ ಬಂದ ಅಲ್ಲಿನ ಒಬ್ಬ ಬಿಳಿಯ ಕನ್ನೆಯನ್ನು ಕರೆತರುವರು. ಲಗ್ನವಾಗುವ ಮುನ್ನ ವೀರಶೈವ ಧರ್ಮಕ್ಕೆ ಸೇರಿಸಿಕೊಳ್ಳಬೇಕು. ಹಾಗೆ ಸೇರಿಸಿಕೊಳ್ಳದಿದ್ದರೆ ಕ್ರೈಸ್ತ ಧರ್ಮಕ್ಕೆ ಸೇರಬೇಕು ಎಂದು ಇಬ್ಬರಲ್ಲಿ ಒಪ್ಪಂದವಾಗಿತ್ತು. ಇದಕ್ಕಾಗಿ ಸರನಾಯಿಕರು ಒಬ್ಬಿಬ್ಬರು ವೀರಶೈವ ಮುಖಂಡರೊಡನೆ ಹಲವಾರು ಮಠಗಳಿಗೆ ಹೋದರು. ಎಲ್ಲಿಯೂ ಸರಿಯಾದ ಸಮ್ಮತಿ ದೊರೆಯದಾಯಿತು. ಸಮ್ಮತಿಯಿತ್ತವರು ಹೆಚ್ಚಾಗಿ ಪ್ರತಿಫಲಾಕಾಂಕ್ಷಿಗಳಾಗಿದ್ದರು. ಇದು ಇವರಿಗೆ ಸರಿಹೋಗದಾಯಿತು.

ಹೀಗಿರಲು ಒಮ್ಮೆ ಬಬಲೇಶ್ವರಕ್ಕೆ ಬರುವರು. ಬಂದು ಶಿವಾಚಾರ್ಯರನ್ನು ಸಂದರ್ಶಿಸುವರು. ತಮ್ಮ ಬಯಕೆಯನ್ನು ಬಿನ್ನವಿಸಿಕೊಳ್ಳುವರು. ಶಿವಾಚಾರ್ಯರು ಸಂತೋಷವಾಗಿ ಒಪ್ಪಿಕೊಳ್ಳುವರು. ನಾಯಿಕರು ಅದಕ್ಕಾಗಿ ಎಷ್ಟು ಹಣ ಕೊಡಬೇಕೆಂದು ಕೇಳುವರು. ಆಗ ಶಿವಾಚಾರ್ಯರು, ಏನು ? ದೀಕ್ಷೆಯನ್ನು ದುಡ್ಡಿಗೆ ಮಾರಿಕೊಳ್ಳಬೇಕೆ ? ಮಾರಿಕೊಳ್ಳುವುದು ದಿಟವಾದ ದೀಕ್ಷೆಯೆ ? ಒಂದು ಕಾಸೂ ಬೇಕಿಲ್ಲ. ಈಗ ಈ ದೀಕ್ಷೆಯನ್ನು ಕ್ರಾಂತಿಕಾರಿ ಹೆಜ್ಜೆಯಾಗಿ ನಿರ್ವಹಿಸುತ್ತೇವೆ. ಲಿಂಗವಂತರನ್ನು ಕ್ರೈಸ್ತ ಧರ್ಮಕ್ಕೆ ಮತಾಂತರಗೊಳಿಸುವ ಕಾರ್ಯ ನಿತ್ಯವೂ ನಡೆದೇ ಇದೆ. ಆದರೆ ಆ ಕ್ರೈಸ್ತ ಧರ್ಮದಿಂದ ವೀರಶೈವ ಧರ್ಮಕ್ಕೆ ಮತಾಂತರಗೊಳಿಸುವ ಕಾರ್ಯ ನಡೆಯುತ್ತಿಲ್ಲ. ಈಗ ತಾನಾಗಿ ಮೆಚ್ಚಿ ಬಂದ, ಶಾಖಾಹಾರಕ್ಕೆ ಒಪ್ಪಿನಿಂದ ಈ ಕ್ರೈಸ್ತ ಮಹಿಳೆಯನ್ನು ಸಂತೋಷದಿಂದ ಸ್ವೀಕಾರ ಮಾಡಬೇಕಾದುದು ನಮ್ಮ ಕರ್ತವ್ಯ. ಇಂತಹ ಕಾರ್ಯ ಇದುವರೆಗೆ ನಮ್ಮಲ್ಲಿ ಯಾವ ಸ್ವಾಮಿಗಳೂ ಮಾಡಿಲ್ಲ. ಇದನ್ನು ಒಂದು ನೂತನ ಕ್ರಾಂತಿಕಾರಕ ದಿಟ್ಟ ಹೆಜ್ಜೆಯೆಂದು ಬಗೆದು ಕೈಕೊಳ್ಳಲು ಮನಸ್ಸು ಮಾಡಿದ್ದೇವೆ. ನಾವು ಹೇಳಿದಂತೆ ನೀವು ಕೇಳತಕ್ಕದ್ದು ಎಂದೆನ್ನಲು, ನಾಯಿಕರ ತಂಡಕ್ಕೆ ಸಾತಿಶಯ ಸಂತಸವಾಯಿತು. ಶಿವಾಚಾರ್ಯರ ಈ ಸಾಂಸ್ಕಾರಿಕ ಪ್ರಗತಿಪಥ ಶಪಥಕ್ಕೆ ಹಿಗ್ಗಿ ಅವರ ಶ್ರೀ ಚರಣಕ್ಕೆ ಶರಣಾರ್ಥಿ ಸಲ್ಲಿಸುವರು.

ನಿರ್ದಿಷ್ಟವಾದಂತೆ ದೀಕ್ಷೆಯ ದಿನಕ್ಕೆ ಮೊದಲ ದಿನ ವಿಜಾಪುರಕ್ಕೆ ಎಲ್ಲರೂ ಬರುವರು. ಅಲ್ಲಿರುವ ಶಘರ್ಡ ಹಾಲಿನಲ್ಲಿ ಸೇರುವರು. ಶ್ರೀ ಶಾಂತವೀರ ಶಿವಾಚಾರ್ಯರೂ ದಯಮಾಡಿಸುವರು. ಮರುದಿನ ಮಾಡಬೇಕಾದ ಶಿವದೀಕ್ಷಾ ಸಂಸ್ಕಾರ ಸಮಾರಂಭದ ಸಿದ್ಧತೆಗಾಗಿ ಬೇಕಾದ ಸಾಹಿತ್ಯವನ್ನು ಹೊಂಚುವ ಕೆಲಸ ನಡೆದಿತ್ತು. ಮನಗೂಳಿ ಶ್ರೀಗಳವರು ವಿಜಾಪುರದ ಪ್ರಮುಖರು ಶಿವಾಚಾರ್ಯರೊಡನೆ ಮಾತಾಡುತ್ತಿದ್ದರು. ಅಷ್ಟರಲ್ಲಿ ಇಳಕಲ್ಲಿನಿಂದ ಒಬ್ಬ ಜಂಗಮ ಬರುವನು. ಬಂದು ಬಬಲೇಶ್ವರದ ಶಿವಾಚಾರ್ಯರು ಎಲ್ಲಿರುವರು ? ಎಂದು ಅವರನ್ನೇ ಕೇಳುವನು. ಪಕ್ಕದಲ್ಲಿದ್ದ ಅಂಗಡಿ ವಕೀಲರು ಅವರೇ ಬಬಲೇಶ್ವರದ ಶಿವಾಚಾರ್ಯರೆಂದು ತಿಳಿಸುವರು. ತಿಳಿಸಿ ಅವರಲ್ಲಿ

ನಿಮಗೇನು ಕೆಲಸ? ವೈಯಕ್ತಿಕವಾಗಿ ನನಗೇನೂ ಕೆಲಸವಿಲ್ಲ. ಸಾಮಾಜಿಕವಾಗಿ ಇದೆ. ಅದೇನು ಸಾಮಾಜಿಕ ಕಾರ್ಯ? ಅವರು ನಾಳೆ ಒಬ್ಬ ಕ್ರೈಸ್ತ ಕನ್ನೆಗೆ ದೀಕ್ಷೆ ಕೊಡಲಿದ್ದಾರಂತೆ. ಅದರ ಬಗೆಗೆ ಮಾತನಾಡಬೇಕಾಗಿದೆ. ಎಂಬುದನ್ನು ಶಿವಾಚಾರ್ಯರು ಕೇಳಿ ತಾವೇ ಆತನೊಡನೆ ಮಾತಾಡಲು ಮೊದಲು ಮಾಡುವರು.

ಏಕೆ? ಅದು ನಿಮಗೆ ಸಮ್ಮತವಿಲ್ಲವೆ? ಹೇಗಿದ್ದೀತು? ಎಳ್ಳಷ್ಟೂ ಸಮ್ಮತವಿಲ್ಲ. ತಮಗಾದರೂ ಇದು ಹೇಗೆ ಸಮ್ಮತವೆನಿಸಿತು? ಮಾಂಸ ಮದ್ಯ ಭಕ್ಷಕರಾದ ಭವಿಗಳಾದ ಕೆಂಪು ಮುಖದವರನ್ನು ಅಕಳಂಕ ಆಚರಣೆಯಿಂದ ಕೂಡಿದ ನಮ್ಮ ಲಿಂಗವಂತ ಧರ್ಮದಲ್ಲಿ ಸೇರಿಸಿಕೊಳ್ಳುವುದೆಂದರೇನು? ಇದೊಂದು ಹೊಲಸು ಕೆಲಸ. ನಮ್ಮ ಧರ್ಮ ಕೆಡಿಸುವ ನಿಕೃಷ್ಟ ಕೃತ್ಯ. ಇದಕೇಕೆ ನೀವು ಮನಸ್ಸು ಮಾಡಿದಿರಿ? ಇದರಿಂದ ನಿಮ್ಮ ಕೀರ್ತಿಗೆ ಕಲಂಕ ಬಾರದೇನು? – ಎಂದೆನ್ನಲು, ಅದಕ್ಕೆ ಶಿವಾಚಾರ್ಯರು : ಏನ್ರಿ, ನೀವು ಹೇಳೋದು? ದಳ್ಳುರಿಗೆ ಹುಲ್ಲು ಹಾಕಿದರೆ ದಳ್ಳುರಿ ಕೆಡುವುದೆ? ಹಿಂದೆ ಬಸವಣ್ಣನವರು ಚರ್ಮ ಸುಲಿಯುವ ಚಮ್ಮಾರರನ್ನು, ಮಾಂಸ ತಿನ್ನುವ ಮಾದರರನ್ನು, ಹಂದಿ ತಿನ್ನುವ ಗೊರವರನ್ನು, ಹೊಲಸು ತಿನ್ನುವ ಹೊಲೆಯರನ್ನು, ಹೆಂಡ ಕುಡಿವ ಹೀನರನ್ನು ದೀಕ್ಷೆ ಕೊಟ್ಟು ಪವಿತ್ರವಾಗಿಸಿ ಧರ್ಮದಲ್ಲಿ ಸೇರಿಸಲಿಲ್ಲವೆ?

ಅಬ್ಬಬ್ಬಾ! ಆ ಭಕ್ತಿ ಭಂಡಾರಿ ಬಸವಣ್ಣನಿಗಿರುವ ಶಕ್ತಿ ನಿಮಗಿದೆಯೆ? ಆ ಶಕ್ತಿ ನನ್ನಲ್ಲಿಲ್ಲ, ನಾನೊಪ್ಪುತ್ತೇನೆ. ಆದರೆ, ಆ ಬಸವಣ್ಣನವರು ಯಾವ ಪಂಚಾಕ್ಷರ ಮಹಾ ಮಂತ್ರದಿಂದ ಅವರನ್ನೆಲ್ಲ ಪಾವನಗೊಳಿಸಿದರೋ ಆ ಮಂತ್ರವಿಂದು ಏನಾಗಿದೆ? ಅದರ ಸತ್ವ ಹಾಳಾಗಿದೆಯೆ? ಸತ್ತು ಹೋಗಿದೆಯೆ? ಎಂದು ನಸುಮುನಿಸಿನಿಂದಲೆ ಕೇಳುವರು. ಮಹಾನುಭಾವಿಗಳು ಮುನಿದರೂ ಚೆನ್ನ. ಒಲಿದರೂ ಚೆನ್ನ.

ಛೇ! ಮಂತ್ರ ಹೇಗೆ ಸಾಯ್ತದರಿ? ಎಂದು ತಕ್ಷಣ ಜಂಗಮ ಕೇಳುವನು.

ಅದು ಸತ್ತಿಲ್ಲ, ಅದು ನಿತ್ಯ ನೂತನ; ಸತ್ಯ ಚೇತನ. ಒಪ್ಪುವಿರಾ ಜಂಗಮರೆ? ಒಪ್ತೇನೆ!

ಅಂದ ಮೇಲೆ ಅಂದು ಬಸವಣ್ಣ ದೀಕ್ಷೆ ಕೊಟ್ಟ–ಕೊಡಿಸಿದವರಿಗಿಂತ ತೀರ ಅಜ್ಞಳೆ ಈ ಕ್ರೈಸ್ತ ಹೆಣ್ಣು ಮಗಳು? ತೀರಾ ಕೀಳಾದವಳೆ? ಸಂಸ್ಕೃತಿ ಹೀನಳೆ? ವಿದ್ಯೆಯಲ್ಲಿ ಮುಂದಿದ್ದಾಳೆ; ಸಂಸ್ಕೃತಿಯಲ್ಲಿ ಪ್ರಗತಿ ಸಾಧಿಸಿದ್ದಾಳೆ. ಮಿಗಿಲಾಗಿ ನಮ್ಮೀ ಧರ್ಮ ತತ್ವಕ್ಕೆ ಮೆಚ್ಚಿಕೊಂಡಿದ್ದಾಳೆ. ಮಾಂಸಾಹಾರ ಬಿಡಲೊಪ್ಪಿದ್ದಾಳೆ, ಬಿಟ್ಟಿದ್ದಾಳೆ. ಇಂಥವಳಿಗೆ ನಾನೀಗ ದೀಕ್ಷೆ ಕೊಡುತ್ತಿದ್ದೇನೆ. ಕೊಡುತ್ತಿರುವುದು ನನ್ನ ಶಕ್ತಿಯಿಂದ ಮಾತ್ರವಲ್ಲ; ಆ ಯಾವ ಶಕ್ತಿಶಾಲಿಯಾದ ಪಂಚಾಕ್ಷರೀ ಮಹಾ

ಮಂತ್ರದ ಶಕ್ತಿ ಸಹಾಯದಿಂದ! ಇದು ತಪ್ಪೆ? ಇದರಿಂದ ಧರ್ಮ ದೂಷಿತವಾಗು ವುದೆ? ದೇಶದ ಕಾಷ್ಠವಾದರೇನು? ವಿದೇಶಿಯ ಕಾಷ್ಠವಾದರೇನು? ಸುಟ್ಟ ಬಳಿಕ ಪೂರ್ಣ ಗುಣಭೇದಗಳಿರುವವೆ? ಭೌತಾಗ್ನಿಗಿಂತ ದೀಕ್ಷಾಗ್ನಿ ಬಲ ಬೃಹತ್ತಾ ದುದಲ್ಲವೆ? ದೀಕ್ಷೆಗೆ ಬೆಲೆಯಿಲ್ಲವೆ? ಬಲವಿಲ್ಲವೆ?

ಶಿವಾಚಾರ್ಯರ ಈ ಸೈದ್ಧಾಂತಿಕ ಮಾತುಗಳನ್ನು ಕೇಳಿ ಬಂದ ಜಂಗಮ ಬೆಕ್ಕಸ ಬೆರಗಾಗುವನು. ಶಿವಾಚಾರ್ಯರ ನಿರ್ಧಾರಕ್ಕೆ ತಲೆ ಬಾಗುವನು. ಬೆಲೆ ಕೊಡುವನು.

ಮರು ದಿನ ಮತ್ತಿಷ್ಟು ಹುಮ್ಮಸ್ಸಿನಿಂದ ಹರುಷದಿಂದ ಎಲ್ಲರೂ ಕೆಲಸ ಮಾಡುವರು. ಶಿವಾಚಾರ್ಯರು ತಮ್ಮ ಯೋಚನೆ ಯೋಜನೆಗಳಂತೆ ಉಲ್ಲಾಸದಿಂದ ಎಲ್ಲ ಬಗೆಯ ಸಿದ್ಧತೆಗಳೊಂದಿಗೆ ಯಥೋಕ್ತವಾಗಿ ಯಶಸ್ವಿಯಾಗಿ ಶಿವದೀಕ್ಷಾ ಸಂಸ್ಕಾರ ವನ್ನು ಮಾಡಿ ಮುಗಿಸುವರು. ಧರ್ಮದ ದೀಕ್ಷೆಯ ವ್ಯಾಪ್ತಿಯನ್ನು ಹೆಚ್ಚಿಸುವರು; ದೀಪ್ತಿಯನ್ನು ಹೆಚ್ಚಿಸುವರು.

ಬಬಲೇಶ್ವರದ ಶ್ರೀ ಶಿವಾಚಾರ್ಯರು ಕೈಕೊಂಡು ನೆರವೇರಿಸಿದ ಈ ಕ್ರಾಂತಿಕಾರೀ ಸಂಸ್ಕಾರ ಸಾಧನೆ ಇಡೀ ಕರ್ನಾಟಕದಲ್ಲಿಯೆ ಅಪ್ರತಿಮ ಎಂದು ಪ್ರತೀತಿ ಎಲ್ಲೆಡೆಯಲ್ಲಿ ಪ್ರಚಲಿತವಾಯಿತು. ಸಾಂಪ್ರದಾಯಿಕ, ಸಾಮಾಜಿಕ ಸಮಸ್ಯೆಗಳನ್ನು ವೈಚಾರಿಕ ದೃಷ್ಟಿಯಿಂದ ವಿಶ್ಲೇಷಿಸುವ ಕೈಕೊಳ್ಳುವ ಸುಸ್ವಭಾವ ಶಾಂತವೀರ ಶಿವಾಚಾರ್ಯರದು. ನಿಸ್ವಾರ್ಥತೆಯಿಂದ ದೂರದೃಷ್ಟಿಯಿಂದ ಸಂಸ್ಕಾರ ಕಾರ್ಯವನ್ನು ದಿಟ್ಟತನದಿಂದ ಮಾಡಿ ಪ್ರಗತಿಶೀಲರೆನಿಸಿದರು.

### ಭೂತ ಪ್ರೇತಗಳ ಬಗೆಗೆ ಅಭಿಮತ:

ಶ್ರೀ ಶಾಂತವೀರ ಶಿವಾಚಾರ್ಯರಿಗೆ ಭೂತ ಪ್ರೇತಗಳ ಅಸ್ತಿತ್ವದ ಬಗೆಗೆ ಎಳ್ಳಷ್ಟು ನಂಬಿಕೆಯಿಲ್ಲ. ಅಂತಹ ಸಂಗತಿಗಳೆಲ್ಲ ಕಟ್ಟುಕತೆಗಳು; ಅವೆಲ್ಲ ಸುಳ್ಳು ಎಂದು ಕಠೋರ ವಾಗಿ ಖಂಡಿಸುತ್ತಾರೆ. ಜಗತ್ತಿನಲ್ಲಿ ಭೂತಗಳೇ ಇಲ್ಲ. ಇವೆಲ್ಲ ಪುಕ್ಕ ಜನರ ಕತ್ತಲೆಯ ಕಲ್ಪನೆಗಳು—ಎಂದೆನ್ನುತ್ತಾರೆ. ದೆವ್ವಗಳ ಮಾತೂ ಅಷ್ಟೆ! ಅವು ಮೈಯಲ್ಲಿ ಬಂದು ಓಡಾಡಿ ಒದರಾಡುತ್ತಿದ್ದರೆ ಅದೆಲ್ಲ ಡಂಬತನ, ಅವರು ಡಂಬಕರು ಎಂದು ಅವರ ಅಭಿಪ್ರಾಯ.

ಸಾಮಾನ್ಯವಾಗಿ ಸ್ತ್ರೀಯರು ಋತುಮತಿಯರಾದ ಕಾಲದಲ್ಲಿ ಅಥವಾ ಬಾಣಂತಿಯ ರಾಗಿದ್ದ ಕಾಲದಲ್ಲಿ ಬೆದರಿಕೊಂಡರೆ ಅವರ ಬುದ್ಧಿಗೆ ಪ್ರಜ್ಞಾವ್ಯವಸ್ಥೆಗೆ ಬಲವಾದ ಆಘಾತವುಂಟಾಗಿ ಅವರು ಹಾಗೆ ವರ್ತಿಸುವರು—ಎಂಬ ಶಾಸ್ತ್ರೀಯ ಕಾರಣದಲ್ಲಿ ಅವರ ನಂಬಿಕೆ; ಇದೇ ಅವರ ಗ್ರಹಿಕೆ.

ಕೊಳ್ಳಿ ದೆವ್ವ ಅಂದರೆ ಉರಿದೆವ್ವವನ್ನು ಸುಡುಗಾಡಿನಲ್ಲಿ ಕಣ್ಮುಟ್ಟ ಕಂಡೆವೆಂದು ಯಾರಾದರು ಬಂದು ಹೇಳಿದರೆ, ಅದು ದೆವ್ವ ಅಲ್ಲ—ಏನಲ್ಲ. ಶ್ಮಶಾನದಲ್ಲಿ ಶವದಹನ ಕ್ರಿಯೆಯ ನಂತರ ಉಳಿದ ಎಲುಬುಗಳು ಗಾಳಿಗೆ ಮೈದೆರೆದು ಬಿದ್ದಾಗ ಅವುಗಳಲ್ಲಿನ ರಂಜಕ (Phosphorus) ಮಳೆಯ ನೀರಿನೊಡನೆ ಸಂಯೋಗ ಹೊಂದಿ ತೀವ್ರಪ್ರಜ್ವಲನ ಕ್ರಿಯೆಯುಂಟಾಗುತ್ತದೆ. ಅದರಿಂದ ಬೆಂಕಿ ಹತ್ತುತ್ತದೆ. ಅದು ಗಾಳಿಗೆ ಹೆಚ್ಚು ಪ್ರಜ್ವಲಿಸುವುದು. ಇದನ್ನೆ ಅರಿಯದ ಜನರು ಕೊಳ್ಳಿದೆವ್ವ ಎಂದು ಕರೆವರು ಎಂಬುದಾಗಿ ಹೇಳಿ ಹೀಗೆ ವೈಜ್ಞಾನಿಕ ಕಾರಣವನ್ನು ಕೊಡುತ್ತಾರೆ.

ದೆವ್ವಗಳು ಕಾಣುತ್ತವೆ ಎಂದು ಹೇಳುತ್ತಾರೆ. ನಮಗೆ ಒಮ್ಮೆಯೂ ಕಂಡಿಲ್ಲ. ನೋಡಿಯೆ ಬಿಡಬೇಕು ; ಅವುಗಳ ಅಸ್ತಿತ್ವವನ್ನು ಖಚಿತಪಡಿಸಿಕೊಳ್ಳಬೇಕು—ಎಂಬ ಅತ್ಯಾತುರ ಶ್ರೀಗಳವರಿಗೆ ! ಅದಕ್ಕಾಗಿ ಅವರು ಅನೇಕ ಸಲ ಅಮಾವಾಸ್ಯೆಯ ಕಾಳಿರುಳಲ್ಲಿ ಒಬ್ಬರೇ ಮಸಣಕ್ಕೆ ಹೋಗಿ ಬಂದಿದ್ದಾರಂತೆ ! ಅವರು ಇದರ ಬಗೆಗೆ ಎಳ್ಳಷ್ಟೂ ಅಂಜುವವರಲ್ಲ ; ಅಳುಕುವವರಲ್ಲ ; ಮಹಾ ಧೈರ್ಯಶಾಲಿಗಳು, ಕತ್ತಲಲ್ಲಿ ಕಲ್ಲು ಮುಳ್ಳು ತುಳಿದು ಹೊಲಬು, ದಪ್ಪ ತಗ್ಗು ತೆವರುಗಳನ್ನು ದಾಟಿ ತೊಂದರೆಗೀಡಾದರೂ ಲಕ್ಷಿಸದೆ ಸತ್ಯಶೋಧನೆಯನ್ನು ಮಾಡಿಯೇ ತೀರಬೇಕೆಂಬ ಛಲ ಅವರದು. ಹಾಗೆಯೇ ಹೋಗಿ ಹೋಗಿ ಬೆದರೆ ಬೆದರೆ ಬೇಸತ್ತು ಎಷ್ಟೋ ಸಲ ಹಿಂದಿರುಗಿದ್ದಾರೆ. ಆದರೂ ಅವರು ಕಂಡುದಿಲ್ಲ.

**ಉಕ್ಕಿನಂತಹ ಸುದೃಢ ಸಂಕಲ್ಪ :**

ಭೂತ ಪ್ರೇತಗಳಿಗೆ ಸಂಬಂಧಿಸಿದ ಒಂದು ಘಟನೆಯನ್ನು ಶಿವಾಚಾರ್ಯರು ತುಂಬಾ ಸ್ವಾರಸ್ಯವಾಗಿ ಹೀಗೆ ಹೇಳುತ್ತಾರೆ :

ಶಿವಾಚಾರ್ಯರು ಊರ ಹೊರಗಿನ ಮಠದಲ್ಲಿದ್ದಾಗ ನಡೆದ ಘಟನೆ. ಒಮ್ಮೆ ಮಠದ ಆವರಣದಲ್ಲಿ ಶಿವಾಚಾರ್ಯರು ಗಾಳಿಗೆ ವಿರಮಿಸಿದ್ದರು. ಇವರ ಹತ್ತಿರ ಊರಿಂದ ಬಂದ ಶಾಸ್ತ್ರಿಗಳೊಬ್ಬರಿದ್ದರು. ಆಗ ಹತ್ತು ಗಂಟೆಯ ಇರುಳು. ಶಾಸ್ತ್ರಿಗಳು ಬಂದ ಪರಿಶ್ರಮಕ್ಕಾಗಿ ಮಲಗಿ ನಿದ್ರಿಸುತ್ತಿದ್ದರು. ಇದ್ದಕ್ಕಿದ್ದಂತೆ ಅವರು ಕನಸು ಕಂಡು 'ಅಪ್ಪಾ ಅಪ್ಪಾ !' ಎಂದು ಬಡಬಡಿಸುತ್ತ ಅರಸುತ್ತ ಆಶ್ಚರ್ಯವನ್ನು ವ್ಯಕ್ತಪಡಿಸಿದರಂತೆ. ಶಿವಾಚಾರ್ಯರು : ಏನದು, ಹಾಗೇಕೆ ಗಾಬರಿಯಾದಿರಿ ? ಎಂದು ಕೇಳುವರು. ಅದಕ್ಕೆ ಎಚ್ಚತ್ತ ಶಾಸ್ತ್ರಿಗಳು ಇದೀಗ ಈ ಉತ್ತರ ದಿಕ್ಕಿನಲ್ಲಿ ಕೊಳ್ಳಿ ದೆವ್ವ ಮೇಲಕ್ಕೇರುತ್ತಿದೆ– ನೋಡಿರಿ ! ಅಷ್ಟರಲ್ಲಿ ಮತ್ತೊಮ್ಮೆ ಉರಿ ಮೇಲಕ್ಕೆ ಹಾರಿ ಕೆಳಕ್ಕೆ ಇಳಿಯುವುದನ್ನು ಶಿವಾಚಾರ್ಯರೂ ಕಣ್ಣಾರೆ ಕಾಣುವರು.

ಇವರು ದೆವ್ವಗಳನ್ನು ಕಂಡಿಲ್ಲ, ಕಂಡರೂ ನಂಬುವುದಿಲ್ಲ ಎಂಬುದು ಶಾಸ್ತ್ರಿಗಳವರಿಗೆ ಗೊತ್ತಿತ್ತು. ಅವರೊಡನೆ ದೆವ್ವದ ಬಗೆಗೆ ಅನೇಕ ಸಲ ವಾದ ಮಾಡಿದ್ದರು.

ಒಪ್ಪಿರಲಿಲ್ಲ. ಈಗ ಒಪ್ಪಿಸಲು ಒಳ್ಳೆಯ ಹೊತ್ತೆಂದು ತಿಳಿದು, ಶಿವಾಚಾರ್ಯರೇ, ಈಗಾದರೂ ನೀವು ಕಣ್ಣಾರೆ ಕಂಡಿರಲ್ಲಾ ! ಇದಕ್ಕೆ ಏನನ್ನುವಿರಿ ? ಈಗಲಾದರೂ ದೆವ್ವದ ಬಗೆಗೆ ನಂಬುವಿರೋ ಇಲ್ಲವೋ ? – ಎಂದು ಶಾಸ್ತ್ರಿಗಳು ಗೆಲ್ಮೆಯ ದನಿಯಲ್ಲಿ ಕೇಳಿದ್ದಕ್ಕೆ ಶ್ರೀಗಳವರು ಮೂಕರಾದರು.

ಅವರು ಆ ಬಗೆಗೆ ಏನೂ ಮಾತಾಡದಾದರು. ಹೊತ್ತು ಹೋದ ಬಳಿಕ ದೆವ್ವಗಳ ಬಗೆಗೆ ಅನೇಕ ಘಟನೆಗಳನ್ನು ಹೇಳುತ್ತ ಕೇಳುತ್ತ ಹೆಚ್ಚು ಹೊತ್ತು ಕುಳಿತಿದ್ದ ರಂತೆ ! ಅಷ್ಟರಲ್ಲಿ ಆಕಾಶದಲ್ಲಿ ಮೋಡ ಮುಸುಕಿ ಮಳೆ ಹನಿ ಉದುರಲು ಮೊದ ಲಾಗುವುದು. ಇಬ್ಬರೂ ಎದ್ದು ಒಳಕ್ಕೆ ಹೋಗಿ ಮಲಗುವರು. ಶಾಸ್ತ್ರಿಗಳವರಿಗೆ ಬೇಗ ನಿದ್ದೆ ಬಂದು ಗೊರಕೆ ಹೊಡೆಯ ಹತ್ತುವರು. ಶ್ರೀಗಳವರಿಗೆ ಮಾತ್ರ ನಿದ್ದೆ ಬರಲಿಲ್ಲ. ತಲೆಯಲ್ಲಿ ಏನೇನೋ ವೈಚಾರಿಕ ತಾಕಲಾಟ ನಡೆದಿತ್ತು. ಅದು ಅವರನ್ನು ಪವಡಿಸಿಕೊಡಲಿಲ್ಲ.

ಆಗ ಶಿವಾಚಾರ್ಯರು ಸಾವಧಾನವಾಗಿ ಎದ್ದು ಕೈಯಲ್ಲೊಂದು ತಂಬಿಗೆ ತೆಗೆದು ಕೊಂಡು ಮೆಲ್ಲನೆ ಬಾಗಿಲು ಹಾಕಿಕೊಂಡು ಹೊರಕ್ಕೆ ಹೊರಟೇಬಿಟ್ಟರು. ಎಲ್ಲಿಗೆ ? ಏತಕ್ಕೆ ? ಎಂಬ ಪ್ರಶ್ನೆ ಓದುಗರ ತಲೆಯಲ್ಲಿ ತುಂಬಿ ಬಂದಿರಬಹುದು. ಅವರೀಗ ಹೊರಟದ್ದು ಮತ್ತೆಲ್ಲಿಗೂ ಅಲ್ಲ ; ಈ ಮೊದಲು ಕಂಡ ಕೊಳ್ಳಿ ದೆವ್ವನ ಶೋಧಕ್ಕಾಗಿ ! ಏನೇ ಆಗಲಿ, ಎಂತೇ ಆಗಲಿ, ಅದನ್ನು ಕಂಡೇ ತೀರಬೇಕೆಂಬ ಛಲಕ್ಕಾಗಿ !

ಆಗ ಮಧ್ಯ ರಾತ್ರಿಯ ಸಮಯ. ಸುತ್ತಲೂ ಕರಾಳ ಕತ್ತಲೆ. ಅಲ್ಲಲ್ಲಿ ಗೂಬೆ ಗಳ ಘೂತ್ಕಾರ. ಹುಳಗಳ ಚೀತ್ಕಾರ. ಯಾವ ಮಾನವ ಸುಳುಹಿಲ್ಲ. ಭಯಾನಕ ವಾತಾವರಣ. ಇದಕ್ಕಾವುದಕ್ಕೂ ಸೊಪ್ಪು ಹಾಕದೆ ಎಂಟೆದೆಯ ಬಂಟರಾದ ಶ್ರೀಗಳ ವರು ನಿರ್ಭೀತರಾಗಿ ಹೊರಟಿದ್ದಾರೆ ಉತ್ತರಾಭಿಮುಖವಾಗಿ ! ಕಾಲಲ್ಲಿ ಕಡಾವುಗೆ, ಕೈಯಲ್ಲಿ ನೀರು ತುಂಬಿದ ತಂಬಿಗೆ ; ಮೈಯಲ್ಲಿ ಸ್ವಾಮಿಗೊಪ್ಪುವ ನಿರಾಡಂಬರ ಕಾವಿಯ ನಿಲುವಂಗಿ ; ಹೆಗಲ ಮೇಲೊಂದು ಪಾವುಡ. ಕತ್ತಲಲ್ಲಿ ಕಣ್ಣು ಸರಿಯಾಗಿ ಕಾಣುತ್ತಿರಲಿಲ್ಲ. ದಾರಿ ತೀರ ಮಸಕು ಮಸಕಾಗಿ ಗೋಚರಿಸುತ್ತಿತ್ತು. ಮೇಲಿನಿಂದ ತಟ್ ತಟ್ ಎಂದು ಮಳೆಯ ದಪ್ಪ ಹನಿಗಳು ಆಗಾಗ ಉದುರುತ್ತಿದ್ದವು. ಹೆಚ್ಚಾಗಿ ಮಳೆ ಹುಯ್ದರೆ ಗತಿಯೇನು ? ಎಂದು ಯೋಚಿಸದೆ ಹಿಂದೆಗೆಯದೆ ಅದರಲ್ಲಿಯೆ ಅದೊಂದೆ ಯೋಚನೆಯಲ್ಲಿಯೆ ಮುಂದುವರಿಯುತ್ತಿದ್ದರು.

ಕೈಯಲ್ಲಿ ಕೊಡೆಯಿಲ್ಲ, ಕಿರಿಸೊಡರಿಲ್ಲ. ಉದ್ದಕ್ಕೂ ತಗ್ಗು ದಿನ್ನೆಗಳು ; ಕಾಲು ದಾರಿ, ಅದರಲ್ಲಿಯೆ ಕಾಲೆಳೆದುಕೊಂಡು ಅವಸರವಸರವಾಗಿ ನಡೆದಿದ್ದಾರೆ. ಆಗ ಅವರ ತಲೆಯಲ್ಲಿ ಬೇರೊಂದರ ವಿಚಾರವಿಲ್ಲ. ಮನದಲ್ಲಿ ಮತ್ತಾವುದರ ಅಂಜಿಕೆಯಿಲ್ಲ.

ಕಣ್ಣಲ್ಲಿ ನಿದ್ದೆಯಿಲ್ಲ, ಆ ಕೊಳ್ಳಿ ದೆವ್ವ ಕಾಣಿಸಿಕೊಂಡ ಸ್ಥಳವನ್ನು ಮುಟ್ಟಬೇಕು; ಆ ದೆವ್ವದ ಅಸ್ತಿತ್ವವನ್ನು ಪರೀಕ್ಷಿಸಬೇಕು ಎಂಬುದೊಂದೇ ವಿಚಿತ್ರವಾದ ಹಟ ಮನದಲ್ಲಿ ಮೂಡಿ ನಿಂತಿದೆ. ತಲೆಯಲ್ಲಿ ಅದೇ ವಿಚಾರ ಮಗ್ನತೆ ಹೆಡೆಯೆತ್ತಿದೆ. ಪಯಣ ಮಾತ್ರ ನಿಂತಿಲ್ಲ. ವೇಗದಲ್ಲಿ ಸಾಗುತ್ತಿದೆ.

ಮಣ್ಣು ಹೆಂಟೆ-ಕಲ್ಲು ಮುಳ್ಳುಗಳ ನಡುವೆ ಹೆಜ್ಜೆಯ ಮೇಲೆ ಹೆಜ್ಜೆ ಬೀಳುತ್ತಿದ್ದವು. ಅಷ್ಟರಲ್ಲಿ ಒಂದು ಚಿಕ್ಕ ಗುಂಡುಗಲ್ಲ ಮೇಲೆ ಒಂದು ಹೆಜ್ಜೆ ಬೀಳುವುದು. ಗುಂಡುಗಲ್ಲು ಉರುಳಿತು, ಹಾವುಗೆ ಜಾರಿತು; ಶ್ರೀಗಳು ನೆಲದ ಮೇಲೆ ಮುಗ್ಗುರಿಸಿದರು. ಕೈಯಲ್ಲಿದ್ದ ತಂಬಿಗೆ ಜಾರಿ ಉರುಳಿ ದೂರ ಹೋಗಿ ಬೀಳುವುದು. ನೀರು ಚೆಲ್ಲಿ ಹೋಗುವುದು. ಒಂದ್ಹಾವುಗೆ ಸಿಡಿದು ಹೋಗಿ ಕತ್ತಲಲ್ಲಿ ಕಾಣದಾಗುವುದು. ಶ್ರೀಗಳು ಅರಿವೆ ಕೊಡವುತ್ತ ಏಳುವರು. ಕಾಲು ಪೆಟ್ಟು ತಿಂದಿತ್ತು. ಒಂದೆಡೆ ತೊವಲು ಕಿತ್ತು ಹೋಗಿತ್ತು. ಆದರೂ ಅದನ್ನು ಗಮನಿಸದೆ ಕೈಕಾಲುಗಳಿಂದ ಕಳಚಿ ಬಿದ್ದ ತಂಬಿಗೆ ಹಾವುಗೆಗಳಿಗಾಗಿ ತಡಕಾಡಿದರು; ಕಲ್ಲು ಮಣ್ಣಿನ ಹೊರತು ಏನೂ ಕೈಗೆ ಸಿಕ್ಕಲಿಲ್ಲ. ಆಗ ಅವರಿಗೇನೂ ಸಿಕ್ಕುವಂತಿರಲಿಲ್ಲ. ಏಕೆಂದರೆ, ಬವಳಿಕೆಯಿಂದಾಗಿ ಕಣ್ಣಿಗೆ ಕತ್ತಲೆ ಕವಿದಿತ್ತು; ಕಾಣದಂತೆ ಮಾಡಿತ್ತು. ಸಾಲದ್ದಕ್ಕೆ ಆಕಾಶದಲ್ಲಿ ಮೋಡ ಮುಸುಕಿ ಕತ್ತಲಕ್ಕೆ ಇನ್ನಷ್ಟು ಕಾಡಿಗೆ ಬಳಿದಂತಿತ್ತು.

ಕುರುಡರಂತೆ ಕೈಕಾಲು ಸವರುತ್ತ ಚಾಚುತ್ತ ಬರಿಗೈ ಬರಿಗಾಲುಗಳಿಂದ ಧ್ಯೇಯಸ್ಥ ತಾಣದತ್ತ ನಡೆದರು. ಅದೇನು ಸಾಹಸ ಅವರದು. ಅಲ್ಪ ವಿಷಯಕ್ಕೆ ಅನಲ್ಪ ಪರಿಶ್ರಮ. ಹಿಂದಿರುಗದ ಪರಾಕ್ರಮ. ಛಲಬಿಡದ ತ್ರಿವಿಕ್ರಮನ ಬೇತಾಳ ಸಾಹಸ—

ಶ್ರೀಗಳವರದು. ಸ್ವಲ್ಪ ದೂರ ಕ್ರಮಿಸಿದ ನಂತರ ಆ ಸ್ಥಳ ಸಮೀಪಿಸುವುದು. ಜನವಸತಿಯ ಸಂಕೇತ ಶಬ್ದಗಳು ಕಿವಿಗಳಿಗೆ ಕೇಳಬಂದವು. ಅಷ್ಟರಲ್ಲಿ ಒಂದು ಚಿಕ್ಕ ಒಡ್ಡು ಅಡ್ಡಬರುವುದು. ಅದನ್ನು ದಾಟಿ ಮುನ್ನಡೆವರು. ಮುಂದೆ ಒಮ್ಮಿಂದೊಮ್ಮೆಗೆ ತೇಕುತ್ತ ಬೊಗಳುತ್ತ ಹುಲಿಯಂತಹ ಎರಡು ನಾಯಿಗಳು ಓಡಿ ಬಂದು ಮೈಮೇಲೆ ಬೀಳ ತೊಡಗಿದವು. ಆದರೂ ಆಚಾರ್ಯರು ಎದೆಗೆಡಲಿಲ್ಲ. ಬಂದೊದಗಿದ ಆ ಆಪತ್ತನ್ನು ಎದುರಿಸುತ್ತ ಆತ್ಮರಕ್ಷಣೆಗಾಗಿ ಹೆಗಲ ಮೇಲಿನ ಪಾವುಡವನ್ನೇ ಕೈಯಲ್ಲಿ ಹಿಡಿದುಕೊಂಡು 'ಹಳಿ–ಹಳಿ' ಎಂದು ಕೈ ಮೇಲೆತ್ತಿ ನಾಯಿಗಳ ಕಡೆಗೆ ಬೀಸ ತೊಡಗುವರು. ಜೊತೆಗೆ ನಾಯಿಗಳಿಗೆ ಪ್ರೇರಕವಾಗಿ "ಛೂಹಾ–ಛೂಹಾ" ಎಂಬ ಮನುಷ್ಯರ ಕೂಗೂ ಕೇಳಬಂತಂತೆ!

ಆಗ ಸಮೀಪದಲ್ಲಿ ಜನ ಇದ್ದುದನ್ನು ತಿಳಿದು ಸ್ವಾಮಿಗಳು ಒಡನೆ "ಯಾರಿದ್ದೀರಪ್ಪಾ, ಬನ್ನಿರೋ ಬೇಗ, ನಾಯಿಗಳನ್ನು ಕರೆದುಕೊಳ್ಳಿರೋ!" ಎಂದು

ಕೂಗಿದರಂತೆ! ಈ ಮಾನವೀಯ ಕಂಠವನ್ನು ಕೇಳಿ ಒಬ್ಬಿಬ್ಬರು "ಏ! ಬಾ! ಕುರೆ ಕುರೆ" ಎಂದು ನಾಯಿಗಳನ್ನು ಹಿಂದಕ್ಕೆ ಕರೆಯುತ್ತ ಅಲ್ಲಿಗೆ ಓಡಿ ಬಂದರಂತೆ! ಅಷ್ಟರಲ್ಲಿ ನಾಯಿಗಳು ಇವರು ಬೀಸಿದ ಬಟ್ಟೆಯನ್ನು ಬಾಯಲ್ಲಿ ಕಚ್ಚಿಕೊಂಡು ಅವರತ್ತ ಓಡಿಹೋದವಂತೆ! ಓ, ಶಿವಾಚಾರ್ಯರದು ಅದೆಂತಹ ಗಟ್ಟಯೆದೆ! ಅದೇನು ದಿಟ್ಟ ಸಾಹಸ!! ದಿಟಕ್ಕೂ ಅವರು ಒಂದು ದೊಡ್ಡ ಕಂಟಕದಿಂದ ಪಾರಾದಂತೆ! ಆ ನಾಯಿಗಳ ಕ್ರೂರ ದವಡೆಗೆ ಸಿಕ್ಕದಿರುವುದು ಅವರ ಸುದೃಢ ಧೈರ್ಯ ಸಾಹಸಗಳ ಫಲ.

ಶ್ರೀಗಳವರ ಸಮೀಪಕ್ಕೆ ಬರುತ್ತಿರುವ ವ್ಯಕ್ತಿಗಳಿಬ್ಬರು ಕಪ್ಪುಬಣ್ಣ ಬಿಳಿಬಣ್ಣ ಬಳಿದ ಎರಡು ಚಲಿಸುತ್ತಿರುವ ಶಿಲಾಪ್ರತಿಮೆಗಳಂತಿದ್ದರು. ಮೊಣಕಾಲವರೆಗೆ ಮಾತ್ರ ಇಳಿಬಿದ್ದ ಕಗ್ಗ ಪಂಚೆ. ಮುಂಗೈವರೆಗೆ ಹೊಲಿಸಿದ ಕಗ್ಗ ಅಂಗಿ, ತಲೆಯಮೇಲೆ ಕೆಂಪು ರುಮಾಲು, ಹೆಗಲಮೇಲೆ ಭಾರವಾದ ಕರಿ ಕಂಬಳಿ, ಕಾಲಲ್ಲಿ ಒರಟಾದ ದಪ್ಪ ಮೆಟ್ಟುಲಗಳನ್ನು ಹಾಕಿದ್ದ ಎತ್ತರದ ಆಳುಗಳು ಊರ ಕುರುಬರಾಗಿದ್ದರು. ಊರ ಹೊರಗೆ ತಮ್ಮ ಕುರಿಗಳ ದಡ್ಡಿಯ ಕಾವಲು ಮಾಡಲು ಬಂದು ತಂಗಿದವರು. ನಟ್ಟಿರುಳಿನಲ್ಲಿ ನಾಯಿಗಳು ಬೊಗಳುತ್ತ ಓಡಿ ಬಂದುದನ್ನು ಗಮನಿಸಿ, ತೋಳವೆ ಬಂದಿರ ಬಹುದೆಂದು ತಿಳಿದು ಮೊದಲು ನಾಯಿಗಳಿಗೆ ಹಿಡಿಯಲು ಸಂಕೇತ ರೂಪವಾಗಿ ಕೂಗಿದರು. ಮರಳಿ ಮನುಷ್ಯ ಧ್ವನಿಯನ್ನು ಕೇಳಿದ ನಂತರ ನಾಯಿಗಳನ್ನು ಹಿಂದಕ್ಕೆ ಕರೆಯುತ್ತ ನಾವಿರುವ ಸ್ಥಳಕ್ಕೆ ಧಾವಿಸಿ ಬಂದರು.

ತಮ್ಮ ಕೈ ದೀವಿಗೆಯನ್ನು ಏರಿಸಿ ನೋಡಿದರು. ತಮ್ಮ ಊರಿನ ಮಠದ ಮಹಾಸ್ವಾಮಿಗಳು. ಅವರಿಗೆ ತುಂಬಾ ಅಚ್ಚರಿಯೂ ತುಂಬಾ ಅಂಜಿಕೆಯೂ ಆಯಿತು. ಜೊತೆಗೆ ಆನಂದವೂ ಆಯಿತು – ಏಕೆಂದರೆ ಶ್ರೀಗಳು ನಾಯಿಗಳಿಂದ ಯಾವ ತೊಂದರೆಗೆ ಒಳಗಾಗದೆ ಪಾರಾಗಿದ್ದಕ್ಕಾಗಿ!

ಆದರೂ ಅವರ ಅವಸ್ಥೆ ಅವರಿಗೆ ನೋಡಲಾಗಲಿಲ್ಲ. ತಮ್ಮ ಹುಲಿಯಂತಹ ನಾಯಿಗಳ ಆಕ್ರಮಣದಿಂದ ಅಲ್ಲಾಡಿದ ಅವರ ಎದೆ ಒಂದೇ ಸಮವಾಗಿ ಬಡಿದು ಕೊಳ್ಳುತ್ತಿತ್ತು. ಕೈ ಕಾಲುಗಳು ಕಂಪಿಸುತ್ತಿದ್ದವು. ಸಾಲದ್ದಕ್ಕೆ ಕಾಲುಗಳಲ್ಲಿ ಹಾವು ಗೆಗಳಿರಲಿಲ್ಲ. ಎರಡೂ ತಳಿರಡಿಗಳಲ್ಲಿ ತುಂಬಾ ಮುಳ್ಳು ಮುರಿದಿವೆ. ಒಂದು ಪಾದದಲ್ಲಿ ತುಸು ರಕ್ತವೂ ಬಂದಿದೆ. ಗಾಳಿಗೆ ತಲೆ ಕೆದರಿದೆ. ಚಳಿಗೆ ಮೈ ರೋಮಾಂಚಗೊಂಡಿದೆ. ತೊಟ್ಟ ಬಟ್ಟೆ ಬರಿ ತೊಯ್ದಿವೆ. ಈ ಅವಸ್ಥೆಯಲ್ಲಿ ಇಂತಹ ಕರಾಳ ರಾತ್ರಿಯಲ್ಲಿ ಈ ಊರು ಕೇರಿಗಳಿಂದ ದೂರವಿದ್ದ ಕಾಡು ಪ್ರದೇಶಕ್ಕೆ ತಮ್ಮ ಸ್ವಾಮಿಗಳು ಬಂದು ನಿಂತುದನ್ನು ಕುರುಬರು ಕಣ್ಣಾರೆಕಂಡು ಪಾದಕ್ಕೆರಗುವರು.

ಭಯ ವಿಸ್ಮಯಗಳಿಂದ "ಏನಪ್ಪಾ! ಈಟೊತ್ತಿನ್ಯಾಗ ಇಂಥ ಸರವೊತ್ತಿನ ರಾತ್ರ್ಯಾಗ ಯಾಕ ಹೊರಬಿದ್ದಿರೆಪ್ಪಾ? ನೀವು ದ್ಯಾವರಂಥವರು, ನಿಮಗ್ಯಾನರೇ

ಆದರ ನಮಗ್ಯಾರ ಗತಿರೆಪ್ಪಾ? ನಿಮಗ ಅಂಥಾದ್ದೇನ್ರಪ್ಪಾ ಬಂದೈತಿ? ಎಂದು ಅತ್ಯಂತ ಆತ್ಮೀಯತೆಯಿಂದ ತಮ್ಮ ಗ್ರಾಮ್ಯ ಭಾಷೆಯಲ್ಲಿ ಮಾತನಾಡಿಸುವರು; ಮನಸಾರೆ ಮರುಗುವರು. ತಮ್ಮ ಹೆಗಲ ಮೇಲಿನ ಕಂಬಳಿಯನ್ನು ಹಾಸಿ ಕುಳಿತು ಕೊಳ್ಳಲು ಬಿನ್ನವಿಸುವರು ಆದರೆ ಶಿವಾಚಾರ್ಯರು ಅವರ ಆ ಕಂಬಳಿಯ ಮೇಲೆ ಕುಳಿತು ಕೊಳ್ಳುವುದಿಲ್ಲ. ಅವರ ಕರುಳ ಕಂಬಳಿಯ ಮೇಲೆ ಆಗಲೇ ಕುಳಿತುಬಿಟ್ಟಿದ್ದರು. ಅವರ ಆ ಭಕ್ತಿ ಭರಿತ ಭಾಷೆಯಿಂದ ಶಿವಾಚಾರ್ಯರಿಗೆ ಮತ್ತೊಂದು ಬಲ ಬಂದಂತಾಗಿತ್ತು. ಬಂದ ಸಂದ ಪರಿಶ್ರಮವೆಲ್ಲ ಪರಿಹಾರವಾಗಿತ್ತು. ನಿಂತುಕೊಂಡೇ ಮಾತನ್ನು ಮುಂದುವರಿಸುತ್ತಾರೆ.

ಹಾಲು ಮತದ ಶಿಷ್ಯರೇ, ನಿಮ್ಮ ಹೃದಯ ತುಂಬಿ ಬಂದ ಹಾಲಿನಂತಹ ಹಿತ ನುಡಿಗಳನ್ನು ಕೇಳಿ ನಮ್ಮ ಹೃದಯ ತುಂಬಿ ಬಂದಿದೆ. ನಿಮ್ಮ ಈ ನಿಸರ್ಗ ಜೀವನದ ನಿರ್ಮಲ ಭಾವೋಪಚಾರ ಭಾಷೆಯ ಮೂಲಕ ಬಂದು ನಮ್ಮ ಹೃದಯವನ್ನು ತುಂಬಿ ನಿಂತಿದೆ. ಇದಕ್ಕಾಗಿ ನಾವು ನಿಮಗೆ ತುಂಬಾ ಆಕರ್ಷಿತರಾಗಿದ್ದೇವೆ. ನಿಮ್ಮನ್ನು ನಾವು ಮರೆಯೆವು. ನಾವು ಇಲ್ಲಿಗೆ ಈ ಹೊತ್ತಿನಲ್ಲಿ ಈ ಹಳವಂಡದಲ್ಲಿ ಹರಿಕಾರನಂತೆ ಬಂದಿದ್ದೇವೆ. ಈಗ ಇದೇ ರಾತ್ರಿ ಎರಡು ಗಂಟೆಗಳ ಮೊದಲು ಮಠದ ಆವರಣದಲ್ಲಿ ವಿಶ್ರಾಂತಿಗಾಗಿ ಕುಳಿತಿದ್ದೆವು. ಇದ್ದಕ್ಕಿದ್ದಂತೆ ಈ ಭಾಗದಲ್ಲಿ ಬೆಂಕಿಯ (ಉರಿಯ) ಚಲನೆಯುಂಟಾಯಿತು. ಅದನ್ನು ನೋಡಿ ಕೊಳ್ಳಿದೆವ್ವವಿರಬಹುದೆಂದು ಊಹಿಸ ಲಾಯಿತು. ಊಹೆ ಸರಿಯೆ ತಪ್ಪೆ ಎಂಬುದನ್ನು ಪರೀಕ್ಷಿಸಲು ಇಷ್ಟೊಂದು ಕಷ್ಟಪಟ್ಟು ಇಲ್ಲಿಗೆ ಬರಬೇಕಾಯಿತು. ಇಲ್ಲಿ ಉರಿದೆವ್ವಗಳು ಇರುವುದು ನಿಜವೆ? ನೀವೇನಾದರೂ ನೋಡಿರುವಿರಾ?

ಕೊಳ್ಳಿ ದೆವ್ವ ಗಿಳ್ಳಿ ದೆವ್ವ ಇಲ್ಲಿಲ್ರಪ್ಪಾ! ಅವು ಇಲ್ಲ್ಯಾಕ ಬರ್‍ತಾವ್ರಪ್ಪಾ? ಆದರ ನೀವು ಕಂಡದ್ದು ದೆವ್ವ ಅಲ್ಲ್ರಪ್ಪಾ! ಮತ್ತೇನು? ನೀವು ಹೇಳಿದ್ಹಾಂಗ ಯಾಡ್ನ ತಾಸ್ಸಿನ ಆಚೇಕ ನಮ್ಮ ಪಾರಗೋಳು ಅರಬಿ ಚಿಂದಿಗೆ ಕಲ್ ಕಟ್ಟಿ ಚಕಮಕೀಲೆ ಬೆಂಕಿ ಹಚ್ಚಿ ಮ್ಯಾಲ ತೂರಾಡಕೊಂತ ಆಡಾಕ ಹತ್ತಿದ್ರೂ, ಅದು ನಿಮಗ ಹಾಂಗಕಂಡೈತಿ. ಬೇಕಾದರ ನೀವ ಅತತ ಹೋಗಿ ನೋಡ್ರಿ. ಕಲ್ಲೀಗಿ ಕಟ್ಟಿದ ಅರಿಬಿ ಚಿಂದಿಗಳು ಸುಟ್ಟಸುಟ್ಟ ಬಿದ್ದಾವ. ಓ ಬೀರ್‍ಯಾ, ಲಾಟೀನ್ ಹಿಡಿದ ತೋರಿಸಲೇ ಅಪ್ಪಾವರ್‍ಗೆ!

ಆತನು ಅದರಂತೆ ಗುರುಗಳನ್ನು ಕರೆದುಕೊಂಡು ಹೋಗಿ ತೋರಿಸುವನು. ಕಂದೀಲಿನ ಕಿರುಸೊಡರಿನ ಮಂದ ಬೆಳಕಿನಲ್ಲಿ ಹಿಂದಿನ ಘಟನೆಗೆ ಸಾಕ್ಷಿಯಾಗಿ ಅಲ್ಲಲ್ಲಿ ಬಿದ್ದ ಸುಟ್ಟ ಬಟ್ಟೆಯ ಅವಶೇಷಗಳನ್ನು ಶ್ರೀಗಳವರು ಮತ್ತೆ ಮತ್ತೆ ಕಣ್ಣರಳಿಸಿ ನೋಡಿ ಖಚಿತ ಮಾಡಿಕೊಳ್ಳುವರು. ಆಗ ಅವರ ಮುಖ ಅರಳುವುದು. ಆಗ ಅವರಿಗಾದ ಹರ್ಷಾತಿರೇಕ ಬಣ್ಣಿಸಲಸದಳ.

ಅನೇಕ ದಿನಗಳಿಂದ ಹಗಲಿರುಳು ಅನಂತ ಪ್ರಯೋಗ ಮಾಡಿ ಮಾಡಿ ಒಂದು ಹೊಸ ಸಿದ್ಧಾಂತವನ್ನು ಕಂಡುಹಿಡಿದ ವಿಜ್ಞಾನಿಗುಂಟಾದ ವಿಶೇಷಾನಂದ ಶ್ರೀಗಳವರಿಗಾಗಿದೆ. ಅಲ್ಲದೆ ತಿಂಗಳುಗಟ್ಟಲೆ ಚಳಿಗಾಳಿ ಮಳೆಗಳಲ್ಲಿ ಕಡುಕಷ್ಟಗಳನ್ನು ಅನುಭವಿಸಿ, ಅತಿದುರ್ಗಮವಾದ ಏರಿಳಿತದ ಮಾರ್ಗ ಕ್ರಮಣ ಮಾಡಿ ಮಾಡಿ ತಾನು ತಲುಪಬೇಕೆಂದಿದ್ದ ಗಿರಿಶಿಖರ ಇದೇ ಎಂದು ಅಲ್ಲಿನ ಆ ಅವಶೇಷಗಳಿಂದ ಅರಿಕೆಗೆ ಬಂದಾಗ ಶಿಖರಾರೋಹಿಗೆ ಆಗುವಷ್ಟು ವಿಜಯೋನ್ಮಾದದ ಮೋದಾತಿಶಯ ಶ್ರೀಗಳವರ ಮುಖಭಾವದಲ್ಲಿ ಅಭಿವ್ಯಕ್ತವಾಗುತ್ತಿತ್ತು. ಆ ಅಮಿತಾನಂದದಲ್ಲಿ ಶ್ರೀಗಳವರು ಆ ಕುರುಬ ಹಿರಿಯರನ್ನು ಉದ್ದೇಶಿಸಿ ಹೀಗೆ ಹೇಳುವರು :

"ಇದೆಲ್ಲ ಹೀಗೆಯೆ ಇರಲಿ. ಹೆಚ್ಚು ಒಳಿತಾಯಿತು. ನಾವು ಬಂದ ಕೆಲಸ ಕೈಗೂಡಿದಂತಾಯಿತು; ಇದೋ ನೋಡು ಮುದುಕ! ಈ ಬಟ್ಟೆ ಚಿಂದಿಗಳು ಈಗ ಹ್ಯಾಂಗ ಎಲ್ಲಿ ಬಿದ್ದಾವ ಹಾಂಗ ಅಲ್ಲೇ ಬಿದ್ದಿರಲಿ. ಅವಿದ್ದಲ್ಲಿಗೆ ಯಾರನ್ನೂ ಅಡ್ಡಾಡಲು ಬಿಡಬೇಡ. ಅತ್ತ ಈ ಕುರಿ ನಾಯಿಗಳು ಹೋದಾವು ; ಹೆಚ್ಚು ಜೋಕೆ. ನಾವು ನಾಳೆ ನೋಡಲಿಕ್ಕೆ ಇಲ್ಲಿಗೆ ಮತ್ತೆ ಬರುತ್ತೇವೆ. ನಾವು ಬರುವವರೆಗೆ ಇವೆಲ್ಲ ಕೆಡದಂತೆ ನೋಡಿಕೊಳ್ಳಿರಿ. ಏನು ಭರಮಪ್ಪಾ?–"ಎಂದು ಹೆಚ್ಚು ಕಟ್ಟು ನಿಟ್ಟಿನಿಂದ ಶ್ರೀಗಳು ಹೇಳಲು, ಆ ಕುರುಬ ಮುದಕಪ್ಪ – "ಇಲ್ಲೇಳ್ರಪ್ಪಾ, ನೀ ಕಾಳಜಿ ಬಿಟ್ಟು ಹೋಗಿ ಬಾ! ಇದನ್ನೆಲ್ಲ ನೀ ಹೇಳಿದಂತೆ ನಾ ನೋಡಿಕೊಂತೀನಿ! ಇದರ ಕಾಳಜಿ ಬಿಟ್ಟ ಬಿಡ್ರಿ", ಎಂದು ಹೇಳಿ ತನ್ನ ಮಗನನ್ನು ಕರೆದು, ತನ್ನಲ್ಲಿರುವ ದೀಪವನ್ನು ಕೊಟ್ಟು ಹೋಗಿ ಅಪ್ಪನ್ನ ಮಠಕ್ಕೆ ಬಿಟ್ಟು ಬಾ ಎಂದು ಹೇಳಿ ಕಳಿಸಿ ಕೊಡುವನು.

ಮರುದಿನ ಉಷೋದಯಕ್ಕೆ ಮುನ್ನ ಶ್ರೀಗಳವರು ಶಾಸ್ತ್ರಿಗಳನ್ನು ಎಬ್ಬಿಸುವರು. ನಿನ್ನೆ ತಾವು ಕಂಡು ಬಂದ ಭೂತವನ್ನು ತೋರಿಸುವುದಾಗಿ ತಿಳಿಸುವರು. ಶಾಸ್ತ್ರಿಗಳು ಚಕಿತರಾಗುವರು. ರಾತ್ರಿ ಕಾಣುವ ಕೊಳ್ಳಿ ದೆವ್ವ ಹಗಲು ಹೇಗೆ ಕಾಣುತ್ತವೆ. ನೀವೇನು ನನಗೆ ಹುಡುಗಾಟ ಮಾಡಲಿಕ್ಕೆ ಹತ್ತಿರುವಿರಾ?

ಇಲ್ಲ, ದಿಟಕ್ಕೂ ಇಲ್ಲ, ನಿಮಗೇಕೆ ಹುಡುಗಾಟ ಮಾಡೋಣ ? ನಿನ್ನೆ ನೀವೇ ಜಿದ್ದು ಹಾಕಿದ್ದಿರಿ. ಕಣ್ಮುಟ್ಟ ತೋರಿಸಿರುವೆನು. ಸೋಲೊಪ್ಪಿಕೊಳ್ಳಿರೆಂದು ಹೇಳಿದ್ದಿರಿ. ಒಪ್ಪೋದು ಬಿಡೋದು ಆ ಮೇಲಿನ ಮಾತು. ಈಗ ಮಾತ್ರ ನೀವು ನಮ್ಮ ಜೊತೆಗೆ ಬನ್ನಿ. ಬಹಿರ್ದೇಶಕ್ಕೆ ಹೋಗಿ ಬಂದಂತೆಯೂ ಆಗುತ್ತದೆ. ನಿಜ ಸಂಗತಿಯೂ ಗೊತ್ತಾಗುತ್ತದೆ. ಎಂದು ಹೇಳಿ ಒಪ್ಪಿಸಿ ಜೊತೆಗೆ ಕರೆದುಕೊಂಡು ಹೋಗುವರು. ಕುರಿದೊಡ್ಡಿ ತಲುಪುವರು. ಸುಟ್ಟ ಬಟ್ಟೆ ಬಿದ್ದಲ್ಲಿಗೆ ಶಾಸ್ತ್ರಿಗಳನ್ನು ಕರೆದೊಯ್ದು ತೋರಿಸುವರು. ನಿನ್ನೆ ನೀವು ತೋರಿಸಿದ ಕೊಳ್ಳಿ ದೆವ್ವಗಳು ಇವೇ

ನೋಡಿರಿ. ಇವು ಬಿದ್ದ ಬಗೆ ಹೇಗೆಂಬುದನ್ನು ಈ ಕುರುಬರು ಹೇಳುತ್ತಾರೆ ಕೇಳಿರಿ. ಎಂದು ಎಲ್ಲವನ್ನೂ ಇದ್ದಕ್ಕಿದ್ದಂತೆ ಹೇಳಿಸುವರು. ಕಂಡು ಕೇಳಿ ಶಾಸ್ತ್ರಿಗಳು ತಣ್ಣಗಾಗುವರು. ಸೋಲು ತಮ್ಮ ಪಾಲಿಗೇ ಬಂತೆಂದು ಬಗೆದು ಅವರ ಮೊಗ ಬಿಳಿಚಿಕೊಳ್ಳುವುದು. ಅವರ ಬಾಯಿಂದ ಮಾತೇ ಹೊರಡದಂತಾಗುವುದು. ಮೂಢ ತನಕ್ಕೆ ಮತ್ತೊಂದು ಕಣ್ಣು ಮೂಡಿದಂತಾಗುವುದು.

ಭೂತಗಳ ಅಸ್ತಿತ್ವವನ್ನು ಯಾವ ಸ್ವಾಮಿಗಳೆ ಆಗಲಿ, ಯಾವ ಶಾಸ್ತ್ರಿಗಳೆ ಆಗಲಿ, ಬೇರೆ ಯಾವ ವ್ಯಕ್ತಿಯೆ ಆಗಲಿ ನಂಬುತ್ತಿದ್ದರೆ ಅವರ ಬುದ್ಧಿ ಅಪಕ್ವ ವಿದೆಯೆಂದು ಹೇಳದೆ ವಿಧಿಯಿಲ್ಲ. ದೇಹದಲ್ಲಿದ್ದ ಆತ್ಮಗಳು ಅಂತ್ಯದಲ್ಲಿ ಬಯಲಿನಲ್ಲಿ ಬಯಲಾಗಿ ಆಯಾ ಭೂತ ಪಂಚಕಗಳಿಗೆ ಹಂಚಿಹೋದ ಮೇಲೆ ಮತ್ತೇಕೆ ಮರಳಿ ಬಂಧನಕ್ಕೆ ಬರುವವು ? ಒಂದು ಜೀವಂತ ದೇಹದಲ್ಲಿ ಇನ್ನೊಂದು ಆತ್ಮ ಬಂದು ಸೇರಿಕೊಳ್ಳುವುದು ಅಷ್ಟೊಂದು ಸುಲಭವಾಗಿ ಸಾಧ್ಯವಿಲ್ಲ.

ಧೈರ್ಯವುಳ್ಳ ಪುರುಷನಿಗೆ ಎಂದೂ ಇಂತಹ ದೆವ್ವಗಳು ಬಡಿದುಕೊಳ್ಳಲಾರವು. ಅಸಲು ದೆವ್ವಗಳು ಇದ್ದರಲ್ಲವೆ ? ಇನ್ನು ಅಶಕ್ತ ಸ್ತ್ರೀಯರು ಪುಕ್ಕರಿದ್ದರೆ ಅವರ ಬಾಣಂತಿ ಅವಸ್ಥೆಯಲ್ಲಿ ಕತ್ತಲಲ್ಲಿ ಎಲ್ಲಿಗಾದರೂ ಹೋದಾಗ ಹೆದರಿಕೊಂಡರೆ ಅವರ ಪ್ರಜ್ಞಾವಸ್ಥೆಯ ಮೇಲೆ ಒಮ್ಮೆಗೆ ಆಘಾತವುಂಟಾಗುವುದು. ಆಗ ಅವರು ವಿಚಿತ್ರವಾಗಿ ವರ್ತಿಸುವರು, ಈ ವರ್ತನೆಗೆ ದೆವ್ವ ಎಂದು ಮೂಢ ಜನರ ಕಲ್ಪನೆ. ಹೀಗೆ ಮನೋವಿಜ್ಞಾನದ ತಳಹದಿಯ ಮೇಲೆ ಮೀಮಾಂಸಿಸುವರು.

ಮನುಷ್ಯರ ಮೈಯಲ್ಲಿ ದೇವರು ಬರುವುದು, ಮತ್ತು ಹೇಳಿಕೆ ಹೇಳುವುದು ಇವುಗಳ ಬಗೆಗೆ ಶಿವಾಚಾರ್ಯರು ತೀರ ಕಠೋರವಾಗಿ ಖಂಡಿಸುತ್ತಾರೆ. ದೇವರು ಮೈಯಲ್ಲಿ ಬರುವ ಜನರು ಯಾವ ಮಹಾನುಭಾವರೂ ಅಲ್ಲ. ಯೋಗಿಗಳಲ್ಲ, ತ್ಯಾಗಿ ಗಳಲ್ಲ, ಸಂತ ಶರಣರು ಮೊದಲೇ ಅಲ್ಲ. ಸಾಮಾನ್ಯವಾಗಿ ಸ್ಥಾವರ ಗುಡಿಯಲ್ಲಿರುವ ಕಲ್ಲು ದೇವರ ಪೂಜೆ ಮಾಡುತ್ತ ಉದರ ನಿರ್ವಹಣೆ ಮಾಡಿಕೊಳ್ಳುವ ಈ ಹುಲು ಮಾನವರ ಮೈಯಲ್ಲಿ ದೇವರು ಬರುವನೆಂದರೆ ನಂಬಲು ಸಾಧ್ಯವೆ ?

ಹಗಲು ಎರಡು ಮೂರು ಹೊತ್ತು ಶಿವಾರ್ಚನೆಯ ಮಾಡಿಕೊಂಡು ದಿನವೆಲ್ಲ ಶಿವಧ್ಯಾನ, ಶಿವಚಿಂತನಗಳಲ್ಲಿ ಕಾಲ ಕಳೆವ ಶಿವಯೋಗಿಗಳಿಗೂ, ಸದಾವಕಾಲ ಈಶ್ವರ ಪ್ರಾರ್ಥನೆ-ಲೋಕಸೇವೆ ಇವುಗಳಲ್ಲಿ ನಿರತರಾದ ಸಂತ ಮಹಾತ್ಮರಿಗೂ ಸರಿಯಾಗಿ ತೋರದ ಶರೀರದಲ್ಲಿ ಬಾರದ ದೇವರು, ತಮ್ಮ ಜೀವಾವಧಿ ಗುಡಿಯ ಭಕ್ತರ ದಾನ ದಕ್ಷಿಣೆ ನೈವೇದ್ಯ ಸೀದಾಗಳ ಮೇಲೆ ತಮ್ಮ ಪ್ರಪಂಚವನ್ನು ಸಾಗಿಸುವ ಈ ಭಂಡರಿಗೆಲ್ಲಾ ಮೈಯೊಳಗೆ ಬರುವನೆ ? ಸುಮ್ಮನೆ ಬರುವನೆಂದರೆ ನಂಬಬಹುದೆ ? ಮೂಢ ಭಕ್ತರನ್ನು ಮೋಸ ಮಾಡಿ ಅವರಿಂದ ಹಣ ಸೆಳೆದುಕೊಳ್ಳುವ ಗತ್ತುಗಾರಿಕೆ ಇದೆಲ್ಲಾ ! ಎಂದು ಕಟುವಾಗಿ ಟೀಕಿಸುತ್ತಾರೆ.

# ೧೦. ಪವಾಡಗಳ ಪರಾಮರ್ಶೆ !

ಪುರಾಣ ಪುಣ್ಯಕಥೆಗಳಲ್ಲಿ ವರ್ಣಿತವಾದ ರಂಜಿತ ಪವಾಡಗಳನ್ನು ಶಿವಾಚಾರ್ಯರು ನಂಬುವುದೆ ಇಲ್ಲ. ನಂಬದಿರುವುದಕ್ಕೆ ಅವುಗಳಲ್ಲಿ ಅರ್ಥವತ್ತತೆ ಇಲ್ಲದಿರುವುದೆ ಕಾರಣ ಜೀವನ ಘಟನೆಗಳಿಗೆ ಹೊಂದದಿರುವ ಅಸಂಭಾವ್ಯತೆಯೆ ಕಾರಣ. ಪವಾಡಗಳಲ್ಲಿ ಸಂಭಾವ್ಯ-ಅಸಂಭಾವ್ಯ ಎಂದು ಎರಡು ತೆರ. ಇವುಗಳಲ್ಲಿ ಅಸಂಭಾವ್ಯ ಪವಾಡ ಗಳನ್ನು ನಂಬಲೇಬಾರದು; ಅವು ಬರೀ ಓದಲು ಕೇಳಲು ಮಾತ್ರ ರಮ್ಯವಾಗಿರುತ್ತವೆ ಯಲ್ಲದೆ ಅನುಸರಿಸಲು ಅನುಕೂಲವಾಗಿರವು. ಜನ ಜೀವನಕ್ಕೆ ಅವುಗಳಿಂದ ಉಪಯೋಗವೂ ಆಗದು, ವಿಶಾಲ ಶೀಲರು ಅವನ್ನು ನಂಬದಿರಲಿ: ಆ ಮಹಾನು ಭಾವರ ಜೀವನದಲ್ಲಿ ಶ್ರದ್ಧೆಯನ್ನೂ ಇಡರು.

ಸಂಭಾವ್ಯ ಪವಾಡಗಳು ಕಾಕತಾಲೀಯ ನ್ಯಾಯದಂತೆ ಘಟಿಸುತ್ತವೆ. "ಕಾಗೆ ಕುಳಿತುಕೊಳ್ಳುವುದಕ್ಕೂ ಕೊಂಬೆ ಮುರಿಯುವುದಕ್ಕೂ ಮೇಳವಾಯಿತು" ಎಂಬಂತೆ ಈ ಘಟನೆಗಳು ಸಹಜವಾಗಿ ಸಂಭವಿಸುತ್ತವೆ. ಇವಕ್ಕೆ ಕಥಾನಾಯಕ ನಿಮಿತ್ತ ಮಾತ್ರನಾಗಿರುತ್ತಾನೆ-ಕಾಗೆಯಂತೆ ! ಕೊಂಬೆ ಮುರಿಯುವುದಕ್ಕೆ ಕಾಗೆಯ ಭಾರವೇನೂ ಉಪಾದಾನ ಕಾರಣವಾಗಿರುವುದಿಲ್ಲ. ಅದು ಅಷ್ಟೊಂದು ಭಾರ ಇರುವುದೂ ಇಲ್ಲ. ಇಂತಹ ಘಟನೆಗಳು ಅಸಾಮಾನ್ಯರಿಂದಲೇ ನಡೆವವೆಂತಲ್ಲ; ಅನೇಕ ಸಲ ಸಾಮಾನ್ಯ ರಿಂದಲೂ ಎಷ್ಟೋ ಸಂಭವಿಸಿರುತ್ತವೆ. ಅಂಥವುಗಳು ಪ್ರಚಾರಕ್ಕೆ ಬಂದಿರುವುದಿಲ್ಲ.

ಅದ್ಭುತ ಪವಾಡಗಳ ಪ್ರಚಾರಕ್ಕೆ ಸಾಂಪ್ರದಾಯಿಕ ಸಾಹಿತಿಗಳು ಕವಿಗಳು ಮಾಧ್ಯಮರಾಗಿರುತ್ತಾರೆ. ಇವರು ಮಹಾ ವ್ಯಕ್ತಿಯ ಚರಿತ್ರೆಯನ್ನು ಬರೆಯುವಾಗ ಅವರ ಹಿರಿಮೆ ಗರಿಮೆ ಮಹಿಮೆ ಹೆಚ್ಚಬೇಕೆಂದು ಅವರ ಬಾಳಿನಲ್ಲಿ ನಡೆದ ಕಾಕ ತಾಲಿಕ ಪ್ರಸಂಗಗಳನ್ನೇ ಹಿಗ್ಗಿಸಿ ಬಣ್ಣತುಂಬಿ ಬಣ್ಣಿಸಿ ಅಗಾಧತೆಗೆ ಏರಿಸುತ್ತಾರೆ. ಒಮ್ಮೊಮ್ಮೆ ಕಾವ್ಯದ ಸಾಂಕೇತಿಕ ಶೈಲಿಯಲ್ಲಿ ಸೂತ್ರಿಸುತ್ತಾರೆ. ಸಾಂಕೇತಿಕದ ಹಿನ್ನೆಲೆ ಯಲ್ಲಿ ಸತ್ಯತೆಯ ಚಿತ್ರವಿರುತ್ತದೆ. ಆದರೆ ಅದನ್ನು ಕಾಣುವ ಕಣ್ಣು ಓದುವ ಸಹೃದಯರಿಗಿರಬೇಕು. ನಿದರ್ಶನಕ್ಕಾಗಿ, ಮಹಾತ್ಮಾ ಗಾಂಧೀಜಿ ಅವರಿಗೆ ಒಂದು ಊರಲ್ಲಿ ಯಾರೋ ಒಬ್ಬರು ಹತ್ತು ನೂರು ಹೂ ವುಳ್ಳ ಹಾರವೊಂದನ್ನು ಹಾಕುವರು; ಅದನ್ನು ಹರಾಜು ಮಾಡಲು ಬೇರೊಬ್ಬ ಸಿರಿವಂತನು ಹತ್ತುಸಾವಿರ ರೂಪಾಯಿಗಳಿಗೆ ಕೊಳ್ಳುತ್ತಾನೆ. ಇದನ್ನು ನೋಡಿದ ಕವಿಯೊಬ್ಬನು ಮಹಾತ್ಮಾ ಗಾಂಧೀಜಿಯವರು "ಹೂವನ್ನು ಹೊನ್ನಾಗಿಸಿದರು" ಎಂದು ಹೇಳುತ್ತಾನೆ. ಈ ಪವಾಡದ ಹಿನ್ನೆಲೆ

ಸುಳ್ಳೇನು ? ಗಾಂಧೀಜಿ ತನ್ನ ಅಮೃತಮಯ ಹಸ್ತ ಮುಟ್ಟಿದ್ದಕ್ಕೆ ತಾನೆ ಆ ಹಾರಕ್ಕೆ ಅಷ್ಟೊಂದು ಬೆಲೆ ! ಇಲ್ಲವಾದರೆ ಹೊತ್ತು ಬಿದ್ದರೆ ಬಾಡಿ ಬತ್ತಿಹೋಗುವ ಅದನ್ನು ಹತ್ತುರೂಪಾಯಿಗೆ ಕೊಳ್ಳುವವರಾರು ? ಈ ಬಗೆಯ ಭಾವಪೂರ್ಣ ವರ್ಣನೆ ಕವಿಗೂ ಕಾವ್ಯನಾಯಕನಿಗೂ ಇನ್ನಷ್ಟು ಮತ್ತಷ್ಟು ಕೀರ್ತಿಯನ್ನು ತರಬಲ್ಲುದಲ್ಲವೆ ?.

ಶ್ರೀ ಶಾಂತವೀರ ಶಿವಾಚಾರ್ಯರೇ ನಿರೂಪಿಸುವ ಇನ್ನೊಂದು ನಿದರ್ಶನವನ್ನು ನೋಡಿರಿ.

ಹಿಂದಿನ ಶ್ರೀ ಗುರುಪಾದ ಶಿವಯೋಗಿಗಳು ಶ್ರೀ ಮಠದಲ್ಲಿ ಕುಳಿತಿರುವರು. ಅವರ ಸುತ್ತಲೂ ಶಿಷ್ಯರು ಮುತ್ತಿಕೊಂಡಿರುವರು. ಆಗ ಇದ್ದಕ್ಕಿದ್ದಂತೆ "ಅದೋ ಒಂದು ಜ್ಯೋತಿ ಬರಹತ್ತಿದೆ, ಅವರನ್ನು ಸ್ವಾಗತಿಸೋಣ ನಡೆಯಿರಿ." ಎಂದು ನುಡಿದರಂತೆ ! ಅವರ ಅಪ್ಪಣೆಯಂತೆ ಕಾಖಂಡಿಕಿ ಊರಿನ ಹೊಲಬಿನಲ್ಲಿ ನಸು ದೂರ ಬರುತ್ತಿರುವಂತೆ ಶ್ರೀಶೈಲದ ಜಡಿಸ್ವಾಮಿಗಳೆಂಬವರು ಅತ್ತಿಂದ ಆಗಮಿಸುತ್ತಿರುವುದು ಕಾಣಿಸುವುದು. ಎಲ್ಲರಿಗೂ ಎಲ್ಲಿಲ್ಲದ ಸಂತಸ. ದಾವಿಸಿ ಮುನ್ನಡೆವರು. ಸಮೀಪಿಸಿ ದೊಡನೆ ಇಬ್ಬರು ಮಹಾನುಭಾವರು ಪರಸ್ಪರ ತೋಳತೆಕ್ಕೆಯೊಳಗಾಗುವರು. ಬಳಿಕ ಬಂದವರನ್ನು ಶ್ರೀಮಠಕ್ಕೆ ಕರೆತರುವರು.

ಇದೊಂದು ಸಂಭಾವ್ಯ ಪವಾಡವೆಂದು ಒಪ್ಪಲಡ್ಡಿಯಿಲ್ಲ, ನಮ್ಮ ಜ್ಞಾನೇಂದ್ರಿಯ ಗಳಾದ ಕಿವಿ ಕಣ್ಣುಗಳಿಗೆ ದೂರದ ಧ್ವನಿ ತರಂಗ-ದೀಪ್ತಿ ತರಂಗಗಳನ್ನು ಗ್ರಹಿಸುವ ಶಕ್ತಿಯಿಲ್ಲ. ಆದರೆ ಸಾವಿರಾರು ಮೈಲುಗಳಾಚೆಯ ತರಂಗಗಳನ್ನು ಗ್ರಹಿಸುವ ರೇಡಿಯೋ ಟೆಲಿವಿಜನ್‌ಗಳು ನಮಗಿಂದು ನೋಡಸಿಗುವುವು. ಇದು ವಿಜ್ಞಾನಿಗಳ ಸೃಷ್ಟಿ. ವಿದ್ಯುತ್ತಿನ ಸಹಾಯದಿಂದ ವಿಜ್ಞಾನ ವಸ್ತುಗಳಲ್ಲಿ ಅಗಾಧ ಶಕ್ತಿಯನ್ನು ವಿಜ್ಞಾನಿಗಳು ತುಂಬಿರುವರು. ಇದಕ್ಕೂ ಮಿಗಿಲಾಗಿ ಮನುಷ್ಯನ ಮೈಯಲ್ಲಿಯೂ ವಿದ್ಯುತ್ತಿದೆ. ಮಾನವರ ಮೈಗಳಲ್ಲಿ ವಿದ್ಯುತ್ತು ಪ್ರವಹಿಸಬಲ್ಲುದೆಂಬ ಸಂಗತಿ ಸರ್ವರಿಗೂ ಖಚಿತವಾದ ವಿಷಯ. ಹಿಂದಿನ ಅನೇಕ ಜನ ಯೋಗ ಸಿದ್ಧರು, ತಮ್ಮ ಸಿದ್ಧಿಯ ಬಲದಿಂದ ಇಂದು ರೇಡಿಯೋ ಟೆಲಿಫೋನುಗಳಲ್ಲಿ ಹುದುಗಿದಂತಹ ಶಕ್ತಿಯನ್ನು ಕರಗತ ಮಾಡಿಕೊಂಡಿದ್ದರೆಂಬುದು ಸರ್ವವೇದ್ಯವಾದ ಮಾತು. ಅಂತಹದೇ ಆದ ಶಕ್ತಿಯನ್ನು ಶ್ರೀ ಗುರುಪಾದ ಶಿವಯೋಗಿಗಳವರು ತಮ್ಮ ಶಿವಯೋಗ ಬಲದಿಂದ ಅಂಗವಿಸಿ ಕೊಂಡಿದ್ದರು. ಅದರಿಂದ ಅವರು ದೂರದಲ್ಲಿ ಬರುವ ಜಡೆ ಸ್ವಾಮಿಗಳವರ ಆಗಮನವನ್ನು ತಮ್ಮ ಅಂತರ್ದೃಷ್ಟಿಯಿಂದ ಪೂರ್ವಗ್ರಾಹಿಯಾಗಿ ಅರಿತುದು ಅಚ್ಚರಿ ಯೇನಲ್ಲ, ಮೆಚ್ಚದಿರುವ ಅದ್ಭುತ ಅಸಂಭಾವ್ಯ ಪವಾಡವೇನಲ್ಲ.

ಜನರಿಂದ ಇವರನ್ನು ಬಳಸಿ ಬಂದ ಪವಾಡಗಳುಂಟು. ಅವುಗಳಲ್ಲಿ ಹರಳೇಶ್ವರಾ ಶ್ರಮದಲ್ಲಿ ನಡೆದ ಆರಾಧನೆಯಲ್ಲಿ ಜನಗಳಿಗೆ ಕುಡಿಯಲಿಕ್ಕೆ ನೀರಿಲ್ಲದಾಗ ನೀರು

ಬರಿಸಿ 'ಕುಮಾರ ತೀರ್ಥ'ವೆಂದು ಹೆಸರಿಸಿದುದೊಂದು, ಮತ್ತೊಮ್ಮೆ ತೀರ್ಥದಲ್ಲಿ ನೀರು ಬತ್ತಿ ನಿಂತಾಗ ಹಸ್ತಮುಟ್ಟಿ ನೀರು ಬರಿಸಿದುದು, ಬಬಲೇಶ್ವರದ ಹಂಚಿನಾಳ ಬಸಪ್ಪನವರ ಕಾರುಣ್ಯ ಶಿಶುವಿಗೆ ಬಂದ ಅಸ್ವಾಸ್ಥ್ಯವನ್ನು ಹಸ್ತ ಪ್ರಸಾದವನ್ನಿತ್ತು ಮೇಲು ಮಾಡಿದುದು, ಗದಗಿನಲ್ಲಿ ಡಾಕ್ಟರರೊಬ್ಬರ ಹೊಟ್ಟೆನೋವನ್ನು ಹೋಗಲಾಡಿಸಿದುದು-ಇವು ಮುಖ್ಯವಾದವುಗಳು. ಇವನ್ನು ಜನರು ಅಸಂಭಾವ್ಯ ಪವಾಡಗಳನ್ನಾಗಿ ಹಬ್ಬಿಸಿದ್ದಾರೆ. ಆದರೆ ಇವುಗಳಲ್ಲಿ ನನ್ನ ಯಾವ ಅದ್ಭುತ ಪವಾಡಗಳಿಲ್ಲ. ಇವೆಲ್ಲವೂ 'ಕಾಕತಾಲನ್ಯಾಯ'ದಂತೆ ನಡೆದುಹೋದವುಗಳು, ಇವುಗಳಲ್ಲಿ ನನ್ನ ಹೆಚ್ಚಳವೇನಿಲ್ಲ. ಎಂದು ಹೇಳಿಬಿಡುತ್ತಾರೆ.

### "ಗುರು" ನಿರ್ವಚನ :

'ಗುರು' ಶಬ್ದದ ನಿರ್ವಚನ ಈ ರೀತಿಯಿದೆ ; ಗು–ಅಂಧಕಾರ ಸೂಚ್ಯರ್ಥಕ, ರು–ರಹಿತಾರ್ಥಕ. ಅಂಧಕಾರವನ್ನು ದೂರ ಮಾಡುವವನೇ ಗುರು. ಇಲ್ಲಿ ಅಂಧಕಾರ ಯಾವುದೆಂದರೆ–ಅಜ್ಞಾನಾಂಧಕಾರ. "ಗು ಶಬ್ದಸ್ತಂಧಕಾರಸ್ತು, ರು ಶಬ್ದೋ ರಹಿತಾರ್ಥಕಃ" ಈ ಶ್ಲೋಕ, ಗುರು ಶಬ್ದದ ನಿರ್ವಚನವೆಂದು ಹೇಳುವರು. 'ಗುರು'–ಈತ ವ್ಯಾವಹಾರಿಕವಾಗಿ ವಿದ್ಯಾಗುರು ; ಧಾರ್ಮಿಕವಾಗಿ ಸಮಾಜದಲ್ಲಿ ಧರ್ಮಗುರು. ಧರ್ಮಗುರುವಿಗೆ ಪಟ್ಟಾಧಿಕಾರವಿದೆ ; ಸಾಮಾಜಿಕ ಸರ್ವಾಧಿಕಾರ ಈತನಿಗಿದೆ. ಹೇಗೆ ಒಂದು ರಾಜ್ಯದ ಅಧಿಪತಿ ರಾಜನೋ, ಹಾಗೆ ಧರ್ಮ ಸಾಮ್ರಾಜ್ಯದ ಅಧಿಪತಿ ಶ್ರೀಗುರು. ರಾಜನಿಗೆ ರಾಜ್ಯದ ಹೊಣೆ. ಶ್ರೀಗುರುವಿಗೆ ಸಮಾಜದ ಹೊಣೆ. ರಾಜನಂತೆ ಧರ್ಮಗುರುವೂ ಸಹ ತನ್ನ ಧರ್ಮ ಸಾಮ್ರಾಜ್ಯದ ಧರ್ಮ ಪೀಠವನ್ನು ಏರಿ ಪಟ್ಟಾಭಿಷಿಕ್ತನಾಗುತ್ತಾನೆ. ತಾನು ಯಾವ ಧರ್ಮದ ಪೀಠವನ್ನೇರುವನೋ ಆ ಸಂಪ್ರದಾಯ ಸಮಾಜದ ಹೊಣೆಗಾರಿಕೆ ಧರ್ಮಗುರುವಿಗಿರುತ್ತದೆ.

'ಗುರು' ಪದದ ಅರ್ಥ ವಿವರಣೆಯಲ್ಲಿಯೆ ಗುರುವಿನ ಲಕ್ಷಣ ಅಡಕವಾಗಿದೆ. ಶ್ರವಣ ಭಕ್ತಿಯಲ್ಲಿರುವವರ ಅಜ್ಞಾನವನ್ನು ದೂರ ಮಾಡುವವನೆ ಗುರು. ತನ್ನ ನುಡಿಯಿಂದ ನಡೆಯಿಂದ ಬೋಧಿಸುವ ಶಕ್ತಿಯುಳ್ಳಾತನೆ ಗುರು. ಗುರು ಶ್ರೋತ್ರೀಯನೂ ಬ್ರಹ್ಮ ನಿಷ್ಠನೂ ಆಗಿರಬೇಕು.

'ವಿವೇಕ ಚಿಂತಾಮಣಿ' ಗ್ರಂಥದಲ್ಲಿ ಶ್ರೀ ನಿಜಗುಣರು ನಿರೂಪಿಸಿದ ಗುರುವಿನ ಎಂಟು ಲಕ್ಷಣಗಳು ನನಗೆ ಸಮ್ಮತ ; ಎಂದು ಶಿವಾಚಾರ್ಯರು ಹೇಳುತ್ತಾರೆ.

ಗುರುವಿಗೆ ದೇಶಿಕನೆಂದು ಮತ್ತೊಂದು ಅನ್ವರ್ಥಕ ನಾಮ. 'ದಿಶತೀತಿ ದೇಶಿಕಃ' ಉಪದೇಶಿಸುವವನು ದೇಶಿಕನು. ಇವನು ಧರ್ಮದರ್ಶಿ, ದೇವದರ್ಶಿ ; ದಿವ್ಯದರ್ಶಿ. ಉಪದೇಶ ಗುರು ಮೂರು ಪ್ರಕಾರ : ವಚನೋಪದೇಶ ಗುರು, ವರ್ತನೋಪದೇಶ

ಗುರು ; ಸಂಜ್ಞೋಪದೇಶ ಗುರು. ಶಾಸ್ತ್ರ ವಿಚಾರವನ್ನು ವಾಕ್ಕಿನಿಂದ ಬೋಧಿಸು ವಾತನೆ ವಚನೋಪದೇಶ ಗುರು. ಸ್ವಾನುಭವವನ್ನು ತನ್ನ ಆಚಾರಗಳಿಂದ ಬೋಧಿಸು
ವಾತನೆ ವಚನೋಪದೇಶ ಗುರು. ಸ್ವಾನುಭವವನ್ನು ತನ್ನ ಆಚಾರಗಳಿಂದ ಬೋಧಿಸು
ವಾತನೆ ವರ್ತನೋಪದೇಶ ಗುರು. ನುಡಿಯದೆ ನಡೆಯದೆ ಕೇವಲ ಸಂಜ್ಞಾರೂಪವಾಗಿ ಉಪದೇಶಿಸುವಾತನೆ ಸಂಜ್ಞೋಪದೇಶ ಗುರು.

ಶಬ್ದೋಪದೇಶ–ಸಂಜ್ಞೋಪದೇಶಗಳ ಅಂತರವನ್ನು ಶಿವಾಚಾರ್ಯರು ತಮ್ಮದೇ ಆದ ಒಂದು ದೃಷ್ಟಾಂತದಿಂದ ಮನಂಬುಗುವಂತೆ ಸಮರ್ಥಿಸುತ್ತಾರೆ. ಅದಿಂತಿದೆ :

ಒಬ್ಬನು ಒಂದು ಗಿಳಿ ಸಾಕಿದ್ದ. ಅದನ್ನು ಒಂದು ಪಂಜರದಲ್ಲಿರಿಸಿದ್ದ. ಆತನ ಮನೆಯ ಮುಂದೆ ಒಂದು ಔದುಂಬರ (ಔಡಲ) ಮರವಿತ್ತು. ಅದರ ಒಂದು ರೆಂಬೆಗೆ ಗಿಳಿಯಿರುವ ಪಂಜರವನ್ನು ಯಾವಾಗಲೂ ಹಾಕಿರುತ್ತಿದ್ದ. ಗಿಳಿಗೆ ಯಾವ ತೆರನಾದ ಕೊರತೆಯಿರಲಿಲ್ಲ. ಅದಕ್ಕೆ ಬೇಕಾದ ಅನ್ನ ನೀರುಗಳನ್ನು ಅದರಲ್ಲಿರಿಸಿದ್ದ. ಆದರೂ ಆ ಗಿಳಿಗೆ ಮಾನಸಿಕ ಶಾಂತಿಯಿರಲಿಲ್ಲ. ಅದು ಸದಾ ಚಿಂತಾಮಗ್ನವಾಗಿರುತ್ತಿತ್ತು. ಏಕೆಂದರೆ, ಅದೇ ಗಿಡದ ಮೇಲೆ ತನ್ನ ಜಾತೀಯ ಹಲವು ಗಿಳಿಗಳು ಬಂದಿರುತ್ತಿದ್ದವು. ಅವು ಸ್ವಚ್ಛಂದವಾಗಿ ಸಂಚರಿಸುತ್ತಿದ್ದವು ; ಸಂತೋಷಿಸುತ್ತಿದ್ದವು. ಪರಸ್ಪರ ಪ್ರೇಮಿಸುತ್ತಿದ್ದವು. ಇದನ್ನೆಲ್ಲ ಬಂಧನದ ಗಿಳಿ ನಿತ್ಯ ನೋಡುತ್ತಿತ್ತು. ತನ್ನ ಮನದಲ್ಲಿ ಇಂತು ವಿಚಾರಿಸುತ್ತಿತ್ತು : "ಹಾ ! ನನ್ನ ಪಾಡು ಏನಿದು ? ಅವುಗಳಂತೆ ನನಗೂ ರೆಕ್ಕೆಗಳಿವೆ ; ಶಕ್ತಿಯಿದೆ. ಇದ್ದರೇನು ? ಅವುಗಳಂತೆ ಸ್ವೇಚ್ಛೆಯಾಗಿ ಹಾರಾಡುವಂತಿಲ್ಲ. ಪ್ರೇಮಿಸಲು ಪಕ್ಕದಲ್ಲಿ ಮತ್ತೊಂದು ಗಿಳಿಯಿಲ್ಲ. ನನಗೇಕೆ ಈ ಬಂಧನ ? ಬಳಗ ವಿಚ್ಛೇದನ ? ಈ ಪಂಜರದಲ್ಲಿರುವಿಕೆಯ ಕೊನೆ ಯಾವಾಗ ? ಹೇಗೆ ಇದರಿಂದ ಬಿಡುಗಡೆಯಾದೀತು ? ನಾನು ಯಾವಾಗ ಅವುಗಳಂತೆ ಸ್ವೈರವಾಗಿ ರೆಕ್ಕೆ ಬಿಚ್ಚಿ ಆಕಾಶದಲ್ಲಿ ಹಾರಾಡುವ ಕಾಲ ಬಂದೀತು ?" ಎಂಬೀ ಚಿಂತೆಯಲ್ಲಿಯೆ ಅದು ಕಾಲ ಕಳೆಯುತ್ತಿತ್ತು. ಕಾಲ ಕಳೆದಂತೆ ಅದರ ಕೊರಗಿಗೆ ಕೊನೆಯಿಲ್ಲದಾಯಿತು.

ಕೊನೆಗೆ ಅದಕೊಂದು ಉಪಾಯ ತೋರಿತು. ಹಾದಿಹೋಕರನ್ನು ಕೇಳಿ ತಿಳಿಯಬೇಕೆಂಬುದೆ ಆದಕೆ ಹೊಳೆದ ಉಪಾಯ. ಸರಿ, ಅಂದಿನಿಂದ ಹೀಗೆ ಕೇಳಲು ಮೊದಲು ಮಾಡಿತು: "ಅಣ್ಣಾ-ಅಪ್ಪಾ" ಇಲ್ಲಿ ಬನ್ನಿರಿ ! ಬಂದು ನನ್ನ ಬಂಧನವನ್ನು ಬಿಡಿಸಿರಿ ! ಓ ! ಬಿಡಿಸುವ ಒಡೆತನ ನಿಮಗಿಲ್ಲವೆ ? ಹೋಗಲಿ ; ಈ ಪಂಜರದಿಂದ ಹೊರಕ್ಕೆ ಹೋಗುವ ಹಂಚಿಕೆಯನ್ನಾದರೂ ಹೇಳಿಕೊಡಲಾರಿರಾ ? – ಎಂದು ಅಂಗಲಾಚಿ ಕಂಡವರನ್ನೆಲ್ಲ ಬೇಡಿಕೊಳ್ಳುತ್ತಿತ್ತು. ಇದರ ಈ ಕೂಗನ್ನು ಯಾರೂ ಕಿವಿಗೆ ಹಾಕಿಕೊಳ್ಳುತ್ತಿರಲಿಲ್ಲ ; ಮನಕ್ಕೆ ತಂದುಕೊಳ್ಳುತ್ತಿರಲಿಲ್ಲ. ಕಂಡು ಕೇಳಿ ಸುಮ್ಮನೆ ತಮ್ಮ ದಾರಿ ಹಿಡಿದು ಹೋಗಿ ಬಿಡುವರು.

ಹೀಗಿರಲು ಮತ್ತೊಂದು ದಿನ ಒಬ್ಬ ದಯಾಳು ಬಂದ. ಆತನ ಮುಂದೆಯೂ ಗಿಳಿ ತನ್ನ ತೊಳಲನ್ನು ತೋಡಿಕೊಳ್ಳುವುದು. ಕೇಳಿ ಆತನ ಮನ ಮರುಗುವುದು.

ಪಂಜರದ ಹತ್ತಿರ ಬರುವನು. ಗಿಳಿಗೆ ಹೀಗೆ ಹೇಳುವನು : "ನೀನೆಂಥ ಹುಚ್ಚನೋ ! ನಿನ್ನ ಒಡೆಯನು ಪಂಜರ ತೊಳೆಯುವಾಗ ಬಾಗಿಲ ತೆರೆದಿರುವನು. ಆಗ ಹೊಂಚಿ ಹೊರಕ್ಕೆ ಹಾರಿ ಹೋಗು" ಎಂದು ವಚನೋಪದೇಶ ಮಾಡಿ ಹೋಗಿ ಬಿಡುವನು.

ಗಿಳಿಗೆ ಈತನ ಈ ಸಲಹೆ ಸರಿಯೆನಿಸಿತು. ಅದಕ್ಕಾಗಿ ಹೊಂಚಿಕೊಂಡಿತ್ತು. ಒಂದು ದಿನ ಅದನ್ನು ಸಾಕಿದವನು ಪಂಜರ ತೊಳೆಯಲು ಬಾಗಿಲನ್ನೇನೊ ತೆರೆಯು ವನು. ಆದರೆ ಹಕ್ಕಿ ಹಾರಿ ಹೋಗದಂತೆ ಆತ ತುಂಬಾ ಎಚ್ಚರಿಕೆಯನ್ನು ವಹಿಸಿದನು. ಆತನ ಕೈಯಿಂದ ಕಣ್ಣಿಂದ ತಪ್ಪಿಸಿಕೊಳ್ಳಲು ಹೊರಕ್ಕೆ ಹಾರಲು ಅದಕ್ಕೆ ಆಗದೆ ಹೋಯಿತು. ರೆಕ್ಕೆಗಳನ್ನು ನಸು ಬಿಚ್ಚಿದರೆ ಸಾಕು ಹಿಡಿದಿರಿಸುತ್ತಾನೆ. ಬಾಗಿಲ ಹಾಕು ತ್ತಾನೆ. ಸಾಧ್ಯವಾಗದಾಯಿತು. ಸಮಸ್ಯೆ ಪರಿಹಾರವಾಗದಾಯಿತು. ಅದು ಮತ್ತೆ ಎಂದಿನಂತೆ ಹಾದಿಹೋಕರನ್ನು ಕುರಿತು ತನ್ನ ಅಳಲನ್ನು ತೋಡಿಕೊಳ್ಳಲು ಮೊದಲು ಮಾಡುವುದು.

ಹೀಗಿರಲು ಒಮ್ಮೆ ಒಬ್ಬ ಸಂತ ಬಂದ. ಆತನನ್ನು ಗಿಳಿ ಕರೆಯಿತು. ಆತನೆದು ರಿಗೆ ತನ್ನ ಮನದಿಚ್ಚೆಯನ್ನು ಬಿಚ್ಚಿ ಹೇಳಿತು. ಪೂಜ್ಯರೆ, ನೀವು ಜ್ಞಾನಿಗಳು, ದಯಾ ಳುಗಳು ; ನೀವು ನಿಮ್ಮ ಬಂಧನದಿಂವ ಮುಕ್ತರಾಗಿರುವಿರಿ, ನೀವಾದರೂ ನನಗೆ ಬಿಡುಗಡೆಯ ಬಟ್ಟೆಯನ್ನು ತೋರಲಾರಿರಾ ? ಶುಕದ ಶೋಕವಾಣಿಯನ್ನು ಆಲಿಸಿ ದೊಡನೆ ಆ ಸಂನ್ಯಾಸಿ ತನ್ನ ಕಣ್ಣು ಗುಡ್ಡೆಯ ತಿರವುತ್ತ ತತ್ತರಿಸುತ್ತ ನೆಲಕ್ಕುರುಳು ವನು. ಲಟಪಲ ಕೈಕಾಲುಗಳನ್ನು ಕಂಪಿಸತೊಡಗುದನು, ಬಳಿಕ ಕಣ್ಣು ಬೆಳ್ಳಗೆ ಮಾಡಿ ಮೂರ್ಛೆ ಹೋದವನಂತೆ ನಟಿಸುವನು. ಇದನ್ನು ಕಂಡ ಗಿಳಿ, ಅಯ್ಯೋ ಇದೇನಾಯಿತು ? ನಾನು ಕೇಳಿದ್ದೆ ತಪ್ಪಾಯಿತೆ ? ಈತನಿಗೆ ಏನಾಯಿತೊ ? ಏದುತ್ತ ಮರಣೋನ್ಮುಖನಾಗಿ ಬಿದ್ದು ಬಿಟ್ಟನಲ್ಲಾ ! ಈತನ ಸಾವಿಗೆ ನಾನೆ ಕಾರಣ ನಾದೆನಲ್ಲಾ ! ನನ್ನದೆಂಥ ದುರದೃಷ್ಟ ? ನಾನೆಂಥ ಪಾಪಿ ? ನಾನೇನು ಮಾಡಲೀಗ ? ಎಂದು ಮುಂತಾಗಿ ತನ್ನನ್ನು ತಾನೆ ಹಳಿಯುತ್ತ ಹಳಹಳಿಸುತ್ತ ಗಾಬರಿಗೊಂಡ ಗಿಳಿ ನೋಡು ನೋಡುತ್ತಿರುವಂತೆ ಆ ಯತಿ ತಟ್ಟನೆ ಎದ್ದು ತನ್ನ ಬಟ್ಟೆಗಳನ್ನು ಕೊಡವಿ ಕೊಂಡ ಗಂಟು ಮೂಟೆಗಳನ್ನು ಹೊತ್ತುಕೊಂಡು ದಳದಳನೆ ದಾರಿ ಹಿಡಿದು ಹೊರಟರು ಹೋಗುವನು.

ಈ ದಾರುಣ ದೃಶ್ಯವನ್ನು ಕಂಡು, ಎದೆ ಒಡೆದುಕೊಂಡು ಗಾಬರಿಕಣ್ಣುಗಳಿಂದ ನೋಡುತ್ತಿದ್ದ ಗಿಳಿ ಯತಿ ಎದ್ದು ಹೋದೊಡನೆ ನಿಶ್ಚಿಂತೆಯಿಂದ ನಿಡಿದಾದ ಉಸಿರು ಬಿಟ್ಟು, ಓ ! ಬದುಕಿದೆಯಾ ಬಡ ಜೀವವೆ ! – ಎಂದಿತು. ಮರು ಚಣದಲ್ಲಿ ಮತ್ತೆ ತನ್ನ ಆಲೋಚನೆಯಲ್ಲಿ ಮುಳುಗುವುದು. ಆ ಯತಿಯು ಹಾಗೇಕೆ ಮಾಡಿದ ? ಅದರ ಅಭಿಪ್ರಾಯವೇನು ? – ಎಂದು ಆಳವಾಗಿ ಆಲೋಚಿಸಿ, ಆತನ ಆ ನಟನೆ ನನಗೆ

ಉಪದೇಶಪರ ಸಲಹೆಯಾಗಿರಬೇಕು. ಇಲ್ಲವಾದರೆ ಆತನು ಹಾಗೆ ಮಾಡುತ್ತಿರಲಿಲ್ಲ. ಮೊದಲು ಕೊನೆಗು ಹದುಳವಾಗಿದ್ದವನು ನಡುವೆ ಮಾತ್ರ ಹಾಗೆ ಮಾಡಲು ಸಾಧ್ಯವಿಲ್ಲ. ಖಚಿತವಾಗಿ ಇದು ನನಗಾಗಿಯೇ ಇರಬೇಕೆಂದು ನಿಶ್ಚಯಿಸಿ ಅದರಂತೆ ಆಚರಿಸಲು ಕಾಲವನ್ನು ಕಾಯ್ದುಕೊಂಡಿತ್ತು.

ಮತ್ತೊಂದು ದಿನ ಗಿಳಿಯವನು ಪಂಜರ ತೊಳೆಯಲು ಅದನ್ನು ಕೆಳಕ್ಕೆ ಇಳಿಸಿ ಅದರ ಬಾಗಿಲ ತೆರೆಯುವನು. ಒಳಗಿದ್ದ ಗಿಳಿ ಪಂಜರದ ತಳಕ್ಕೆ ಬಿದ್ದು ಕಣ್ಣನ್ನು ಬೆಳ್ಳಗೆ ಮಾಡಿ ಕಾಲನ್ನು ಒದರತೊಡಗಿತು. ಇದನ್ನು ಕಂಡು, ಅಯ್ಯೋ ನನ್ನ ಮುದ್ದು ಗಿಳಿಗೆ ಇಂದೇನು ಆಯಿತೋ! ಇದೆಲ್ಲಿ ಸಾಯುವುದೋ! ಎಂದು ಅದರ ಬುಡಕ್ಕೆ ಮೆತ್ತಗೆ ಕೈಹಾಕಿ ಎತ್ತಿ ಪಂಜರದಿಂದ ಹೊರಕ್ಕೆ ತೆಗೆಯುವನು. ಏನೇನೋ ಉಪಚಾರ ಮಾಡುವನು, ಏನಾದರೂ ಅದು ಚೇತರಿಸಿಕೊಳ್ಳಲಿಲ್ಲ. ಆತನಿಗೆ ದಿಕ್ಕು ತೋಚದೆ ನೀರನ್ನಾದರೂ ತಂದು ಸಿಂಪಡಿಸಿದರೆ ಸರಿಹೋಗಬಹುದೆಂದು ಬಗೆದು ನೀರು ತರಲು ಹೋಗುವನು. ಆಗ ಆ ಗಿಳಿಯು ಸುಲಭವಾಗಿ ರೆಕ್ಕೆ ತೆರೆದು ಹಾರಿ ಹೋಗುವುದು, ಬಹು ದಿನದ ಬಂಧನದಿಂದ ಬಿಡುಗಡೆಯನ್ನು ಹೊಂದುವುದು.

ಇದನ್ನು ಸಂಜ್ಞೋಪದೇಶದ ಶ್ರೇಷ್ಠತೆಗಾಗಿ ಉದ್ಧರಿಸಿದ್ದರೂ ಇದರಲ್ಲಿ ಕೇವಲ ಸಂಜ್ಞೋಪದೇಶವಿಲ್ಲ; ಜೊತೆಗೆ ವರ್ತನೋಪದೇಶವೂ ಇದರಲ್ಲಿದೆ. ಒಟ್ಟಿನಲ್ಲಿ ವಚನೋಪದೇಶಕ್ಕಿಂತ ವರ್ತನೋಪದೇಶ ಸಂಜ್ಞೋಪದೇಶಗಳೆರಡೂ ವಿಶಿಷ್ಟವಾದವು ಗಳೆಂಬುದನ್ನು ಗಮನಿಸುವುದು.

**ಸಂಸ್ಕಾರ ವಿಚಾರ :**

ಈ ಬಗೆಗೂ ಶಿಲಾಚಾರ್ಯರು ತಮ್ಮ ವಿಶಿಷ್ಟ ವಿಚಾರವನ್ನು ಒಂದೆರಡು ನುಡಿಗಳಲ್ಲಿ ಎತ್ತಿ ತೋರಿದ್ದಾರೆ. ಅದಿಂತಿದೆ : ಸಂಸ್ಕಾರ ಅದೊಂದು ಸಮಾಸ ಪದ. ಅದರ ವಿಗ್ರಹ ಹೀಗಿವೆ · "ಸಮ್ಯಕ್ ಕರೋತೀತಿ ಸಂಸ್ಕಾರಃ" ಚನ್ನಲ್ಲದ್ದನ್ನು ಚನ್ನಗೊಳಿ ಸುವುದೆ ಸಂಸ್ಕಾರ. ಅಶುದ್ಧ ರೂಪವನ್ನು ಹೋಗಲಾಡಿಸಿ ಶುದ್ಧರೂಪವನ್ನುಂಟು ಮಾಡುವುದೆ ಸಂಸ್ಕಾರ, ಸ್ಥಿತ್ಯಂತರನಿಷ್ಠವಾದುದು ಸಂಸ್ಕಾಂ ; ಅಥವಾ ಪರಿವರ್ತನ ಶೀಲವಾದುದು ಸಂಸ್ಕಾರ. ಮಾನವನಲ್ಲಿ ಮಾನವೀಯತೆಯನ್ನು ತಂದು ತುಂಬುವುದೆ ಸಂಸ್ಕಾರದ ಗುರಿ. ಮಾನವನು ತನ್ನ ಕೀಳು ಪ್ರವೃತ್ತಿಯಿಂದ ನಾನವನಾಗಿದ್ದಾನೆ, ಈ ದಾನವತ್ವವನ್ನು ಬಿಡಿಸಿ, ಮಾನವತ್ವವನ್ನು ಹಿಡಿಸುವುದೆ ದೀಕ್ಷಾ ಸಂಸ್ಕಾರ ಧ್ಯೇಯ. ಇದು ಮಾನವ ಮಾನವನಿಗೆ ಕೊಡುವ ಸಂಸ್ಕಾರ,

ಜಗತ್ತಿನಲ್ಲಿ ಸಂಸ್ಕಾರವಿಲ್ಲದೆ ಯಾವ ವಸ್ತುವಿಗೂ ಪ್ರಗತಿಯಿಲ್ಲ ; ಸುಗತಿಯಿಲ್ಲ ಸೃಷ್ಟಿಯಲ್ಲಿ ಸಂಸ್ಕಾರವೆಂಬುದು ಸ್ವಾಭಾವಿಕ ಕ್ರಿಯೆ, ನಿಸರ್ಗದಲ್ಲಿಯ ಪ್ರತಿಯೊಂದು

ಚೇತನಾಚೇತನ ವಸ್ತುಗಳಿಗೆಲ್ಲ ನೈಸರ್ಗಿಕ ಸಂಸ್ಕಾರ ಸದಾಕಾಲ ನಡೆದೇ ಇರುತ್ತದೆ. ನಿದರ್ಶನಕ್ಕಾಗಿ, ಮಲ್ಲಿಗೆಯ ಬಳ್ಳಿಯಲ್ಲಿ ಬಿಟ್ಟ ಮೊಗ್ಗಿಗೆ ಗಾಳಿ ಬಿಸಿಲಿನ ಸಂಸ್ಕಾರದಿಂದ ಮಧುರ ವಾಸನೆ ಮೈದುಂಬಿ ಬರುತ್ತದೆ.

ಇದರಂತೆ ಗುರುವಿನ ಸಾಧಿತ ಸಂಸ್ಕಾರದಿಂದ ಶಿಷ್ಯನ ತನುತ್ರಯದ ಮಲತ್ರಯ ಅಳಿದು ಸದ್ವಾಸನೆ ತುಂಬುತ್ತದೆ; ಚಿದ್ಬೆಳಕು ಬೆಳಗುತ್ತದೆ, ಆನಂದ ಮಕರಂದ ತುಂಬಿ ತುಳುಕುತ್ತದೆ, ವಸಂತೋದಯದಿಂದ ವನ ವಿನೂ ನವಾಗುವಂತೆ, ಮಹಂತ ಗುರು ಕರುಣೆಯಿಂದ ಮಾನವ ಮಹಾನುಭಾವನಾಗುತ್ತಾನೆ,

## ಬಾಳಿನ ಬಲ್ಮೆ ತಾಳ್ಮೆ !

ತಾಳ್ಮೆಯ ಬಗೆಗೆ ತಾಳ್ಮೆಯೇ ತಾವಾದ ಶಾಂತವೀರ ಶಿವಾಚಾರ್ಯರ ಸ್ವಾನುಭಾವ ಗಂಗೆ ಹೀಗೆ ಹರಿದಿದೆ: ಅದರಲ್ಲಿ ಮೀಯಲೂ ತಾಳ್ಮೆ ಬೇಕು.

ತಿರೆಯ ಬಾಳ್ಮೆಗೆ ತಾಳ್ಮೆ ಆಧಾರ. ತಾಳ್ಮೆಯಿಲ್ಲದೆ ಬಾಳಿನ ಅಭ್ಯುದಯ ಕನಸಿನ ಗಂಟು; ಶಾಂತಿ ಸಮಾಧಾನ ಜಲಲಿಪಿ; ಶ್ರೇಯ ಸಂತೋಷ ಮೃಗ ಮರೀಚಿಕೆ. ತಾಳ್ಮೆ ಬಾಳಿನ ಸಂಜೀವಿನಿ.

ಮನುಷ್ಯನು ತನ್ನ ಜೀವನ ಯಾತ್ರೆಯಲ್ಲಿ ಬರುವ ಬಗೆ ಬಗೆಯ ಅಡೆತಡೆಗಳನ್ನು ವಿವೇಕದಿಂದ ವಿಂಗಡಿಸಿ, ಚನ್ನಾಗಿ ಅರ್ಥವಿಸಿಕೊಂಡು, ಅವುಗಳನ್ನು ಸಹಜವಾಗಿ ನಿವಾರಿಸಿಕೊಳ್ಳಲು ಪ್ರಯತ್ನಿಸಬೇಕು. ಪ್ರಯತ್ನ ಫಲಿಸದಿದ್ದಾಗ ಅವಕ್ಕೆ ಎದುರಾಗಿ ವಿರೋಧಿಸದೆ ಅಸಹಕಾರ ಮಾಡದೆ ಕಂಡವರ ಮೇಲೆ ಕಿಡಿಕಿಡಿಯಾಗದೆ ಬಂದದ್ದನ್ನು ಬರಗೊಡುವ ಮನಸ್ಥಿತಿಯೆ ತಾಳ್ಮೆ ಎಂದು ಕರೆಯಿಸಿಕೊಳ್ಳುವುದು.

ನಮಗೆ ಈ ಜಾಗತಿಕ ಜೀವನ ಪಥದಲ್ಲಿ ಬರುವ ಅಡೆ ತಡೆಗಳು ಅಷ್ಟಿಷ್ಟಲ್ಲ. ಅವು ಹೊರಗಿನಿಂದಲೂ ಒಳಗಿನಿಂದಲೂ ಬಂದು ಮುತ್ತುತ್ತವೆ. ರಾಜಕೀಯವಾಗಿ ಸಾಮಾಜಿಕವಾಗಿ ಕೌಟುಂಬಿಕವಾಗಿ ವೈಯಕ್ತಿಕವಾಗಿ ಉಂಟಾಗುತ್ತವೆ. ಭೌತಿಕವಾಗಿ ದೈವಿಕವಾಗಿಯೂ ಉಂಟಾಗುತ್ತವೆ. ಇವೆಲ್ಲವನ್ನು ಸೇರಿಸಿ, ಆಧ್ಯಾತ್ಮಿಕ, ಆದಿ ಭೌತಿಕ, ಆಧಿ ದೈವಿಕವೆಂದು ಮೂರು ಬಗೆಯಾಗಿ ಮುಖ್ಯವಾಗಿ ವಿಂಗಡಿಸಿದ್ದಾರೆ. ಇವುಗಳಲ್ಲಿ ಯಾವುದೇ ಬಂದರೂ ಅದನ್ನು ಎದೆಗಾರಿಕೆಯಿಂದ ನಗು ನಗುತ್ತ ಎದುರಿಸುವ ಮನೋದಾರ್ಢ್ಯವೆ ತಾಳ್ಮೆ.

ಆಧ್ಯಾತ್ಮಿಕ ತಾಪ ನಿವಾರಣೆಗಾಗಿ ಶರಣು ಹೋಗುವುದು ಇಬ್ಬರಿಗೆ ! – ಒಬ್ಬ ವೈದ್ಯ, ಇದ್ನೊಬ್ಬ ದೇವ. ಆಧಿ ಭೌತಿಕ ತಾಪ ನಿವಾರಣೆಗೆ ರಾಜನನ್ನು ಅಥವಾ ರಾಜಕೀಯವನ್ನು, ಆಧಿ ದೈವಿಕ ತಾಪ ನಿವಾರಣೆಗೆ ಗುರುದೇವರನ್ನು ಶರಣು

ಹೋಗುವುದು ಪರಂಪರೆಯಾಗಿ ಬಂದಿದೆ. ಈ ತಾಪತ್ರಯಗಳನ್ನು ಸಹಿಸಲು ಹೆಚ್ಚು ಆತ್ಮಬಲ ಬೇಕು. ಅಳ್ಳೆದೆಯವರಿಗೆ, ಸುಳ್ಳು ಹೇಳುವವರಿಗೆ, ಶೀಘ್ರ ಕೋಪಿಗಳಿಗೆ ಈ ಬಗೆಯ ತಾಳ್ಮೆ ಸಮನಿಸದು. ಕಾಯ ಬಲವೂ ಬೇಕಾಗುತ್ತದೆ. ಕಾಯ ಶಕ್ತಿ ಕ್ಷೀಣ ವಾದಾಗ ತಾಳ್ಮೆ ಶಿಥಿಲವಾಗಿ ಸಿಟ್ಟು ಅಸಮಾಧಾನ ತಲೆದೋರುವವು. ಪಾರಮಾರ್ಥ ಸಾಧನೆಯ ಪಥದಲ್ಲಿ ಅನೇಕ ಅನುತಾಪಗಳನ್ನು ಅಡೆ ತಡೆಗಳನ್ನು ಅನುಭವಿಸ ಬೇಕಾಗುವುದು. ಇವನ್ನೆಲ್ಲ ಸಹಿಸುವ ಸಾಮರ್ಥ್ಯವುಳ್ಳವರೆ ಕೊನೆಯ ಗುರಿಗೆ ಮುಟ್ಟಬಲ್ಲರು.

ತನ್ನಲ್ಲಿ ಸಹಜವಾಗಿ ಪ್ರತೀಕಾರ ಮಾಡುವ ಶಕ್ತಿ ಇದ್ದರೂ ತನ್ನ ವೈರಿಯನ್ನು ವಿರೋಧಿಯನ್ನು ಕ್ಷಮಿಸಿಬಿಡುವ ಔದಾರ್ಯ ಗುಣವೆ ಅತ್ಯುತ್ತಮ ತಾಳ್ಮೆ. ಪಾಪ! ನಾನು ಯಾರೆಂಬುದು ಆತನಿಗೆ ಗೊತ್ತಿಲ್ಲ. ಅವನ ಆ ಅಜ್ಞಾನವೆ ನನ್ನನ್ನು ಬಡಿಯಲು ಹಚ್ಚಿತು. ಅವನಿಗೆ ನಿಜಕ್ಕೂ ಜ್ಞಾನವಿದ್ದರೆ ಪರಿಚಯವಿದ್ದರೆ ಹೀಗೇಕೆ ಮಾಡುತ್ತಿದ್ದ; ಎಂದು ಯೋಚಿಸಿ ಕ್ಷಮಿಸಿಬಿಡಬೇಕು. ಇನ್ನೊಬ್ಬರು ಮಾಡಿದ ತಪ್ಪನ್ನು ಮನ್ನಿಸುವುದು ಕ್ಷಮೆ. ತಾಳ್ಮೆಯಿರುವಲ್ಲಿ ಕ್ಷಮೆಯಿರುತ್ತದೆ. ಕ್ಷಮೆಯ ತಾಯಿಯೇ ತಾಳ್ಮೆ ! ತಾಳ್ಮೆ ಕಾರಣ, ಕ್ಷಮೆ ಕಾರ್ಯ !

ಆಧಿ ಭೌತಿಕ, ಆಧಿ ದೈವಿಕ ಸಹನೆಗಳಿಗಿಂತ ಆಧ್ಯಾತ್ಮಿಕ ಸಹನೆ ಬಹಳದೊಡ್ಡದು. ಅಷ್ಟೆ ಆದರ ಸಾಧನೆ ಕಠಿಣತರವಾದುದು. ಬಾಹ್ಯ ದಮನ ಅಷ್ಟೊಂದು ಕಷ್ಟವಲ್ಲ. ಅಂತರ್ದಮನ ಅತ್ಯಂತ ಕಷ್ಟ.

## ೧೧. ಮೋಹ ಮಮಕಾರವಿಲ್ಲ

(೧)

ಒಮ್ಮೆ ಅವರ ಹುಟ್ಟೂರಿನಿಂದ ಹಲವು ಜನ ಭಕ್ತರು ಬರುವರು. ಅವರೊಡನೆ ಶಿವಾಚಾರ್ಯರ ಸಹೋದರಿ ಬಸವಮ್ಮನವರೂ ಬರುವರು. ಅವರಿಗೆ ಅಣ್ಣಂದಿರೆಂಬ ಮಮಕಾರ. ದೊಡ್ಡ ಮಠದ ಸ್ವಾಮಿಗಳೆಂಬ ಅಕ್ಕರ. ಸಾಕಷ್ಟು ಸಿರಿ ಸಂಪತ್ತುಳ್ಳ ಹಿರಿಯ ಮಠ ; ಅದಕ್ಕೆ ಅಣ್ಣ ಅಧೀಶ್ವರ. ತಂಗಿ ಎಂಬ ಮಮಕಾರವಿಲ್ಲದಿರದು. ಬಹು ದಿನಕ್ಕೊಮ್ಮೆ ಬಂದಿರುವಳೆಂದು ಗೌರವಿಸದಿರರು. ಬಹು ಬೆಲೆಯುಳ್ಳ ಉಡಿಗೆ ತೊಡಿಗೆಗಳನ್ನು ಕೊಡದಿರರು-ಎಂದು ಬಗೆದು ಬಂದಿದ್ದಳು.

ಅಂದು ಪುರಾಣ ಪರಿಸಮಾಪ್ತಿಯ ಪರ್ವ. ಮಹಾ ಪಾದ ಪೂಜೆ, ಮಹಾ ಗಣಾರಾಧನೆ; ಮಠದ ಆವರಣದಲ್ಲಿ ಎಲ್ಲೆಲ್ಲಿಯೂ ಮಹೋತ್ಸವ ವೈಭವ. ಇದಕ್ಕಾಗಿ ಬಂದ ಬೊಮ್ಮನಳ್ಳಿ ಶ್ರೀಗಳವರು ಪಾದ ಪೂಜೆ ಪ್ರಸಾದಾರೋಗಣೆಗಳನ್ನು ಪೂರೈಸಿಕೊಂಡು ಗುರುಮಠದ ಮುಂಬದಿಯ ಚೌಕಿನಲ್ಲಿ ಮುಹೂರ್ತ ಮಾಡಿದ್ದರು. ಆಗ ಬಸವಮ್ಮನವರು ಬಂದು ಬೊಮ್ಮನಳ್ಳಿ ಶ್ರೀಗಳ ಚರಣಕ್ಕೆ ಪೊಡಮಡುವಳು. ಆ ತಾಯಿಯನ್ನು ನೋಡಿ ಶ್ರೀಗಳು ನೀನಾರೆಂದು ಕೇಳುವರು. ನಾನು ಈ ಮಠದ ಸ್ವಾಮಿಗಳವರ ತಂಗಿ, ನನ್ನ ಹೆಸರು ಬಸವಮ್ಮ.

ತಾಯಿ, ನೀವಿಲ್ಲಿಗೆ ಈಗ ಬಂದದ್ದು ಒಳತಾಯಿತು. ನಿಮ್ಮನ್ನು ಎಂದೂ ಕಂಡಿರಲಿಲ್ಲ. ನಿಮಗೆ ನಿಮ್ಮ ಮಹಾಸ್ವಾಮಿಗಳವರ ದರ್ಶನವಾಗಿದೆಯೆ ? ಎಂದು ಶ್ರೀಗಳು ಕೇಳುವರು.

ಅದಕ್ಕೆ ತಾಯಿ, ಇನ್ನೂ ದರ್ಶನವಾಗಿಲ್ಲ-ಎಂದೆನ್ನುವಳು. ಹಾಗಾದರೆ ದರ್ಶನಕ್ಕೆ ನಡೆ ತಾಯಿ ಎಂದು ಹೇಳಿ ಹೊತೆಗೆ ಕರೆದುಕೊಂಡು ಬರುವರು. ದರ್ಶನವನ್ನೂ ಮಾಡಿಸುವರು. ಆದರೇನು ? ಶಿವಾಚಾರ್ಯರು ತಮ್ಮ ತಂಗಿಯೆಂದು ಮಮಕರಿಸಲಿಲ್ಲ, ಮನ ಹಿಗ್ಗಲಿಲ್ಲ. ಮುಂದಕ್ಕೆ ಬಾ ಎಂದು ಕರೆಯಲಿಲ್ಲ. ಯೋಗ ಕ್ಷೇಮವನ್ನು ವಿಚಾರಿಸಲಿಲ್ಲ. ಆಶೋತ್ತರದಿಂದ ಬಂದಿರಬಹುದೆಂದು ತಾವೇ ಭಾವಿಸಿ ಹೀಗೆ ಹೇಳುವರು :

"ಎಲ್ಲರಂತೆ ಗುರುಪ್ರಸಾದವನ್ನು ಸ್ವೀಕರಿಸಿ ಹೋಗಬೇಕು, ಮನಸ್ಸಿನಲ್ಲಿ ಏನಾದರೂ ಆಸೆ ಇಟ್ಟುಕೊಂಡು ಇಲ್ಲಿಗೆ ಬರಬೇಕಾಗಿಲ್ಲ. ಏನಾದರೂ ಬೇಕಾಗಿದ್ದರೆ ಮನೆಯಲ್ಲಿ

ಇರುವ ತನ್ನ ಅಣ್ಣ ತಮ್ಮಂದಿರನ್ನು ಕೇಳಿ ಪಡೆಯಬೇಕು. ಸಂನ್ಯಾಸಿಗಳ ಮಠಕ್ಕೆ ಅದಕ್ಕಾಗಿ ಬರುವ ಅಗತ್ಯವಿಲ್ಲ. ನಾವು ಸರ್ವಸಂಗವನ್ನು ಪರಿತ್ಯಾಗ ಮಾಡಿದವರು. ನಮಗೆ ಪೂರ್ವಾಶ್ರಮದ ಸಂಬಂಧ ಅದೆಷ್ಟೂ ಇರುವುದಿಲ್ಲ; ಇರಬಾರದು. ಇಂತಿದ್ದು ನಮ್ಮನ್ನು ಬಂಧು ವ್ಯಾಮೋಹ ಪಾಶದಲ್ಲಿ ಬಿಗಿಯಲು ಬಂದಂತೆ ಕಾಣುವುದು. ಇದು ಸರಿಯಲ್ಲ." ಎಂದು ಸ್ಪಷ್ಟವಾಗಿ ಹೇಳಿಬಿಡುವರು.

ತಮ್ಮ ಪಕ್ಕದಲ್ಲಿದ್ದ ಬೊಮ್ಮನಳ್ಳಿ ಶ್ರೀಗಳನ್ನು ನೋಡಿ, ನಿಮಗಾದರೂ ತಿಳಿಯ ಬಾರದೆ ? ನಮ್ಮಲ್ಲಿಗೆ ಕರೆತರುವಾಗ ವಿಚಾರಿಸಬೇಡವೆ ? ಹೀಗೆ ಮಾಡಿದ್ದು ಸರಿಯಲ್ಲ. ನೀವೇ ಹೀಗೆ ಮಾಡಿದರೆ ಗತಿಯೇನು ? ಮಮತ್ವಕ್ಕೆ ಮನಸ್ಸು ಮಾಡಬಹುದೆ ? ಮನೆಯ ಮನೆಯವರ ಮಮಕಾರ ಯಾರಿಗಿರಬೇಕು, ಯಾರಿಗಿರಬಾರದೆಂಬುದು ನಿಮಗೆ ತಿಳಿಯದೆ ? ಎಂದು ನ್ಯಾಯ ನಿಷ್ಠುರವಾಗಿ ನುಡಿದರು. ಇದನ್ನು ಕೇಳಿ ಬೊಮ್ಮನಳ್ಳಿ ಶ್ರೀಗಳವರು ಮರು ಮಾತನಾಡದೆ ಮೌನವಾಗಿ ಕುಳಿತು ಬಿಡುವರು.

ತಾಯಿ ಬಸವಮ್ಮ ತನ್ನ ಮನಸ್ಸಿನಲ್ಲಿ ಮಾಡಿಕೊಂಡು ಬಂದ ಉದ್ದೇಶ ನೆರವೇರಲಿಲ್ಲೆಂದು ಮೊದ ಮೊದಲು ಮರುಗಿದಳಾದರೂ ಆ ಮೇಲೆ ತಮ್ಮ ಒಡ ಹುಟ್ಟಿದ ತಂಗಿಯ ಮೇಲಿನ ಮಮಕಾರವನ್ನು ಬೇರು ಸಹಿತ ಬಗಿದು ಹಾಕಿದ ಗುರು ದೇವನ ನಿರ್ಮಮತ್ವವನ್ನು ನೆನೆದು ನಲಿಯುವಳು. ಬಸವಮ್ಮ ಬುದ್ಧಿವಂತಳಾದ್ದರಿಂದ ಈಗ ಇವರು ನನ್ನ ಅಣ್ಣನಲ್ಲ, ಗುರುದೇವ. ನಾನು ತಂಗಿಯಲ್ಲ. ಶ್ರೀ ಚರಣ ಶಿಷ್ಯೆ. ನಾನಿವರಿಂದ ಏನೇನೋ ಬಯಸಿ ಬಂದುದು ನನ್ನ ತಪ್ಪು; ಎಂದು ತನಗೆ ತಾನೆ ಮನದಲ್ಲಿ ಒಪ್ಪಿಕೊಂಡು ಒಳಕ್ಕೆ ಹೋಗುವಳು.

ಈ ಸುದ್ದಿ ಒಬ್ಬರಿಂದೊಬ್ಬರಿಗೆ ಹಬ್ಬಿ ನೀಲಮ್ಮ ತಾಯಿಗೆ ತಿಳಿದು ಬರುವುದು. ಗುರು ಪ್ರಾಣೆಯಾದ ಆ ತಾಯಿ ತಕ್ಷಣ ಬಸವಮ್ಮನವರನ್ನು ತನ್ನ ಮನೆಗೆ ಕರೆಯಿಸಿ ಕೊಂಡು ಆದರಿಸಿ ಆರಾಧಿಸಿ ಉತ್ತಮ ಉಡಿಗೆ ಉಡಿಸಿ, ತೊಡಿಗೆ ತೊಡಿಸಿ ಸಂತೋಷ ಪಡಿಸಿ ಊರಿಗೆ ಕಳಿಸಿಕೊಡುವಳು.

ಮಠದ ಮಮಕಾರವನ್ನೆ ಹೊದ್ದದ ಗುರುದೇವನಿಗೆ ಮನೆಯ ಮಮಕಾರ ವೇನಿದ್ದೀತು ? ಭಕ್ತ ಬಂಧುವಾದ ಮಹಾನುಭಾವನಿಗೆ ರಕ್ತಬಂಧುತ್ವದ ರಾಗವಿದ್ದೀತೆ? ಸಮಾಜ ಶ್ರೇಯಸ್ಸಿಗೆ ಲೋಕ ಕಲ್ಯಾಣಕ್ಕೆ ಸತತ ಶ್ರಮಿಸುವ ಸತ್ಯ ಶಿವಯೋಗಿಗೆ ಸಂಕುಚಿತ ಭಾವನೆಯಿರಲು ಸಾಧ್ಯವೆ ? ಮಾಂಸವೆಲ್ಲ ಮಂತ್ರವಾಗಿ ರಕ್ತವೆಲ್ಲ ಅಮೃತವಾಗಿರುವ ತಾತ್ವಿಕ ತಪಸ್ಸಿಗೆ ತೊಳಗುವ ತೇಜಸ್ಸಿಗೆ ಮಮಕಾರ ತಪಸ್ಸು ಆವರಿಸೀತೆ ? ವಿರಕ್ತರಿಗಿಂತ ವಿರಕ್ತರಾಗಿ ವೀರರೆನಿಸಿರುವವರಿಗೆ ರಕ್ತ ಬಾಂಧವ್ಯ ಬಾಧಿಸೀತೆ ?

ಶಾಂತವೀರ ಶಿವಾಚಾರ್ಯರು ಸಾರ್ವಜನಿಕರ ಬಂಧುಗಳು ತಮ್ಮ ಶಕ್ತಿ ಸಂಪತ್ತು
ಗಳನ್ನು ಸಾರ್ವಜನಿಕರಿಗಾಗಿ ಮೀಸಲಾಗಿಸಿದ್ದಾರೆ. ಸಾರ್ವಜನಿಕರಿಗೆ ಅವರ ಅನುಕಂಪ
ಅನಂತವಾಗಿದೆ. ಅವರು ಮೋಹ-ಮಮಕಾರಗಳಿಗೆ ಒಂದಿನಿತೂ ಒಳಗಾಗುವವರಲ್ಲ;
ಒಳಗಾಗಿಲ್ಲ. ಇವು ಅವರ ಸನಿಹದಲ್ಲಿ ಸುಳಿಯವು, ಮಮಕಾರವಿಲ್ಲದಿರುವಿಕೆಯಲ್ಲಿ
ಅವರಿಗೆ ಸಮ ಸದ್ಯಕ್ಕೆ ಯಾರಿಲ್ಲ,

(೨)

ನಾನು ದೊಡ್ಡವ, ನಾನು ಮಾಡಿದೆ, ನನ್ನಿಂದಾಯಿತು ಎಂಬ ಅಹಂಕಾರವಾಗಲಿ
ಅಭಿಮಾನವಾಗಲಿ ಅವರಲ್ಲಿಲ್ಲ. ತುಂಬಿದ ಕೊಡದಂತೆ ತುಳುಕದಂತಿರುವರು. 'ನಾನು'
ಎಂಬುದು ಅವರ ಕನಸು ಮನಸುಗಳಲ್ಲಿ ಬಾರದು. ಎಷ್ಟು ಎತ್ತರದ ಬಾಳು ಬಾಳು
ತ್ತಿರುವರೋ ಅಷ್ಟೇ ವಿನಯ ಭಾವವಿದೆ. ನಾನು ಹಿರಿಯನೆಂದು ಎಂದೂ ಬಗೆದವರಲ್ಲ,
'ಎನಗಿಂತ ಕಿರಿಯರಿಲ್ಲ' ಎಂಬುದೇ ಅವರ ಮಂತ್ರ. ಕಾವಿಯವರು ಯಾರೇ ಬರಲಿ.
ಅವರನ್ನು ಆದರಿಸುತ್ತಾರೆ. ಲಾಂಛನಕ್ಕೆ ಶರಣೆನ್ನುತ್ತಾರೆ, ಸ್ವಾಮಿಗಳ ಮಾತಿರಲಿ,
ಶಿಷ್ಯರು ಬಂದರೂ ಸಹ ತಮ್ಮ ಮಂಚದ ಮೇಲೆ ಕುಳ್ಳಿರಿಸಿಕೊಳ್ಳುವುದನ್ನು ಎಲ್ಲರೂ
ಕಣ್ಣಾರೆ ಕಂಡಿದ್ದಾರೆ. ಹಮ್ಮಿನ ಹೃದಯವಿಲ್ಲ; ಬಿಮ್ಮಿನ ಬಗೆಯಿಲ್ಲ. ಬಸವಣ್ಣ
ನವರ ಮಾತಿನಲ್ಲಿ ಹೇಳುವುದಾದರೆ, 'ಅನ್ಯರಿಗೆ ಅಸಹ್ಯ ಪಡುವವರಲ್ಲ, ತನ್ನ ಬಣ್ಣಿಸು
ವವರಲ್ಲ; ಇದಿರ ಹಳಿಯುವವರಲ್ಲ, ಅವರ ಹಿರಿಮೆಗೆ ಕೊರತೆಯಿಲ್ಲ; ಹಿರಿಯರೆಂದು
ಭಾವಿಸುವುದಿಲ್ಲ, ನಡೆಯಲ್ಲಿ ಎಚ್ಚರ ನುಡಿಯಲ್ಲಿ ಎಚ್ಚರ, ನೋಡುವಲ್ಲಿ ಆಡುವಲ್ಲಿ
ಎಚ್ಚರ.

ವಿಜಾಪುರದ ಶ್ರೀ ಸಿದ್ಧೇಶ್ವರ ಸಂಸ್ಥೆಯವರು ಶ್ರಾವಣ ಮಾಸದಲ್ಲಿ ಪ್ರತಿ
ವರುಷದಂತೆ ಪುರಾಣ ಹೇಳಿಸಲು ನಿರ್ಧರಿಸುವರು. ಇದಕ್ಕೆ ತೆಲಸಂಗದ ಪಟ್ಟದ
ದೇವರನ್ನು ಒಪ್ಪಿಸುವರು. ಆದರೆ ಯಾರ ಪುರಾಣ ಹಚ್ಚಬೇಕು ? ಎಂಬ ಪ್ರಶ್ನೆ
ಬರುವುದು. ಕೆಲ ಸದಸ್ಯರು ಬಬಲೇಶ್ವರ ಮಹಾ ಸ್ವಾಮಿಗಳಾದ ಶ್ರೀ ಶಾಂತವೀರ
ಶಿವಾಚಾರ್ಯರ ಚರಿತ್ರವನ್ನು ಕೇಳೋಣ ಎಂದು ಸೂಚಿಸಿದೊಡನೆ ಉಳಿದವರೆಲ್ಲರೂ
ಅವಿರೋಧವಾಗಿ ಅತ್ಯಂತ ಹರುಷದಿಂದ ಒಪ್ಪಿಕೊಳ್ಳುವರು. ತೆಲಸಂಗ ಶಿವಾಚಾರ್ಯ
ರಿಗೂ ತುಂಬಾ ಸಂತೋಷವಾಯಿತು. ಆದರೆ ಈ ಮಾತು ಸ್ವಾಮಿಗಳವರ ಕಿವಿಗೆ
ಬಿದ್ದಾಗ ಅವರು ತುಂಬಾ ನೊಂದುಕೊಂಡರು. ಆಗ ಶಿವಾಚಾರ್ಯರು ವಿಜಾಪುರ
ದಲ್ಲಿಯೇ ಇದ್ದರು, ಸಂಜೆ ಎಂದಿನಂತೆ ಪ್ರೊ, ಎಸ್. ಎಸ್. ಕಬ್ಬಿನ ಇವರು ಶ್ರೀಗಳ
ದರ್ಶನಕ್ಕೆ ಹೋದಾಗ, "ಸಿದ್ಧೇಶ್ವರ ಸಂಸ್ಥೆಯವರು ನನ್ನ ಪುರಾಣ ನಡೆಸುತ್ತಾರಂತೆ
ನಿನಗೆ ಗೊತ್ತಿದೆಯೊ ?" ಎಂದು ಕೇಳಿದರು. "ಅನ್ನುವುದನ್ನು ಕೇಳಿದ್ದೇನೆ; ನಿಶ್ಚಿತವಾಗಿ
ಗೊತ್ತಿಲ್ಲ." ಎಂದು ಅವರು ಹೇಳಿದರು. ಅದಕ್ಕೆ ಅವರು_"ಇದು ಹೊಸ ಪರಿಪಾಟು,
ಇದಕ್ಕೆ ನಮ್ಮ ಸಮ್ಮತಿಯಿಲ್ಲ. ನಮಗೆ ಬೆಳಕು ತೋರಿ ನಮ್ಮನ್ನು ಅಗಲಿ ಹೋದ

ಮಹಾ ಪುರುಷರ ಪುರಾಣವನ್ನು ತಾವು ಕೇಳುವುದುಂಟು; ಆದರೆ ನಾನು ಅಂತಹ ಯಾವ ಮಹತ್ವದ ಕಾರ್ಯವನ್ನು ಮಾಡಿಲ್ಲ, ನಾನು ಪುರಾಣ ಪುರುಷನಲ್ಲ, ನನ್ನ ಪುರಾಣ ಹಚ್ಚುವುದೆಂದರೆ ಜನ ನಗಲಿಕ್ಕಿಲ್ಲವೆ ? ತೆಲಸಂಗ ದೇವರು ಇದನ್ನು ಹೇಗೆ ಒಪ್ಪಿಕೊಂಡರು ? ನನಗಂತೂ ಬಹಳ ಕೆಡಕೆನಿಸಿದೆ." ಎಂದು ಹೇಳಿ ಹಳಹಳಿಸಹತ್ತಿದರು. ಆಗ ಅವರು—"ಭಕ್ತರು ತಮ್ಮ ಜೀವನ ಚರಿತ್ರೆ ಕೇಳಲು ಆತುರರಾಗಿದ್ದಾರೆ, ಅವರಿಗೆ ನಿಮ್ಮ ಜೀವನದಿಂದ ಬೆಳಕು ದೊರೆತಿದೆ. ಇನ್ನಷ್ಟು ಬೆಳಕಿಗಾಗಿ ಹಾತೊರೆದರೆ ಅವರ ತಪ್ಪೇನು ? ಇದು ಭಕ್ತರ ಇಚ್ಛೆ. ತಮ್ಮ ಮನಸ್ಸಿಗೆ ಹಿಡಿಸದಿದ್ದರೂ ಭಕ್ತರ ಇಚ್ಛೆ ನಡೆಯಿಸಬೇಕಾಗುವುದು." ಎಂದು ಹೇಳಿದಾಗ "ಒಳ್ಳೆಯ ವಿಚಿತ್ರ ಇಚ್ಛೆ;" ಎಂದು ಸುಮ್ಮನಾದರು. ಶಿವಾಚಾರ್ಯರು ಸಮರ್ಥರಿದ್ದರೂ ಸ್ತುತಿಪ್ರಿಯರಲ್ಲ ಹಿರಿಮೆಗಾಗಿ ಹೊಡೆದಾಡುವ ಹೃದಯವಲ್ಲ. ಹೆಸರಿಗಾಗಿ ಹರಿದಾಡುವ ಮನವಲ್ಲ.

(೩)

ಇವರೊಮ್ಮೆ ಸೊಲ್ಲಾಪುರಕ್ಕೆ ಹೋಗಿದ್ದರು. ಅದೇ ಸಮಯದಲ್ಲಿ ಅಲ್ಲಿ ಧಾರವಾಡದ ನವ ಕಲ್ಯಾಣ ಮಠದ ಕುಮಾರ ಸ್ವಾಮಿಗಳ ಉಪನ್ಯಾಸ ಏರ್ಪಟ್ಟಿತ್ತು. ಇದು ತಿಳಿದು ಕಾಣಲು ಕೇಳಲು ಅಲ್ಲಿಗೆ ಹೋಗುವರು. ಅವರ ಮಾತುಗಾರಿಕೆ ಮನಸ್ಸಿಗೆ ಹಿಡಿಯುವುದು. ಮುಗಿದ ಬಳಿಕ ಅವರನ್ನು ತಾವೇ ನೇರವಾಗಿ ಭೇಟಿ ಯಾಗಿ ನಿಮ್ಮ ಬಳಿಗೆ ಬರಲು ಬಯಸಿದ್ದೇನೆ. ನೀವಿರುವುದೆಲ್ಲಿ ? ಎಂದು ಕೇಳಿ ತಿಳಿದು ಕೊಳ್ಳುವರು. ಅದರಂತೆ ಅವರಿದ್ದಲ್ಲಿಗೆ ಮರುದಿನ ಬೆಳಿಗ್ಗೆ ಕಾಣಲು ಹೋಗುವರು, ಅವರು ಒಳಗಿದ್ದರು. ಅವರಿಗಾಗಿ ಅನೇಕರು ಕಾಯ್ದಿದ್ದರು. ಅಷ್ಟರಲ್ಲಿ ಕುಮಾರ ಸ್ವಾಮಿಗಳು ತಮ್ಮ ಅಲ್ಪಾಹಾರ ತೀರಿಸಿಕೊಂಡು ಹೊರಬರುವರು. ತಮಗೆ ರಚಿಸಿದ ಉಚ್ಚಾಸನದ ಮೇಲೆ ಕುಳಿತುಕೊಳ್ಳುವರು. ಬಂದ ಭಕ್ತರು ನಮಸ್ಕರಿಸಿ ಕೆಳಕ್ಕೆ ಕುಳಿತು ಕೊಂಡಂತೆ ಶ್ರೀ ಶಾಂತವೀರ ಶಿವಾಚಾರ್ಯರೂ ವಂದಿಸಿ ಕೆಳಕ್ಕೆ ಕುಳಿತುಕೊಳ್ಳುವರು. ಇವರನ್ನು ಅವರು ನೋಡಲೇ ಇಲ್ಲ. ಮೇಲಕ್ಕೆ ಕರೆಯಲೂ ಇಲ್ಲ. ಭಕ್ತರ ಯೋಗ ಕ್ಷೇಮದಲ್ಲಿ ನಿರತರಾಗಿದ್ದರು. ಎಲ್ಲವೂ ಮುಗಿಯುವುದು, ಅಲ್ಲಿಯವರೆಗೂ, ಶಿವಾ ಚಾರ್ಯರು ಸುಮ್ಮನೆ ಕುಳಿತಿದ್ದರು. ತಮ್ಮನ್ನು ಕಾಣಬಂದ ಇವರನ್ನು ಅವರು ಮಾತನಾಡಿಸಲಿಲ್ಲ. ಇವರೇ ಮಾತೆತ್ತಿದರು. ನಾನೊಂದು ಚಿಕ್ಕ ಪ್ರಶ್ನೆಯನ್ನು ಕೇಳ ಬೇಕೆಂದಿರುವೆನು. ನಿಮಗೆ ಒಪ್ಪಿತವಿದ್ದಲ್ಲಿ ಕೇಳುವೆನು ; ಎಂದೆನ್ನಲು, 'ಪರವಾ ಇಲ್ಲ. ನಿಮ್ಮ ಪ್ರಶ್ನೆ ಏನು ಕೇಳಿ ಎಂದು ಅವರು ಆಗ ಮರು ನುಡಿದರು. ಶಿವಾಚಾ ರ್ಯರು ಹೀಗೆ ಕೇಳುವರು: "ನಾನೊಂದು ದಿನಚರಿ ಇಟ್ಟುಕೊಂಡಿರುವೆ. ಅದು ನನಗೆ ಸರಿಯಾಗಿದ್ದಂತೆ ತೋರುತ್ತಿಲ್ಲ. ನಿಮ್ಮ ದಿನಚರಿ ತುಂಬಾ ಉತ್ತಮವಾಗಿದೆ ಎಂದು ಕೇಳಿದ್ದೇನೆ.' ದಯವಿಟ್ಟು ಅದನ್ನಷ್ಟು ತಿಳಿಯಪಡಿಸಿದರೆ ನನಗೆ ಹೋದು ವಂತೆ ಯೋಚಿಸಿಕೊಂಡು ರೂಢಿಸಿಕೊಳ್ಳಲು ಯತ್ನಿಸುತ್ತೇನೆ. ಇದು ನನ್ನ ಕೇಳಿಕೆ.

ಇದನ್ನು ಕೇಳಿ ಕುಮಾರ ಸ್ವಾಮಿಗಳಿಗೆ ಏನು ಅನಿಸಿತೋ ಏನೋ? "ಒಳ್ಳೆ ಯದು, ನಿಮ್ಮ ಪ್ರಶ್ನೆ ಚೆನ್ನಾಗಿದೆ. ಇದಕ್ಕೆ ಆ ಬಳಿಕ ಉತ್ತರಿಸುತ್ತೇನೆ. ನೀವು ಎದ್ದು ಬಂದು ಆಸನದ ಮೇಲೆ ಕುಳಿತುಕೊಳ್ಳಬೇಕು"–ಎಂದೆನ್ನುವರು. ಶಿವಾ ಚಾರ್ಯರು : ಇಲ್ಲ. ಹಾಗಾಗದು; ಈ ಪೀಠ ನಿಮಗಾಗಿ ಸಿದ್ಧವಾದುದು. ನೀವಷ್ಟೇ ಕುಳಿತುಕೊಳ್ಳಬೇಕು. ನನಗೆ ಇಲ್ಲಿ ಗುಡಾರ ಹಾಸಿದ್ದಾರೆ. ಇಲ್ಲಿಯೇ ಕುಳಿತುಕೊಳ್ಳುತ್ತೇನೆ." ಎಂದುಬಿಟ್ಟರು. ಇಡನ್ನು ಕೇಳಿ ಕುಮಾರಸ್ವಾಮಿಗಳು ಸುಮ್ಮ ನಿರದೆ ಬಲವಂತವಾಗಿ ಕೈ ಹಿಡಿದೆಬ್ಬಿಸಿ ಮಂಚದ ಮೇಲೆ ಕೂರಿಸಿಕೊಳ್ಳುವರು. ಬಳಿಕ ಪರಸ್ಪರ ಮಾತುಗಳಾಗುವವು.

ಇದು ಬಹಳ ಹಿಂದಿನ ಮಾತು. ಇದಾದ ಬಳಿಕ ತುಂಬಾ ದಿನಗಳು ಕಳೆದ ಮೇಲೆ ಧಾರವಾಡದ ತಪೋವನದ ಕುಮಾರ ಸ್ವಾಮಿಗಳು ತಾವಾಗಿಯೇ ಶಿವಾ ಚಾರ್ಯರ ಸಂದರ್ಶನಕ್ಕಾಗಿ ಹರಳೇಶ್ವರ ಆಶ್ರಮಕ್ಕೆ ಬರುವರು. ಶಿವಾಚಾರ್ಯರು ಮಂಚದ ಮೇಲೆ ಮಲಗಿದ್ದರು. ಕುಮಾರ ಸ್ವಾಮಿಗಳು ಹಠಾತ್ತಾಗಿ ಹತ್ತಿರ ಹೋಗಿ, ತಮ್ಮ ಎರಡೂ ಕೈಗಳಿಂದ ಶಿವಾಚಾರ್ಯರ ಕೆನ್ನೆಗಳನ್ನು ಗಟ್ಟಿಯಾಗಿ ತಟ್ಟಿ 'ಅಪ್ಪಾ!' ಎಂದೆನ್ನುವರು. ಅದಕ್ಕೆ ಪ್ರತಿಯಾಗಿ ಶಿವಾಚಾರ್ಯರು 'ಅಪ್ಪಾ!' ಎಂದು ಅವರ ಗಲ್ಲ ಮುಟ್ಟಿದರಂತೆ ! ಆಗ ಇವರ ಕೈಗೆ ಅವರ ಗಡ್ಡ ಮೆತ್ತಗೆ ಹತ್ತಿದನ್ನು ಗಮ ನಿಸಿ ಓ! ಸೊಲ್ಲಾಪುರದಲ್ಲಿ ಕಂಡಾಗ ನಿಮಗೆ 'ದಾಡಿ' ಇರಲಿಲ್ಲ. ಈಗ ಇವನ್ನು ಬಿಟ್ಟು ಮಹರ್ಷಿಗಳಾಗಿರುವಿರಲ್ಲಾ ! ಇದಕ್ಕೆ ಅವರು, ಮಹರ್ಷಿತ್ವ ಕೂದಲಿ ನಲ್ಲಿ ಇದೆಯೆಂದು ನೀವು ತಿಳಿದುಕೊಂಡಿರುವಿರೇನು? ಎಂದು ಮರು ಪ್ರಶ್ನೆ ಹಾಕು ವರು. ಅದಕ್ಕೆ ಶಿವಾಚಾರ್ಯರು, ಹಾಗಲ್ಲ. ನೀವು ಮೊದಲೇ ಋಷಿಗಳಾಗಿರುವಿರಿ. ನಿಮ್ಮ ಉನ್ನತವಾದ ವ್ಯಕ್ತಿತ್ವಕ್ಕೆ ಈ ಕೇಶರಾಶಿ ಹೆಚ್ಚಿನ ಶೋಭೆಯನ್ನು ತರುವು ದಿಲ್ಲವೆ? ಎಂದಾಗ ಇಬ್ಬರೂ ಸ್ನೇಹಪೂರ್ಣವಾದ ನಗೆಯನ್ನು ಬೀರುವರು.

(೪)

ಶಿವಾಚಾರ್ಯರು ಮಂಟಪ ಪೂಜೆಗೆ ಕುಳಿತುಕೊಳ್ಳರು, ಪಲ್ಲಕ್ಕಿಯನ್ನೇರಿ ಮೆರೆಯರು. ಅವರು ಯಾವಾಗಲೂ ಹೊರಗಿನ ಹಿರಿಯತನಕ್ಕೆ ಆಶಿಸುವವರಲ್ಲ, ಹೆಚ್ಚುತನವನ್ನು ತೋರುವವರಲ್ಲ, ಉಚ್ಚಾಸನದಲ್ಲಿ ಕುಳಿತು ಹೆಚ್ಚಿನವರಾಗಲು ಇಷ್ಟ ಪಡುವವರಲ್ಲ.

ಒಮ್ಮೆ ಅಥಣಿಯಲ್ಲಿ ಅರುವತ್ತು ಮೂವರ ಮಂಟಪ ಪೂಜೆ. ಅದಕ್ಕೆ ಇವರು ಸಲ್ಲಿಸಿದ ಸೇವೆಯನ್ನು ಈ ಹಿಂದೆ ಹೇಳಲಾಗಿದೆ. ಇದಕ್ಕಾಗಿ ಇವರಿಗೂ ಒಂದು ಮಂಟಪವನ್ನು ಮೀಸಲಾಗಿ ಮನೋಹರವಾಗಿ ರಚಿಸಿದ್ದರು. ಅದಕ್ಕೆ ಇವರ ಹೆಸರನ್ನು ಕಾಣಿಸಿದ್ದರು. ಇದನ್ನು ನೋಡಿದ ಶಿವಾಚಾರ್ಯರು ಪೂಜಾ ಸಮಯಕ್ಕೆ ಇಲ್ಲದಂತಾಗುವರು. ಅದೆಷ್ಟು ಹುಡುಕಿದರೂ ಸಿಕ್ಕದಾದರು. ಮಂಟಪ ಪೂಜೆಯ ಅಧ್ಯಕ್ಷತೆಯನ್ನು ವಹಿಸಿದ ಬಿಳ್ಳೂರು ಶ್ರೀಗಳವರು

ಯೋಚನೆ ಮಾಡಿ ಅದೇ ಊರಿನಲ್ಲಿರುವ ಸೆಟ್ಟರ ವಿರಕ್ತ ಮಠಕ್ಕೆ ಹೋಗಿ ನೋಡುವರು ಅಲ್ಲಿ ಅವಿತುಕೊಂಡಿದ್ದ ಶಿವಾಚಾರ್ಯರನ್ನು ಪತ್ತೆ ಹಚ್ಚುವರು. ಸಲುಗೆಯಿಂದ "ಬಾ ಅಪ್ಪಾ ಬಾ. ಕೂಡ್ರು ಬಾ!" ನಿನಗಾಗಿ ನಿರ್ಮಿಸಿದ ಭವ್ಯ ಮಂಟಪದಲ್ಲಿ ಮುಹೂರ್ತಿಸಬಾ! ಎಂದು ವಾತ್ಸಲ್ಯಪೂರಿತ ವಾಣಿಯಲ್ಲಿ ನುಡಿವರು. ಓ ಅಪ್ಪಗಳಿರಾ ! ನಾನು ಇಂತಹ ಯಾವ ಮಂಟಪದಲ್ಲಿಯೂ ಕುಳಿತಿಲ್ಲ ; ಈಗಲಾದರೂ ಕುಳಿತುಕೊಳ್ಳುವುದಿಲ್ಲ. ಸುಮ್ಮನೆ ಬಲವಂತ ಬೇಡ. ಎಂದು ದೃಢ ಪ್ರತ್ಯಯದಲ್ಲಿ ಉತ್ತರಿಸಲು, ಬಿಳೂರು ಸ್ವಾಮಿಗಳು ಸಮೀಪದಲ್ಲಿದ್ದವರಿಗೆ ಬಲ ಹುಂಬ್ಬು ಏರಿಸಿ ಸನ್ನೆ ಮಾಡುವರು. ಅವರೇ ಹೇಳಿದ ಬಳಿಕ ಕೇಳುವದೇನಿದೆ? ನಾಲ್ಕು ಜನ ಮಾಚಿ ತಂದೆಯಂತಹ ಭಕ್ತರು ಶಿವಾಚಾರ್ಯರನ್ನು ಹಸುಗೂಸಿನಂತೆ ಕೈಯಲ್ಲಿ ಎತ್ತಿಯೇ ಬಿಡುವರು. ಮಂಟಪದತ್ತ ಸಾಗುವರು. ಸ್ವಲ್ಪ ದೂರ ಸಾಗಿದ ಬಳಿಕ ಕೆಳಕ್ಕೆ ಇಳಿಸುವರು. ಆಗ ಶಿವಾಚಾರ್ಯರು ಸಿಟ್ಟಿನಿಂದ "ನಿಮಗೆ ಸರಿಕಂಡದ್ದನ್ನು ನೀವು ಮಾಡಿದಿರಿ. ಅಲ್ಲಿಗೆ ಒಯ್ದು ಕುಳ್ಳಿರಿಸಿದ ಮೇಲೆ ನನಗೆ ತಿಳಿದದ್ದನ್ನು ನಾನು ಮಾಡುತ್ತೇನೆ. ನನ್ನ ಛಲ ಸಾಧಿಸುತ್ತೇನೆ. ಅಂದರೆ ಮಂಟಪದಲ್ಲಿ ಬಾಗಿಲಿಗೆ ಬೆನ್ನು ಮಾಡಿ ಕೂಡುತ್ತೇನೆ, ಇಲ್ಲವೆ ಬೋರಲು ಮಲಗಿ ಬಿಡುತ್ತೇನೆ, ಆಗ ನಿಮಗೆ ಅಮಂಗಳವಾಗುವುದು. ಸುಮ್ಮನೆ ನನ್ನನ್ನು ಬಿಟ್ಟು ಬಿಡಿರಿ. ನನಗೆ ಬೇಡಾದುದನ್ನು ಮಾಡಿಸಲು ನನಗೇಕೆ ಇಷ್ಟೊಂದು ಒತ್ತಾಯ ಹೇರುತ್ತೀರಿ? ಎಂದು ಛಲದಿಂದ ನುಡಿವರು. ಶಿವಾಚಾರ್ಯರ ಈ ದೃಢ ಇಂಗಿತವನ್ನರಿತ ಬಿಳೂರ ಅಪ್ಪಗಳು ಇವರನ್ನು ಬಿಟ್ಟುಕೊಡುವರು. ಶಿವಾಚಾರ್ಯರಿಗೆ ಸಾತಿಶಯ ಸಂತೋಷವಾಗುವುದು. ಒಂದು ರಾಜ್ಯವನ್ನು ರಾಜನು ಗೆದ್ದಷ್ಟು ಹರುಷಿಸುವರು; ಹೆಮ್ಮೆ ಪಟ್ಟುಕೊಳ್ಳುವರು. ನಿರ್ನಿಮಿತ್ತವಾಗಿ ಪೂಜ್ಯತೆಯನ್ನು ಪಡೆಯುವುದೆಂದರೆ ಅವರ ನಿರಹಂಕಾರ ಮತ್ತು ನಿರಭಿಮಾನ ಸ್ವಭಾವಕ್ಕುಗದು. ಮಾನವರೆಲ್ಲರಲ್ಲಿಯೂ ಮಹಾದೇವನನ್ನು ಅವರು ಕಾಣುವರು.

ಮತ್ತೊಮ್ಮೆ ಮನಗೂಳಿ ಗ್ರಾಮದಲ್ಲಿ ಇಂತಹದೆ ಒಂದು ಪ್ರಸಂಗ ಘಟಿಸುವುದು. ಮನಗೂಳಿ ಅಪ್ಪಗಳವರು ಶ್ರೀ ಗುರುಗಳನ್ನು ಅಲ್ಲಿಯ ಮಂಟಪ ಪೂಜೆಗೆಂದು ಅಪೇಕ್ಷಿಸಿ ಕಾರು ಕೊಟ್ಟು ಕಳುಹಿಸಿದ್ದರು, ಈ ವಿಚಾರ ಇವರಿಗೆ ಗೊತ್ತಿರಲಿಲ್ಲ. ಸುಮ್ಮನೆ ಸ್ನೇಹಕ್ಕಾಗಿ ಕರೆಸಿರುವರೆಂದು ಬಂದಿದ್ದರು. ಊರ ಮುಂದೆ ಬರುವಷ್ಟರಲ್ಲಿ ಪಲ್ಲಕ್ಕಿ ಉತ್ಸವಕ್ಕೆ ಸಜ್ಜಾಗಿದ್ದಿತು. ನೆರೆದ ಭಕ್ತರೆಲ್ಲರು ಪಲ್ಲಕ್ಕಿಯಲ್ಲಿ ಕುಳಿಸಲು ಕೇಳಿಕೊಳ್ಳುವರು. ಇವರು ತಮ್ಮ ವಾಡಿಕೆಯಂತೆ ನಿರಾಕರಿಸುವರು. ಮನುಷ್ಯರು ಮನುಷ್ಯರಮೇಲೆ ಏರುವುದೆಂದರೇನು? ನರರನ್ನು ವಾಹನವಾಗಿಸಲು ನನಗಿಷ್ಟವಿಲ್ಲ. ಅದರಲ್ಲಿ ಕೂಡುವುದಿಲ್ಲವೆಂದು ಖಂಡಿತವಾಗಿ ಹೇಳುವರು, ಆದರೆ ಭಕ್ತ ಜನ ಕೇಳದೆ ಇವರನ್ನು ಎತ್ತಿ ಪಲ್ಲಕ್ಕಿಯಲ್ಲಿ ಕುಳ್ಳಿಸುವರು. ಇವರು ಅದರಲ್ಲಿ

ಬೋರಲಾಗಿ ಒರಗಿ ಬಿಡುವರು. ಪಲ್ಲಕ್ಕಿ ಹಾಗೆಯೆ ಹೊರಡುವುದು, ಬೀದಿ ಬರುವವರೆಗೂ ಯಾರೂ ನೋಡಲಿಲ್ಲ. ಆಗ ನೋಡಲು ಇವರು ಮುಖ ಕೆಳಕ್ಕೆ ಮಾಡಿ ಮಲಗಿ ಬಿಟ್ಟಿದ್ದಾರೆ. ನಡು ಬೀದಿಯಲ್ಲಿ ಚನ್ನಾಗಿರದೆಂದು ಬಗೆದು ಬೇರೆ ದಾರಿ ತೋರದೆ ಶಿವಾಚಾರ್ಯರನ್ನು ಇಳಿಸಿಬಿಡುವರು. ಗೆಲವಿನಿಂದ ನಡೆತರುವರು ಶಿವಾಚಾರ್ಯರು.

ಬೇರೊಮ್ಮೆ ಬಂಥನಾಳ ಊರಿನಲ್ಲಿಯೂ ಇದೇ ಪ್ರಸಂಗವೊದಗಿತ್ತು. ಅಲ್ಲಿಯೂ ಯಾರು ಹೇಳಿದರೂ ಒಪ್ಪದೆ ಹೋಗುವರು ಬಂಥನಾಳ ಅಪ್ಪಗಳು ಹೇಳಿ ನೋಡಿದರು, ಉಪಯೋಗವಾಗಲಿಲ್ಲ. ಬಳಿಕ ಭಕ್ತರು ಉತ್ಕಟೇಚ್ಛೆಯಿಂದ ಮರಳಿ ಒತ್ತಾಯ ಮಾಡುವರು. ಶಿವಾಚಾರ್ಯರು ಆಗ ಮುನಿಸಿನಿಂದ "ನಾನು ಯಾವುದನ್ನು ಬಯಸುವುದಿಲ್ಲವೋ ಅದನ್ನೆ ನೀವು ಮತ್ತೆ ಮತ್ತೆ ಒತ್ತಾಯ ಮಾಡ ಹತ್ತಿದರೆ ನಾನು ಮರಳಿ ಹೀಗೆಯೆ ಊರಿಗೆ ಹೋಗಿಬಿಡುತ್ತೇನೆ" ಎಂದು ಹೇಳಿದ ಬಳಿಕ ಅಲ್ಲಿನ ಭಕ್ತರು ಹಿಂಜರಿವರು.

( ೫ )

ಶಿವಾಚಾರ್ಯರ ನಿರಹಂಕಾರಕ್ಕೆ ನಿರಾಡಂಬರಕ್ಕೆ ಇನ್ನೊಂದು ನಿದರ್ಶನ: ವಿಜಾಪುರದ ಶ್ರೀಮಂತರು ಶ್ರೀ ಎಸ್. ಎಸ್. ಹೇರಲಗಿಯವರು. ಅವರು ತಮ್ಮ ಅಂಗಡಿಯ ಉದ್ಘಾಟನ ಕಾರ್ಯವನ್ನಿಟ್ಟುಕೊಂಡಿದ್ದರು. ಅದಕ್ಕೆ ಆ ಭಾಗದ ಎಲ್ಲ ಹೆಸರಾಂತ ಸ್ವಾಮಿಗಳವರನ್ನು ಆಮಂತ್ರಿಸಿದ್ದರು. ಅದರಂತೆ ಇವರಿಗೂ ಆಮಂತ್ರಣ ಬಂದಿತ್ತು. ಒಪ್ಪಿ ಅಲ್ಲಿಗೆ ಹೋಗಿದ್ದರು. ಹೇರಲಗಿಯವರು ಮಹಾಸ್ವಾಮಿಗಳ ಮೆರವಣಿಗೆಗಾಗಿ ಒಂದು ಚಿಕ್ಕ ತೇರನ್ನು ಅಲಂಕಾರಗೊಳಿಸಿದ್ದರು. ತೇರು ಪುಟ್ಟದಾದರೂ ಮಾಟವಾಗಿತ್ತು. ಅದರಲ್ಲಿ ನಾಲ್ವರು ಕುಳ್ಳಿರುವಂತೆ ವ್ಯವಸ್ಥೆಯಾಗಿತ್ತು. ಹೇರಲಗಿಯವರ ಸಂಕಲ್ಪವೂ ಅದಾಗಿತ್ತು, ಅವರ ಆ ಸಂಕಲ್ಪವನ್ನು ನೆರವೇರಿಸಲು ಉಳಿದ ಮೂವರು ಸಿದ್ಧರಾಗಿದ್ದರು. ಇವರನ್ನು ಬಂದು ಕೇಳಿದರು. ಕೇಳಿಕೆ ಫಲಿಸಲಿಲ್ಲ. ಶಿವಾಚಾರ್ಯರು ತೇರ ಏರಲು ಒಪ್ಪದಾದರು. ಜನರೂ ಬಿಡಲಿಲ್ಲ. ಬಲವಂತಿಕೆ ಬಲವಾಯಿತು. ಹೆಚ್ಚು ಹೊತ್ತು ಕಳೆಯಿತು. ಕಾರ್ಯ ತಟಸ್ಥವಾಯಿತು: ಮುಂದಿನ ಕೆಲಸಗಳಿಗೆ ತಡೆಯಾಗುವಂತಾಯಿತು. ಇದನ್ನೂ ಶಿವಾಚಾರ್ಯರು ಯೋಚಿಸತೊಡಗಿದರು. ಎಲ್ಲರ ಉತ್ಕಟತೆಗೆ ಮಣಿದು ಒಪ್ಪುವರು. ಬಂದು ತೇರಿನಲ್ಲಿ ಕುಳಿತುಕೊಳ್ಳುವರು. ನಡುವೆ ಕುಳಿತುಕೊಳ್ಳಿರೆಂದರೆ ಕೇಳದೆ ಕಡೆಯಲ್ಲಿ ಕುಳಿತುಕೊಳ್ಳುವರು. ತೇರು ಸಾಗುವುದು. ವಿಜಯದ ಜಯಘೋಷ ಮೊಳಗುವುದು. ಹಣ್ಣು ಕಾಯಿ ಹಾರಾಡುವವು. ಜನ ಕಿಕ್ಕಿರಿದು ಸೇರಿತ್ತು. ಆ ಉತ್ಸವ ನೋಡಲು ಒಂದು ಹಬ್ಬ. ಎಲ್ಲರಿಗೂ ಆನಂದವೇ ಆನಂದ. ಇವರಿಗೆ ಮಾತ್ರ ಎದೆಗುದಿ. ತೇರನ್ನು ಎಳೆಯುವವರು ಜನರು. ಜನ ವಾಹನವೆಂದರೆ ಶಿವಾಚಾರ್ಯರಿಗಾಗದು.

ಏನು ಮಾಡಲಿ ? – ಎಂದು ಏನೇನೋ ಯೋಚಿಸಿದರು. ತೇರು ಹೊರಟು ಹೆಚ್ಚು ಹೊತ್ತಾಗಿರಲಿಲ್ಲ. ಒಂದೆರಡು ಮನೆಗಳನ್ನು ಮಾತ್ರ ದಾಟಿರಬಹುದು. ಅಷ್ಟರಲ್ಲಿ ಶಿವಾಚಾರ್ಯರು ತೇರಿನಿಂದ ತಟ್ಟನೆ ಹಾರಿ ಕೆಳಕ್ಕೆ ಇಳಿವರು. ನೋಡುವ ಜನರಿಗೆಲ್ಲ ಆಚ್ಚರಿಯ ಮೇಲೆ ಅಚ್ಚರಿ. ಕೆಳಕ್ಕೆ ನೆಗೆದವರು ಯಾರು ? ಯಾರವರು ? ಎಂದು ಎಲ್ಲರೂ ಕೇಳತೊಡಗುವರು. ಬಬಲೇಶ್ವರದ ಶಾಂತವೀರ ಶಿವಾಚಾರ್ಯರೆ ಎಂದು ತಿಳಿದುಬರುವುದು. ಇತ್ತ ಶಿವಾಚಾರ್ಯರು ಎಲ್ಲರಂತೆ ಕಾಲಿನಿಂದ ನೆಲದ ಮೇಲೆ ನಡೆಯುತ್ತ ತೇರಿನ ಮಗ್ಗುಲಲ್ಲಿ ಹೊರಟಿದ್ದರು.

ಓ ! ಅದೆಂತಹ ವಿನಯ ಪೂರ್ಣ ಹೃದಯ ! ಅದೇನು ನಿರಹಂಕಾರ ಭಾವ ! ! ಅದೆಷ್ಟು ಬಣ್ಣಿಸಿದರೂ ತೀರದ ಆದರ್ಶ ಜೀವನ !!! ತಮಗೆ ಸಮನಾದವರು ತೇರ ಮೇಲೆ ! ತಾವು ಮಾತ್ರ ತಿರೆಯ ಮೇಲೆ ! ಅದರಲ್ಲಿಯೂ ಪಾದಚಾರಿಗಳಾಗಿ ! ಅಭಿಮಾನದ ಲವಲೇಶವೂ ಇಲ್ಲದ ಘನ ಮನ ! ಅರ್ಥ ಪ್ರಾಣ ಅಭಿಮಾನಗಳನ್ನು ಸಮಾಜ ಶಿವನಿಗೆ ಸಮರ್ಪಿಸಿದ ಸರ್ವೋನ್ನತ ಗುರುಭಾವ ! ಇಂತಹ ಗುರುಗಳಿದ್ದರೆ ಸಮಾಜದಲ್ಲಿ ಗುರು–ವಿರಕ್ತರ ತಿಕ್ಕಾಟವಿನ್ನೆಲ್ಲಿ ? ಇಕ್ಕಟ್ಟು ಇನ್ನೆಲ್ಲಿ ? ಬಿಂಕು ಬಿಮ್ಮು ಗಳಿನ್ನೆಲ್ಲಿ ? ಇಂದು ಗರ್ವ ಗ್ರಂಥಿಗಳೆ ಹೆಚ್ಚು. ಘನತೆಯಿಲ್ಲದಿದ್ದರೂ ಗೌರವ ಬೇಕೆನ್ನುವವರೆ ಎಲ್ಲರು. ಘನತೆಯಿದ್ದರೂ ಗೌರವಕ್ಕೆ ಬಾಯ್ನೀರು ಬಿಡದ ಗುರುವರ್ಯ ಶಾಂತವೀರ ಶಿವಾಚಾರ್ಯ! ವಿದ್ಯೆಯಿಲ್ಲವೆ? ವಿನಯವಿಲ್ಲವೆ? ಪಾವಿತ್ರ್ಯವಿಲ್ಲವೆ? ಪಾತ್ರತೆ ಯಿಲ್ಲವೆ? ತ್ಯಾಗವಿಲ್ಲವೆ? ತಪಸ್ಸಿಲ್ಲವೆ? ಗುರುದೇವನಲ್ಲಿ ಏನಿಲ್ಲ, ಏನಿಲ್ಲ? ಸರ್ವಾದರ್ಶ ಶಿಷ್ಯ ಪ್ರೇಮಿ ಶ್ರೀ ಶಾಂತವೀರ ಮಹಾಸ್ವಾಮಿ ! ಸರ್ವಾಂಗದಲ್ಲಿ ಶಮಾದಿ ಷಟ್ಕ ಸಂಪತ್ತಿ! ಸತ್ಕ್ರಿಯಾ ಸುಜ್ಞಾನ ಸ್ವಾನುಭಾವ ನಿಷ್ಪತ್ತಿ !! ಪ್ರತಿ ನಿಮಿಷದಲ್ಲಿ ಪರಮನಲ್ಲಿ ಪರವಶ ಪ್ರಪತ್ತಿ !!! ಪ್ರಫುಲ್ಲ ಮುಖಾರವಿಂದ ; ಪ್ರಭಾವ ಪೂರ್ಣ ಪ್ರವರ್ತ ನಾನುಬಂಧ. ಸಂಪನ್ನ ಸ್ವಭಾವ ; ಪ್ರಪನ್ನ ಜೀವ. ಪ್ರತ್ಯುತ್ಪನ್ನ ಮತಿ, ಪ್ರತ್ಯ ವಾಯವಿಲ್ಲದ ಯತಿ ; ಆ ಪರಶಿವನೇ ಇಳೆಗೆ ಇಳಿದು ಬಂದ ಪ್ರತಿಕೃತಿ. ಪ್ರಣಿಪಾತರ ಪ್ರಪಂಚತಾರಣ ಶಕ್ತಿ. ಓಡಾಡುವ ಶಾಂತಿನಿಕೇತನ ; ವೀರವಿರತಿಕೇತನ. ಸಚ್ಚಿತ್ಕಳಾ ಕಿರಣ ಪ್ರತಾನ. ಪ್ರಚ್ಛನ್ನ ಪ್ರಣಿಧಾನ ; ಪ್ರಕೃಷ್ಟ ಸಂವಿಧಾನ. ಇಂತಿದ್ದರೂ ಇಂತಹ ನಿರಾಡಂಬರ ಜೀವನ ; ನಿರಹಂಕಾರ ಚೇತನ. ಓ ಅಪ್ರತಿಮ ಗುರುದೇವ, ನಿನ್ನ ಚಾರು ಚರಿತ್ರ ನಿನ್ನದೆ ! ನಿನ್ನ ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚಲುವ ಚಿತ್ರ ನಿನ್ನದೆ ! ಪ್ರಚಾರಕ್ಕೆ ವೈಭವಕ್ಕೆ ಎಷ್ಟೂ ಒಪ್ಪದ ನಿನ್ನ ಸರಳತೆಗೆ ಸಾಟಿ ಯಾರು ? ಕೋಟಿ ಯಾರು ? ಈ ಮಾತಿಗೆ ತೋಟ ಏಕೆ ?

( ೬ )

ಎಂದೂ ಯಾರಿಂದಲೂ ಗೌರವ ಬಯಸದ ಗುರು ಹೃದಯ ಶಿವಾಚಾರ್ಯರದು. ಪ್ರತಿಷ್ಠೆಗಾಗಿ ಪ್ರಯತ್ನಿಸದ, – ಪ್ರಯತ್ನವೇನು ಪ್ರೇಮಿಸದ ಪಾವನ ಮೂರ್ತಿ.

ಕೇಳಿ ! ಇವರೊಮ್ಮೆ ಹುಬ್ಬಳ್ಳಿಗೆ ಹೋಗಿದ್ದರು. ಅಲ್ಲಿದ್ದ ಸಿದ್ಧರಾಮಪ್ಪ ಪಾವಟೆ ಅವರನ್ನು ಕಾಣಲು ಅವರ ಮನೆಗೆ ತಾವೇ ಹೋದರು, ಪಾವಟೆಯವರು ಪಂಚಾಚಾರ್ಯ ವಿರೋಧಿಗಳು. ಅವರನ್ನು ಟೀಕಿಸಿ ಆಗಾಗ ಲೇಖನಗಳನ್ನು ಬರೆಯುತ್ತಿದ್ದರು. ಅವರು ಗುರುಸ್ಥಲ ವಿರೋಧಿ ; ಗುರುಗಳಿಗೆ ಗೌರವ ಕೊಡುತ್ತಿರಲಿಲ್ಲ ; ಜಂಗಮರಿಗೂ ಕೊಡುತ್ತಿರಲಿಲ್ಲ. ಇಂತಿದ್ದರೂ ಅವರ ಮನೆಗೆ ಅವರನ್ನು ಕಾಣಲು ಹೋದರು. ಅವರು ಕೊಡುವ ಆದರ ಇವರಿಗೆ ಬೇಕಿರಲಿಲ್ಲ. ಅವರನ್ನು ಕಂಡು ಮಾತಾಡಬೇಕು, ಅವರ ಅಭಿಪ್ರಾಯದ ಸತ್ಯತೆ ಸರಳತೆಗಳನ್ನು ಅರಿಯಬೇಕು ; ಎಂಬುದೆ ಇವರ ಕುತೂಹಲ. ಯಾರಲ್ಲಿ ಯಾವ ಶಕ್ತಿಯಿರಲಿ, ಅವರನ್ನು ಅದೇ ನಿಟ್ಟಿನಲ್ಲಿ ನೆಚ್ಚಿ ಮೆಚ್ಚಿ ಮನ್ನಿಸುವ ಸುಸ್ವಭಾವ ಶಿವಾಚಾರ್ಯರದು.

ಪಾವಟೆಯವರು ಒಬ್ಬ ಐರೋಪ್ಯ ಅತಿಥಿಯೊಂದಿಗೆ ಮಾತುಕತೆಗಳಲ್ಲಿ ತೊಡಗಿದ್ದರಿಂದ ಶ್ರೀಗಳ ಸಂದರ್ಶನಕ್ಕೆ ಸಮಯ ಕೂಡಿಬರಲಿಲ್ಲೆಂಬ ಮಾತನ್ನು ಇಲ್ಲಿ ಸ್ಮರಿಸಬಹುದಾಗಿದೆ.

(೭)

ಮತ್ತೊಮ್ಮೆ ಸೊನ್ನಲಾಪುರದ ಕೆಲವು ಜನರು ಶಿವಾಚಾರ್ಯರ ಶುಭಪ್ರದ ಸಂದರ್ಶನಕ್ಕಾಗಿ ಹೊರಗಿನ ಮಠಕ್ಕೆ ಬರುವರು. ಅವರು ಬಂದಾಗ ಇರುಳು ಎಂಟು ಗಂಟೆ! ಶಿವಾಚಾರ್ಯರು ಶಿವಲಿಂಗಾರ್ಚನೆಯಲ್ಲಿದ್ದರು. ಅವರು ಬಂದ ಸುದ್ದಿಯನ್ನು ಸೇವಕನೊಬ್ಬನು ಅರಿಕೆ ಮಾಡಿಕೊಳ್ಳುವನು. ಅವರಿಗೆಲ್ಲ ಪ್ರಸಾದದ ವ್ಯವಸ್ಥೆಯಾಗುವುದು. ಎಲ್ಲರೂ ಆರೋಗಿಸಿ ದರ್ಶನ ಪಡೆದು ಮಹದಾನಂದದಿಂದ ಮಲಗುವರು. ಬೆಳಗಾಗುವ ಮೊದಲು ಬೇಗ ಎದ್ದು ಶಿವಾಚಾರ್ಯರ ದರ್ಶನಾಶೀರ್ವಾದಗಳನ್ನು ಪಡೆದು ತಮ್ಮ ಊರಿಗೆ ತೆರಳಿದರು. ಇತ್ತ ಶಿವಾಚಾರ್ಯರು ಉದಯದ ಲಿಂಗಾರ್ಚನೆಯನ್ನು ಪೂರೈಸಿಕೊಂಡು ಬಿಲ್ವಮರದ ಬನಕ್ಕೆ ಬರುವರು. ಊಟದ ಮನೆಯೊಳಕ್ಕೆ ಹೋಗುವರು.

ಹಿಂದಿನ ರಾತ್ರಿ ಸೊನ್ನಲಿಗೆಯ ಸದ್ಭಕ್ತರು ಊಟ ಮಾಡಿದ ಗಂಗಾಳಗಳು ಹಾಗೆಯೆ ಇದ್ದವು. ಸೇವಕರು ಅವನ್ನು ಎತ್ತಿರಲಿಲ್ಲ. ಭಕ್ತರು ಉಂಡು ಬಿಟ್ಟ ತಟ್ಟೆಗಳನ್ನು ನಾವೇಕೆ ತೆಗೆಯಬೇಕೆಂದು ಬಗೆದು ಅಭಿಮಾನಕ್ಕೆ ಬಿದ್ದು ತೆಗೆಯದೆ ಬಿಟ್ಟಿರುವರೆಂದು ತಿಳಿದು ಅವನ್ನು ತಾವೇ ತೆಗೆಯಲು ತೊಡಗುವರು. ಅಷ್ಟರಲ್ಲಿ ಅವರ ಸೇವಕರು ಬರುವರು. ಬಂದು ನೋಡಿ ಬೆದರುವರು. ಒಡನೆ ಶಿವಾಚಾರ್ಯರ ಶ್ರೀಚರಣಕ್ಕೆ ಬಾಗಿ, "ಬುದ್ಧೀ ನಾವು ಮಾಡಿದ ತಪ್ಪನ್ನು ಕ್ಷಮಿಸಬೇಕು. ತಾವು ತೆಗೆಯಬೇಡಿರಿ ನಾವೇ ತೆಗೆಯುತ್ತೇವೆ. ಇನ್ನು ಮೇಲೆ ಹೀಗೆ ತಪ್ಪನ್ನು ನಾವು ಮಾಡುವುದಿಲ್ಲ. ಇದೊಮ್ಮೆ ಸೈರಿಸಬೇಕು. ತಮ್ಮ ಕ್ಷಮೆಗೆ ತುದಿ ಮೊದಲಿಲ್ಲ." ಎಂದು ಬಗೆಬಗೆಯಾಗಿ ಬೇಡಿಕೊಳ್ಳುವರು. ಶಿವಾಚಾರ್ಯರು, ನಿಮಗೆಲ್ಲ ಅಹಂಕಾರ ಅಭಿಮಾನಗಳು ತುಂಬಿವೆ. ಭಕ್ತರೆಂದರೆ ಕಡಿಮೆ

ಯವರೆಂದು ನಿಮ್ಮ ಭಾವನೆ. "ಮಮ ಭಕ್ತೋಮಮಾಧಿಕಃ" ಎಂದು ಭಗವಂತನೇ ಹೇಳಿದ್ದಾನೆ. ಭಕ್ತರು ಬಿಟ್ಟುಹೋದ ಎಡೆಗಳನ್ನು ತೆಗೆದರೆ ನಿಮಗೇನು ಪಾಪ ಬರುವುದೆ? ನಿಮ್ಮ ಅಯ್ಯತನ ಅಳಿದು ಹೋಗುವುದೆ? "ದಾಸೋಹಂ ಭಾವ" ನಿಮಗೆಂದಿಗೆ ಬರುವುದು? ನಿಮಗೆ ಈ ಭಾವ ಬೇಡವೆ? ಕಿಂಕರತೆಯಿಂದ ಶಂಕರತೆ ಎಂಬುದನ್ನು ತಿಳಿದುಕೊಳ್ಳಬೇಕು ಎಂದು ಮುಂತಾಗಿ ಮನಸ್ಸಿಗೆ ಬರುವಂತೆ ತಿಳಿ ಹೇಳುವರು. ಜೊತೆಗೆ ತಮಗಿರುವ ನಿರಹಂಭಾವವನ್ನು ಈ ಒಂದು ಕಾರ್ಯದಿಂದ ವೆಗ್ಗಳಿಸುವರು. ತಾವು ಶಿವಾಚಾರ್ಯರು, ಸ್ವಾಮಿಗಳು, ತಾವೇಕೆ ತೆಗೆಯಬೇಕೆಂಬ ಅಹಂಭಾವ ಅವರಲ್ಲಿ ಇರಲಿಲ್ಲ, ಬರಲಿಲ್ಲ.

ಮೋಹ, ಮಮಕಾರ, ಅಹಂಕಾರ ಈ ಮೂರು ಮಾಯಾ ಕಾರ್ಯಗಳು. ಈ ಮೂರಕ್ಕೆ ಕಾರಣ ಮಾಯೆ. ಈ ಮೂರನ್ನು ಗೆದ್ದರೆ ಮಾಯೆಯನ್ನು ಗೆದ್ದಂತೆ! ಮಾಯಾವಶರು ಈ ಮೂರಕ್ಕೆ ಒಳಗಾಗುತ್ತಾರೆ.

ಮೋಹ ಅದೊಂದು ಜೀವನಕ್ಕೆ ಗಂಟು ಬಿದ್ದ ಮಹಾಪಾಶ. ಅದರ ಬಂಧನಕ್ಕೆ ಒಳಗಾದಲ್ಲಿ ಅಜ್ಞಾನ ಭ್ರಾಂತಿ ದುಃಖಗಳು ಮುತ್ತಿಕೊಂಡಿರುತ್ತವೆ. ಅಜ್ಞಾನವೆಂದರೆ ತನ್ನನ್ನು ತಾನು ಮರೆದಿರುವಿಕೆ; ಆತ್ಮವನ್ನು ಮರೆತಿರುವುದಕ್ಕಿಂತ ಬೇರಿಲ್ಲ ಜಡತ್ವ. ಮರೆವು ಮತಿಯ ವಿಕಾರವಾಗಿರುವಂತೆ ಭ್ರಾಂತಿಯೂ ಮತ್ತೊಂದು ಮತಿ ವಿಕಾರ. ಅಜ್ಞಾನ ಭ್ರಾಂತಿಗಳು ಸಂಸಾರದಲ್ಲಿ ಸುತ್ತಾಡ ಹಚ್ಚುತ್ತವೆ. ವ್ಯರ್ಥ ವ್ಯವಹಾರದಲ್ಲಿ ಹೋರಾಡ ಹಚ್ಚುತ್ತವೆ. ದುಃಖ ಕೂಪದಲ್ಲಿ ತಳ್ಳುತ್ತವೆ. ದುಃಖಾರ್ತನನ್ನಾಗಿಸುತ್ತವೆ. ದುಃಖಾರ್ತನಾಗುವುದಕ್ಕಿಂತ ಬೇರಿಲ್ಲ ನರಕಯಾತನೆ. ವ್ಯಥೆಗೆ ಒಳಗಾದಾತನ ಮನಸ್ಸು ವ್ಯಗ್ರವಾಗಿರುತ್ತದೆ. ಮಾನಸಿಕ ಶಾಂತಿಯಿರದು; ಸ್ಥಿರತೆಯಿರದು. ಇದರಿಂದಾಗಿ ಮೋಹಕ್ಕೆ ಮಮಕಾರಕ್ಕೆ ಒಳಗಾಗಿಸುವ ಎಲ್ಲ ವಿಷಯಗಳಿಂದ ವಿರಹಿತನಾಗಿರಬೇಕು ಶಾಂತಿ ಪ್ರಿಯನು. ಶಾಂತವೀರ ಶಿವಾಚಾರ್ಯರು ಇದನರಿತು ವಿಷಯ ವಿರಹಿತರಾಗಿರುವರು.

ಅಹಂಕಾರ ಮಮಕಾರಗಳೆಂದರೆ ನಾನು–ನನ್ನದು ಎಂದರ್ಥ; ಅಹಂಕಾರವಿರುವಲ್ಲಿ ಮಮಕಾರವಿದ್ದೆ ಇರುತ್ತದೆ, ಇವೆರಡು ಅವಿಭಾಜ್ಯಗಳು. ನಾನೆಂಬುದಿದ್ದಲ್ಲಿ ನನ್ನದೆಂಬುದಿರದೇನು? ಒಂದು ಹೆಮ್ಮೆಗೆ ಕಾರಣವಾದರೆ ಇನ್ನೊಂದು ಸ್ವಾರ್ಥ ಸಂಕುಚಿತಗಳಿಗೆ ಕಾರಣವಾಗುತ್ತದೆ, ನಾನೆಂಬುದೇ ಹೆಮ್ಮೆ; ನನ್ನದೆಂಬನೆಹವೆ ಸ್ವಾರ್ಥ. ಮೋಹವಿರುವಲ್ಲಿ ಕಾರ್ಮಿಕಮಲ, ಮಮಕಾರ–ಅಹಂಕಾರಗಳಿರುವಲ್ಲಿ ಆಣವೀಯಮಲ ಆವರಿಸಿಕೊಂಡಿರುತ್ತವೆ. ಮಾಯೀಯ ಮಲವಂತೂ ಸ್ವತಃ ಸಿದ್ಧವಾಗಿರುತ್ತದೆ. ವಿಕಾಸಗೊಂಡು ವಿಶಾಲವಾಗಬೇಕಾದರೆ ವಿಶುದ್ಧವಾಗಬೇಕಾದರೆ ಈ ಮಲತ್ರಯಂಗಳು ಅಳಿಯಲೇಬೇಕು. ಅಳಿದಾತನೆ ಅಚ್ಚ ಗುರು. ಈ ಅಚ್ಚ ಗುರುತ್ವವನ್ನು ಗಳಿಸಿದ್ದಾರೆ ಶಾಂತವೀರ ಶಿವಾಚಾರ್ಯರು.

ಮನದ ಪ್ರವೃತ್ತಿಯಿಂದ ಮೋಹವುಂಟಾಗುತ್ತದೆ. ಮೋಹದಿಂದ ಮತಿ ವಿಕಾರವಾಗುತ್ತದೆ, ತನ್ನ ಬಂಧನಕ್ಕೆ ಕಾರಣವಾಗುತ್ತದೆ. ಅಹಂಕಾರ–ಮಮಕಾರಗಳಿಗಿಂತ

ಬಂಧನ ಬೇರಿಲ್ಲ, ಇವೆಲ್ಲ ತೊಲಗಬೇಕಾದರೆ ಮನದ ಶಾಂತಿ ಆಗತ್ಯ, ಶಾಂತಿಯಿರುವಲ್ಲಿ ಭಕ್ತಿ ವಿರಕ್ತಿ ಸಂವಿತ್ತಿಗಳಿರುತ್ತವೆ. ಇವಿರುವಲ್ಲಿ ಜೀವನ್ಮುಕ್ತಿ ಲಭಿಸುತ್ತದೆ. ಇಂತಹ ಶಾಂತಿಯನ್ನು ಗಳಿಸಿ ಶಾಂತರಾಗಿದ್ದರು ಶಿವಾಚಾರ್ಯರು, ಯಾರು ಶಾಂತರೋ ಅವರು ವೀರರು. ಮಾಯಾ–ಮೋಹಗಳನ್ನು ಮಮಕಾರ–ಅಹಂಕಾರಗಳನ್ನು ಗೆದ್ದವರೆ ನಿಜವಾದ ವೀರರು. ಈ ವೀರತ್ವವು ಶಿವಾಚಾರ್ಯರಲ್ಲಿದೆ. ಶಾಂತಿ ಶಕ್ತಿಯಿಲ್ಲದ ವೀರಧೀರ ದೀಪ್ತಿಯಿಲ್ಲದ ಜೀವನ ಜೀವನವಲ್ಲ, ಮೋಹ ಮಮಕಾರಗಳ ಮಟ್ಟಿನಲ್ಲಿ ಹಿಂಗಾಣದೆ ಮುಂಗಾಣದೆ ಬಾಳುವುದು ಮಾನವೀಯತೆಯ ಮಣಿಹವಲ್ಲ; ಮಾರ್ಗವಲ್ಲ. ಮೋಹ ವಿಹ್ವಲತೆಯಲ್ಲಿ ಕಾಮ ಕ್ರೋಧಾದಿ ಕಾಳ್ಕಿಚ್ಚಿನಲ್ಲಿ ಆತ್ಮಹನನವಾಗುವುದು ಪಾವಿತ್ರ್ಯ ಧ್ವಂಸ ವಾಗುವುದು ಪರಮಾರ್ಥವಲ್ಲ. ಹೆಜ್ಜೆ ಹೆಜ್ಜೆಗೆ ಭ್ರಾಂತಿ ಭ್ರಷ್ಟತೆಗಳಿಗೆ ಒಳಗಾಗುವುದು ವಿಹಿತವಲ್ಲ. ಸಂಶಯ ವಿಪರ್ಯಯಗಳ ಗುಣಿಯಲ್ಲಿ ಬೀಳುವುದು ತರವಲ್ಲ; ನಾನು–ನನ್ನದು ಎಂಬ ಹಮ್ಮು ಬಿಮ್ಮುಗಳ ಮಬ್ಬು ಹುಬ್ಬುಗಳನಾವರಿಸಿರುವುದು ಯಾವ ಧರ್ಮ? ಪ್ರಜ್ಞಾ ಪ್ರಭಾಕರನ ಪ್ರಭಾವ ಏನಾದಂತೆ? ಕುರುಡ ಕ್ರಮಣದಲ್ಲಿ ಹಳೆಯ ಹೊಲಬೂ ಇಲ್ಲದೆ ಇತ್ತ ಹೊಸ ಹೊಲಬೂ ಇಲ್ಲದೆ ತ್ರಿಶಂಕು ಪಥದಲ್ಲಿ ತೊಳಲುವುದು ತಿಳಿಗಣ್ಣಿಗೆ ತರವೇನು? ಮಾನವೀಯತೆ ಮಣಿಹವೇನು? ನಮ್ಮ ಬುನಾದಿ ಭದ್ರವಾಗಿದೆಯೇ? ನಾವು ಕಟ್ಟುತ್ತಿರುವ ಭವನ ನಾಲ್ಕಾರು ದಿನ ತಲೆಯೆತ್ತಿ ನಿಲ್ಲಬಲ್ಲುದೆ? ನಮ್ಮಲ್ಲಿ ನಮಗೆ ನಂಬುಗೆ ಭಾವನೆಗಳು ಉಳಿದಿವೆಯೇ? ಇವನ್ನು ಕಳೆದುಕೊಳ್ಳುವುದು ಒಳಿತೆ? ಇದು ಹೊಸತೆ? ಇದರಲ್ಲಿರುವುದು ಹಸತೆ? ನಾವಾರು? ಆ ಶಾಂತಿ ಶಕ್ತಿಯ ಮಕ್ಕಳಲ್ಲವೆ? ಆ ದಿವ್ಯ ಧೃತಿಯ ಪುತ್ರರಲ್ಲವೆ? ಆ ಶಕ್ತಿಯನ್ನು ಮೈಗೂಡಿಸಿಕೊಳ್ಳುತ್ತಿರುವೆವೆ? ಆ ಧೃತಿಯನ್ನು ತನುವಿನಲ್ಲಿ ತುಂಬಿಕೊಳ್ಳುತ್ತಿರುವೆವೆ? ಈ ನವನಾಗರಿಕತೆಯ ಅರ್ಥವಿಲ್ಲದ ವ್ಯರ್ಥ ವ್ಯಾಮೋಹದಲ್ಲಿ ಬಿದ್ದು ಹೃದಯ ಶೂನ್ಯರಾಗುವುದು ಶುದ್ಧ ಮೂರ್ಖತನ ವಲ್ಲವೆ? ಹಸನಾಗಿರದ ಹೊಸ ಹೊಸ ಕನಸುಗಳನ್ನು ಮನಸ್ಸಿನಲ್ಲಿ ಕಾಣುತ್ತಿರುವುದು ಶಾಂತಿ ಸಾಧನೆಯೆ? ನಿಶ್ಚಿಂತ ಪಥವೆ? ಈ ಅಸ್ತವ್ಯಸ್ತಗ್ರಸ್ತ ದುಷ್ಟಗ್ರಹ ಗತಿಯಲ್ಲಿ ಗಮ್ಯ ನೆಲೆಗೆ ಸೇರಲು ಸಾಧ್ಯವೆ? ವಾಸ್ತವ ಜೀವನ ವಾಸ್ತವ ಭಾವನ ಸಾಧ್ಯವೆ? ಅಡಿಗಡಿಗೆ ನಿರ್ಮೋಹ ದಾರಿದ್ರ್ಯ ನಿರಹಂಕಾರ ದಾರಿದ್ರ್ಯ ನಿರ್ಮಮಕಾರ ದಾರಿದ್ರ್ಯ ಸುತ್ತಿಕೊಂಡಿವೆ; ಮುತ್ತಿಕೊಂಡಿವೆ. ಇದನ್ನು ಕಂಡು ಶಾಂತಿ ಶಕ್ತಿ ಹೇವರಿಸಿಕೊಂಡಿದೆ. ಈ ಕಾರ್ಮೋಡಗಳಲ್ಲಿ ಆತ್ಮದೀಪ್ತಿ ಅಡಗಿಕೊಂಡಿದೆ. ಹೊರಗಿನ ಈ ಹೊಸ ಅಂಟು ಜಾಡ್ಯದಲ್ಲಿ ಆತ್ಮ ಧೃತಿ ಚ್ಯುತಿಗೊಂಡಿದೆ. ಛಿದ್ರವಿಚ್ಛಿದ್ರವಾಗಿದೆ, ಭ್ರಷ್ಟ ಜೀವನ ಪಥ ದಲ್ಲಿ ಬಾಯಾರಿ ಬಿಸಿಲು ಗುದುರೆಯ ಬೆನ್ನುಹತ್ತಿ ಹೋಗುತ್ತಿರುವುದು ಶಾಂತಿ ಸಾಧನೆಯೆ? ಒಳ್ಳೆಯ ನಡೆಯಲ್ಲಿ, ಒಳ್ಳೆಯ ನುಡಿಯಲ್ಲಿ ಒಳ್ಳೆಯ ನೇಹದಲ್ಲಿ ನಮಗೆ ನಿಷ್ಠೆ ಉಳಿದಿಲ್ಲ. ಶ್ರದ್ಧೆ ಸಮನಿಸುತ್ತಿಲ್ಲ. ಸತ್ಯ ಜೀವನಾಮೃತವನ್ನು ಸವಿವ ಭಾಗ್ಯ ದುರಹಂಕಾರಕ್ಕುಂಟೆ? ದುರ್ಮೋಹಕ್ಕುಂಟೆ? ಸತ್ಕ್ರಿಯೆ ಸಮ್ಯಕ್ ಜ್ಞಾನ ಸ್ವಾನುಭ ವಗಳೆಂಬ ಸಂಪತ್ತು ಸಮೃದ್ಧಶಾಲಿಯಾಗಿ ನಮ್ಮಲ್ಲಿದೆ, ಇವನ್ನು ತಿಳಿಯದೆ ಇವನ್ನು

ತುಳಿಯುವೆ ನಾವು ಈ ಮೋಹದ ಮರುಭೂಮಿಯಲ್ಲಿ ಸುಮ್ಮನೆ ಸುತ್ತುತ್ತಿದ್ದೇವೆ. ಸುಸ್ತು ಹೊಡೆದು ಕುಳಿತು ಬಿಟ್ಟಿದ್ದೇವೆ. ಪರಸ್ಪರ ಪ್ರೇಮವಿಲ್ಲದೆ ವಿಶ್ವಾಸವಿಲ್ಲದೆ. ಉಚ್ಛೃಂಖಲ ವೃತ್ತಿಯಲ್ಲಿ ಉಸಿರುಗಟ್ಟಿ ನಿಂತಿದ್ದೇವೆ. ಉನ್ಮಾದದ ಬಿರುಗಾಳಿಗೆ ಬಿಸಿ ದೂಳಿ ಬಂದು ಕಣ್ಣುಗಳಲ್ಲಿ ತುಂಬಿದೆ. ಕಂಗಾಣವು. ಮತಿ ಮಸಣಿಸಿದೆ. ಹೃದಯ ಹದಗೆಟ್ಟಿದೆ. ಅತ್ತೂ ಇಲ್ಲ. ಇತ್ತೂ ಇಲ್ಲ, ಎತ್ತೋ ಸಾಗಿದೆ ಈ ಜೀವಲೋಕ; ಈ ಭಾವ ಲೋಕ ಏನೋ ಆಗಲಿದೆ ಎಂತೋ ಆಗಲಿದೆ ನೆನೆದರೆ ನಿದ್ದೆ ಬಾರದಂತಿದೆ. ಬಿಟ್ಟರೆ ಬಟ್ಟೆ ಸಾಗದಿದೆ. ಮೋಹ ಮಬ್ಬಿನಲ್ಲಿ ಮಾರ್ಗ ತಪ್ಪಿದ ಮಾನವ ಜೀವನವನ್ನು ಕುರಿತು ಮಹಾನುಭಾವರಾದ ಮೋಹಾದಿಗಳ ಮಹಾ ಪಾಶಕ್ಕೆ ಕಟ್ಟು ಬೀಳದ ಶ್ರೀ ಶಾಂತವೀರ ಶಿವಾಚಾರ್ಯರು ಹಗಲಿರುಳೂ ಚಿಂತಿಸುತ್ತಿದ್ದಾರೆ. ಗಾಢಾಂಧಕಾರದಲ್ಲಿ ಕಿರುಸೊಡರಂತೆ ಒಂದೆಡೆಯಲ್ಲಿ ನಿಂತು ಬೆಳಗುತ್ತಿದ್ದಾರೆ.

ಮೋಹಾದಿಗಳ ಮಬ್ಬಿನಲ್ಲಿರುವವರಿಗೆ ಮಾರ್ಗದರ್ಶಕರಾಗಿ ಇದೀಗ ಅವರೊಬ್ಬರಿದ್ದಾರೆ, ಅವರ ಆ ಮಂಗಳ ಬಾಳಿನ ಮಿಂಬೆಳಗಿನಲ್ಲಿ ಕಣ್ಣು ತೆರೆದು ಮುನ್ನಡೆವವರು ಅದೆಷ್ಟು ಜನ? ಮುನ್ನಡೆವಂತಾದರೆ ಅದೇ ಸುದಿನ. ಸಾರ್ಥಕ ಅವರ ಈ ಸುದೀರ್ಘ ಸಾಧನ.

## ೧೨. ಸಂಕೀರ್ಣ ಸಂಘಟನೆಗಳು

ಶಿವಾಚಾರ್ಯರು ಯೋಗ ತ್ಯಾಗ ಶಾಂತಿ ದಾಂತಿ ನಿರತರಾಗಿದ್ದರೂ ಮಠದ ಆಗುಹೋಗುಗಳನ್ನು ನಿರಾಕರಿಸಿಲ್ಲ, ಇವರ ಕಾಲದಲ್ಲಿ ಮಠದ ಅಭಿವೃದ್ಧಿ ಅತ್ಯಧಿಕವಾಗಿದೆ. ಸರ್ವತೋಮುಖವಾಗಿ ಸಮೃದ್ಧಶಾಲಿಯಾಗಿದೆ. ಜಡ ಜಂಗಮ ಆಸ್ತಿ ಹದವಾಗಿವೆ. ಈ ಮಠದ ಎರಡನೆಯ ಗುರುಗಳು ಶ್ರೀ ಗುರುಪಾದ ಶಿವಯೋಗಿಗಳು, ಇವರು ಚುಕ್ಕಿಗಳಲ್ಲಿ ಚಂದ್ರನಂತಿದ್ದರು, ಇವರದು ಜಾಗ್ರತ ಚೇತನ. ಇವರ ಸಮಾಧಿಯಲ್ಲಿಯೂ ಒಂದು ಜಾಜ್ವಲ್ಯಮಾನವಾದ ಜಾಗ್ರತ್ತತೆಯಿದೆ.

ಇದರಿಂದಾಗಿ ಇಂದಿಗೂ ಇವರ ಗದ್ದುಗೆಯ ಮೇಲೆ ಸಾರ್ವಜನಿಕರಿಗೆ ಸಾತಿಶಯ ಶ್ರದ್ಧೆ, ಕಳಾಶಕ್ತಿಗೆ ಕಾಲಾವಚ್ಛೇದತೆಯಿರಬಲ್ಲುದೆ?

ಇಂಥವರ ಗದ್ದುಗೆ ಸರಿಯಾದ ಸ್ಥಿತಿಯಲ್ಲಿರಲಿಲ್ಲ. ಶಾಂತವೀರ ಶಿವಾಚಾರ್ಯರು ಇವನ್ನು ಮನಸ್ಸಿಗೆ ತಂದುಕೊಂಡು ೧೯೫೪ ರಲ್ಲಿ ಸುಮಾರು ಇಪ್ಪತ್ತೆರಡು ಸಾಸಿರದಷ್ಟು ವೆಚ್ಚಮಾಡಿ ಗದ್ದುಗೆಯ ಕಟ್ಟಡವನ್ನು ಸುಂದರವಾಗಿ ಶಿವಪಾಗಿ ಕಟ್ಟಿಸಿದ್ದಾರೆ. ಕಟ್ಟಿಸಿ ಸುಮಾರು ಇಪ್ಪತ್ತು ವರ್ಷಗಳಾಗಿರಬಹುದೇನೊ? ಅಗ್ಗ ಅಷ್ಟೊಂದು ವೆಚ್ಚವಾಗಿದೆಯೆಂದರೆ ಇಂದಿಗೆ ಅದೆಷ್ಟಾಗಬಹುದೆಂಬುದನ್ನು ಓದುಗರೆ ಊಹಿಸಬೇಕು.

ಈ ಗದ್ದುಗೆಯ ಮುಂಭಾಗದಲ್ಲಿ ೧೯೭೩ರಲ್ಲಿ ಕೈ. ವಾ. ದಾನಮ್ಮ ತಾಯಿ ಚನ್ನಪ್ರಭು ಮಿರ್ಜಿ ಬಬಲೇಶ್ವರ ಇವರ ಸ್ಮಾರಕ ಮಂಟಪ ಸುಂದರವಾಗಿ ಸಿಮೆಂಟ ಕಾಂಕ್ರಿಟಿನಿಂದ ನಿರ್ಮಾಣವಾಗಿದೆಂಬ ಮಾತನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಶಿವಾಚಾರ್ಯರು ತಮ್ಮ ಶಿವಪೂಜಾದಿ ಸಕಲ ಸತ್ಕ್ರಿಯೆಗಳನ್ನು ಸಕಾಲಕ್ಕೆ ಬಿಡದೆ ಮಾಡಿ ಮುಗಿಸುತ್ತಾರೆ. ಸಕ್ರಮವಾಗಿ ಸಾಗಿಸುತ್ತಾರೆ. ಎಂತಹ ದುರ್ಧರ ಪ್ರಸಂಗದಲ್ಲಿಯೂ ಕೈಬಿಡರು. ಆಂಗಿಕ ಅನಾರೋಗ್ಯದ ಅಡೆತಡೆಗಳಿದ್ದರೂ ತಪ್ಪಿಸರು. ಪ್ರಾಣಗಳಲ್ಲಿ ಪ್ರೇಮವಿರುವಂತೆ ಪೂಜಾದಿಗಳಲ್ಲಿಯೂ ಅವರಿಗೆ ಪ್ರೇಮ. ಈ ನಿಟ್ಟಿನಲ್ಲಿ ಅವರು ಸತ್ಯ ಸಂಕಲ್ಪರು ; ಸತ್ಯಶಕ್ತರು. ಈ ನಮ್ಮ ಮಾತಿಗೆ ಮುಂದಿನ ಈ ಪ್ರಸಂಗ ಪ್ರತೀಕವಾಗಿದೆ.

## ದೀಪಕ್ಕೆ ಎಣ್ಣೆ :

ಹೊರಗಿನ ಮಠದಲ್ಲಿ ಇದ್ದಾಗ ಒಂದು ಮುಚ್ಚಂಜೆ. ಮಿಂದು ಮಡಿಯಾಗಿದ್ದಾರೆ. ಪೂಜಾ ಮಂದಿರಕ್ಕೆ ಬಂದಿದ್ದಾರೆ. ಶಿವಪೂಜಾ ಸಾಹಿತ್ಯವನ್ನು ಸಜ್ಜುಗೊಳಿಸಿದ್ದಾರೆ. ಇನ್ನೇನು ದೀಪಾರಾಧನೆ ಮಾಡಿ ಪೂಜೆಗೆ ಅಣಿಯಾಗಬೇಕೆಂದು ಅಂಟಿಸಲು ಹೋಗುತ್ತಾರೆ. ಹಣತೆಯಲ್ಲಿಯೂ ಎಣೆಯಿಲ್ಲ. ಮಗೆಯಲ್ಲಿಯೂ ಇಲ್ಲ, ಹೊತ್ತು ಮುಳುಗಿ ಕತ್ತಲೆ ಮುತ್ತುತಿದೆ. ಮಳೆ ಹುಯ್ಯುತಿದೆ. ಹಳ್ಳಗಳು ತುಂಬಿ ಹರಿಯುತ್ತಿವೆ. ಹಳ್ಳಿಯಿಂದ ಯಾರೂ ಬರುವಂತಿಲ್ಲ, ನೋಡರಿಲ್ಲದೆ ಶಿವ ಪೂಜೆ ಸಾಗದು. ಶಿವಪೂಜೆಯಿಲ್ಲದೆ ಶಿವಾಚಾರ್ಯರ ಮನಸ್ಸು ಸಮಾಧಾನವಾಗದು, ಸ್ವಲ್ಪ ಯೋಚನೆಗೆ ಒಳಗಾಗುವರು. ಶಿವನಿಚ್ಛೆಯಿದ್ದಂತಾಗಲೆಂದು ಶಿವ ಧ್ಯಾನಾಸಕ್ತರಾಗುವರು. ಅಷ್ಟರಲ್ಲಿ ಒಬ್ಬ ಭಕ್ತನು ಎಣ್ಣೆಯನ್ನು ತೆಗೆದುಕೊಂಡು ಬರುವನು, ಆತನು ಇವರ ಪೂಜೆಗೆ ಎಣ್ಣೆಯಿಲ್ಲೆಂದು ತಿಳಿದು ತರಲಿಲ್ಲ. ತನ್ನಷ್ಟಕ್ಕೆ ತಾನು ಪ್ರೇರಿತನಾಗಿ ತರುವನು, ಶಿವಾಚಾರ್ಯರಿಗೆ ತುಂಬಾ ಸಂತಸವಾಗುವುದು. ಶಿವನು ತನ್ನ ಪೂಜೆಗೆ ತಾನೆ ಎಣ್ಣೆಯನ್ನು ಈ ಭಕ್ತನ ಮುಖಾಂತರ ಒದಗಿಸಿಕೊಂಡನೆಂದು ಭಾವಿಸುವರು, ಎಣ್ಣೆ ಹಾಕಿ ನೊಡರು ಹಚ್ಚಿ ಹರುಷದಿಂದ ಪೂಜಿಸುವರು. ಸತ್ಯವ್ರತರ ವ್ರತಕ್ಕೆ ಸಾಮಾನ್ಯವಾಗಿ ಭಂಗಬಾರದು. ಹೇಗಾದರೂ ಹೊಂದಿ ಬರುತ್ತದೆ; ಕೊರತೆ ಕೈಗೂಡುತ್ತದೆ. ಅವರ ಮನಸ್ಸಿನಲ್ಲಿ ಕೊರತೆಯಿದ್ದರಲ್ಲವೆ ಹೊರಗೆ ಕೊರತೆ ಬರುವುದು ? ಇದನ್ನೆ ಸಮಯ ಬಲವೆನ್ನುವರು; ಲೀಲೆಯೆನ್ನುವರು, ಯಾವ ಸಾಹಸವಿಲ್ಲದೆ ಸಹಜವಾಗಿ ಸಮಯಕ್ಕೆ ತಾನೆ ತಾನಾಗಿ ಒದಗಿಬರುವುದೂ ಒಂದು ಕಾಕತಾಳನ್ಯಾಯ ! ಇದ್ದಕ್ಕೂ ಒಂದು ಯೋಗಬೇಕು ; ಪುಣ್ಯಬೇಕು,

## ಶ್ರೀಶೈಲ ಯಾತ್ರೆ :

> ಕೃತಯುಗದಲ್ಲಿ ಕೇದಾರವೇ ಮೂಲ ಸ್ಥಾನ,
> ತ್ರೇತಾಯುಗದಲ್ಲಿ ವಾರಣಾಸಿಯೆಂಬ ಮೂಲಸ್ಥಾನ,
> ದ್ವಾಪರದಲ್ಲಿ ವಿರುಪಾಕ್ಷನೆಂಬ ಮೂಲಸ್ಥಾನ,
> ಕಲಿಯುಗದಲ್ಲಿ ಪರ್ವತವೆಂಬ ಮೂಲಸ್ಥಾನ,
> ನಾನಾ ಸ್ಥಾನಂಗಳ ಮುಟ್ಟಿದೆ, ಜಂಗಮವೇ
> ಲಿಂಗವೆಂದು ನಂಬಿದೆ ಕೂಡಲಸಂಗಮದೇವಾ

ಕಲಿಯುಗದ ಕ್ಷೇತ್ರ ಶ್ರೀಶೈಲ, ಕಲಿಮಲವ ಕಳೆವ ಕ್ಷೇತ್ರ ಶ್ರೀಶೈಲ ಎಂಥವರನ್ನೂ ಎತ್ತಿ ಹಿಡಿಯುತ್ತೆ ಕ್ಷೇತ್ರ. ಭೌತಿಕ ದೈವಿಕ ಮತ್ತು ಸಸ್ಯ ಸಂಪತ್ತುಳ್ಳ ಶೈಲ–ಶ್ರೀಶೈಲ. ಭ್ರಮರಾಂಬೆ ಮಲ್ಲಿಕಾರ್ಜುನರು ನೆಲಸಿದ ನೆಲ ಶ್ರೀಶೈಲ. ಜಗದ್ಗುರು ಪಂಚಾಚಾರ್ಯರಲ್ಲಿ ಒಬ್ಬರಾದ ಜಗದ್ಗುರು ಪಂಡಿತಾರಾಧ್ಯರ ಪಾವನ

ಪೀಠ ಶ್ರೀಶೈಲ. ಚಂದ್ರಾವತಿ ಚಂದ್ರಗುಪ್ತರು ವಾಸವಾಗಿದ್ದ ಸ್ಥಲ ಶ್ರೀಶೈಲ. ಮಲ್ಲಿಕಾರ್ಜುನ ಎಂಬ ನಾಮ ಬರಲು ಕಾರಣಕರ್ತಳು ಚಂದ್ರಾವತಿ! ಚಂದ್ರಾವತಿ ಚಂದ್ರಗುಪ್ತನ ಕುಮಾರಿ. ಕದಳಿವನವನ್ನು ನಿರ್ಮಿಸಿದ ವಿರೂಪಾಕ್ಷ ದೇಶಿಕೇಂದ್ರ ಜಗದ್ಗುರುಗಳ ಚರಣ ಧೂಳಿಯಿಂದ ಪಾವನವಾದ ಕ್ಷೇತ್ರ. ಮಹಾದೇವಿಯಕ್ಕನ ಆರಾಧ್ಯಮೂರ್ತಿ ಮಲ್ಲಿಕಾರ್ಜುನ; ವಾಸ್ತವ್ಯ ನಿಕೇತನ ಕದಳಿವನ. ಸಕಲೇಶ ಮಾದರಸ, ಪ್ರಭುದೇವ, ಸಿದ್ಧರಾಮ, ಜಗದ್ಗುರು ಚಂದ್ರಗುಂಡ ಶಿವಾಚಾರ್ಯ, ರುದ್ರಮುನಿ, ಹೇಮರೆಡ್ಡಿ ಮಲ್ಲಮ್ಮ ಮೊದಲಾದ ಪುಣ್ಯ ಪುರುಷರನ್ನು ಸತ್ಯಶರಣೆಯರನ್ನು ಆಕರ್ಷಿಸಿದ ಆದರ್ಶ ಕ್ಷೇತ್ರ ಶ್ರೀಶೈಲ. ಅದು ಕೇವಲ ಶೈವಕ್ಷೇತ್ರವಾಗಿಲ್ಲ; ವೀರಶೈವ ಕ್ಷೇತ್ರವೂ ಆಗಿದೆ. ವೀರಶೈವ ಮಹಾನುಭಾವರೆಲ್ಲ ಪಾದಗಳನ್ನಿಟ್ಟ ಪಾವನ ಭೂಮಿಯಾಗಿದೆ. ಇಲ್ಲಿಗೆ ಬಾರದ ಪುಣ್ಯವಿಲ್ಲ, ಗಣ್ಯರಿಲ್ಲ. ಇಂದಿನ ಈ ಇಪ್ಪತ್ತನೆಯ ಶತಮಾನದ ಮಹಾನುಭಾವರೆಲ್ಲರೂ ಈ ಕ್ಷೇತ್ರಯಾತ್ರೆಯನ್ನು ಮಾಡಿದ್ದಾರೆ. ಇದರ ಪಾತಾಳಗಂಗೆಯಲ್ಲಿ ಮಿಂದವರು ಪಾವನರಾಗುತ್ತಾರೆ. ಇದರ ಶಿಖರವನ್ನು ಕಂಡರೆ ಜನ್ಮಕರ್ಮ ಹರಿಯುತ್ತದೆ. ರೋಗರುಜಿನಗಳು ವಾಸಿಯಾಗುತ್ತವೆ. ಕದಳಿವನದ ಮಹಾತ್ಮೆಗೆ ಕೊನೆ ಮೊದಲಿಲ್ಲ. ಚೇತನಮೂರ್ತಿಗಳ ನಿಜ ನಿಕೇತನವಾಗಿದೆಯೆಂದರೆ ಅದರ ಅಗ್ಗಳಿಕೆಗೆ ಅಂತ್ಯವಿದೆಯೆ? ಇಂತು ಅನಂತ ಮಹಂತ ಚರಿತ್ರವುಳ್ಳ ಶ್ರೀಗಿರಿ ಕ್ಷೇತ್ರ ಶಾಂತವೀರ ಶಿವಾಚಾರ್ಯರ ಸುಚಿತ್ತವನ್ನು ಆಕರ್ಷಿಸದಿಲ್ಲ. ಆದಕ್ಕೆ ಆಕರ್ಷಿತರಾದ ಇವರೂ ಒಮ್ಮೆ ಶ್ರೀಶೈಲ ಯಾತ್ರೆಯನ್ನು ಮಾಡಿದ್ದಾರೆ. ತಾವೊಬ್ಬರೆ ಮಾಡಿಲ್ಲ. ತಮ್ಮ ಶಿಷ್ಯವೃಂದದೊಡನೆ ಮಾಡಿದ್ದಾರೆ. ಇವರು ಹೋದದ್ದಕ್ಕೆ ಇವರ ಶಿಷ್ಯರು ಹೋದರು. ಇವರಿಂದ ಶ್ರೀಶೈಲ. ಶ್ರೀಶೈಲದಿಂದ ಇವರು ಪರಸ್ಪರ ಪ್ರೇರಿತರಾದರು. ಅದರ ಆ ವಿಶೇಷಗಳನ್ನು ನೋಡಿ ನೋಡಿ ಇವರು ಆನಂದಿಸಿದರು. ಇವರ ಪಾವನ ಚರಣ ಸ್ಪರ್ಶದಿಂದ ಅದು ಮತ್ತಷ್ಟು ಮಂಗಲತೆಯನ್ನು ಪಡೆಯಿತು. ಶ್ರೀಗುರುಗಳಿಗೂ ಶ್ರೀಗಿರಿಗೂ ನಂಟು. ಅನ್ಯೋನ್ಯವಾಗಿ ಅನೇಕ ಗುಣಗಣಗಳ ಗಂಟು. ಅಂತೆಯೆ ಏನೊ; ದೇಶ ಕಾಲ ವಸ್ತುಗಳಿಗಧೀನ ಈಶ ದರ್ಶನ—ಎಂದು ಹಿಂದಿನ ಹಿರಿಯರು ಹೇಳಿರುವುದು! ಇಲ್ಲಿ ವಸ್ತುವೆಂದರೆ ಮೂರರ್ಥಗಳು. ವನ್ಯಸಂಪತ್ತು, ಮಲ್ಲಿಕಾರ್ಜುನಲಿಂಗ, ಮತ್ತು ಅಲ್ಲಿಗೆ ಬಂದು ನಿಂದ, ಚರಿಸಿ ಹೋದ ಗುರುವೃಂದ. ಅಂತೆಯೆ ಶಾಂತವೀರ ಶಿವಾಚಾರ್ಯರೂ ಅಲ್ಲಿ ಸುಳಿದು, ಅದರಿಂದ ನಲಿದು ಬಂದಿದ್ದಾರೆ. ಮತ್ತಷ್ಟು ಶಾಂತಿ ಕಳಾಗುರುವಾಗಿದ್ದಾರೆ; ಶಕ್ತಿಸಂಪನ್ನ ಶ್ರೀಗುರುವಾಗಿದ್ದಾರೆ. ಒಂದು ಸಲ ಶಿವಾಚಾರ್ಯರು ರಾಮೇಶ್ವರ ಯಾತ್ರೆಯನ್ನು ಮಾಡಿ ಬಂದಿರುವರೆಂಬ ಮಾತನ್ನು ಇಲ್ಲಿ ಸ್ಮರಿಸಬಹುದಾಗಿದೆ. ರಾಮೇಶ್ವರಲಿಂಗ, ರಾಮನಿಗಿಂತ ಮೊದಲು ಸ್ಥಾಪಿತವಾದುದೆಂದು ಶಿವಾಚಾರ್ಯರ ಮತವಾಗಿದೆ.

ವೈದ್ಯರ ವೈದ್ಯರು :

ಹಾಗೂ ಅಹುದು, ಹೀಗೂ ಅಹುದು. ಭವರೋಗ ವೈದ್ಯರೂ ಆಗ ಬಲ್ಲರು, ತನುರೋಗ ವೈದ್ಯರೂ ಆಗಬಲ್ಲರು ಗುರುಗಳು ಎಂಬುದಕ್ಕೆ ಶಾಂತವೀರ ಶಿವಾಚಾರ್ಯರೂ ಹೊರಗೇನಲ್ಲ. ಇವರು ಶ್ರೀಗಿರಿಗೆ ಹೋಗುವಾಗ ಹಾದಿಯಲ್ಲಿ ಇಂತಹ ಒಂದು ಘಟನೆ ಇವರಿಂದ ಸಹಜವಾಗಿ ನಿರ್ಹೇತುಕವಾಗಿ ನಡೆಯು ತ್ತದೆ. ಅದಿದು:

ಶಿವಾಚಾರ್ಯರು ಶ್ರೀಶೈಲಕ್ಕೆ ಹೋಗುವ ಮಾರ್ಗದಲ್ಲಿ ಆ ಭಾಗದಲ್ಲಿ ಪ್ರಸಿದ್ಧವಾದ ಗದಗ ನಗರಕ್ಕೂ ಬರುತ್ತಾರೆ. ಅಲ್ಲಿ ಸುಪ್ರಸಿದ್ಧ ವೈದ್ಯನು (ಡಾಕ್ಟರು) ಕಲ್ಲೊಳ್ಳಿಯವರು, ಇವರಿಗೆ ಹೊಟ್ಟೆನೋವಿದ್ದಿತು. ನಾಲ್ಕಾರು ವರುಷ ಗಳಿಂದ ಏನು ಮಾಡಿದರೂ ಹೋಗಿರಲಿಲ್ಲ. ಆ ಊರಿನ ಎಲ್ಲ ವೈದ್ಯರು ಎಲ್ಲ ಡಾಕ್ಟರುಗಳು ಮುಗಿದಿದ್ದರು. ಯಾವ ಚಿಕಿತ್ಸೆಗೂ ಇದು ಜಗ್ಗಿರಲಿಲ್ಲ. ಶಿವಾ ಚಾರ್ಯರು ಇವರಲ್ಲಿದ್ದರು. ಇವರಲ್ಲಿದ್ದಾಗ ಅವರಿಗೆ ಹೊಟ್ಟೆನೋವು ಬರು ವುದು. ಹೆಚ್ಚಾಗಿ ನೋವನ್ನು ತಾಳದಾದರು. ನೆಲದಲ್ಲಿ ಬಿದ್ದು ಉರುಳಾಡಿದರು. ಎದೆ ಹೊಟ್ಟೆ ಹೊಡೆದುಕೊಂಡರು. ಡಾಕ್ಟರರ ಈ ಗೋಳನ್ನು ನೋಡಿ ಮೃದು ಹೃದಯರಾದ ಶಿವಾಚಾರ್ಯರು ಮಮ್ಮಲಮರುಗುವರು. ಅವರ ಬಳಿಗೆ ಹೋಗಿ ತಮ್ಮ ಅಮೃತ ಹಸ್ತವನ್ನು ಅವರ ಒಡಲ ಮೇಲಿಡುವರು. ಮಹಾದೇವನಲ್ಲಿ ಮೊರೆಯಿಡುವರು : "ಶಿವಶಿವ! ಇವರೆಷ್ಟು ಸಂಕಟಪಡುವರಲ್ಲಾ! ಇವರ ಈ ಹೃದಯದ್ರಾವಕ ದುಃಖವನ್ನು ಕಣ್ಣಾರೆ ಕಾಣಲಾರೆವು! ಶಿವನೇ ನೀನು ಭಕ್ತ ಬಂಧು, ದೀನಬಂಧು; ಶರಣಾಗತ ರಕ್ಷಕ ಕೃಪೆ ಮಾಡು. ಇವರ ಈ ಒಡಲ ನೋವನ್ನು ನಿವಾರಿಸು."—ಎಂದು ಶಿವನಲ್ಲಿ ಘನಮನದಿಂದ ಮೊರೆಯಿಡುವರು. ತಮ್ಮ ಹಸ್ತದಿಂದ ಅವರ ಒಡಲನ್ನು ತಿಕ್ಕುವರು. ಅವರ ಹಸ್ತಗುಣದಿಂದ ವೈದ್ಯರ ಉದರ ವೇದನೆ ನಸು ಹೊತ್ತಿನಲ್ಲಿ ಇಲ್ಲದಾಗುವುದು. ಅವರು ಆ ಕೂಡಲೆ ಎದ್ದು ಶಿವಾಚಾರ್ಯರ ಶ್ರೀಚರಣಕ್ಕೆ ನಮಿಸುವರು. ಎಂತೆಂತಹ ವೈದ್ಯ ರಿಂದ ವಾಸಿಯಾಗದ ಹೊಟ್ಟೆ ಬೇನೆ ಶಿವಾಚಾರ್ಯರ ಅಮೃತಹಸ್ತದ ಸ್ಪರ್ಶ ಪ್ರಭಾವದಿಂದ ಪರಿಹಾರವಾಗುವುದು. ಔಷಧಿಗಳಿಗಿಂತ ಹಸ್ತಗುಣ ಹೆಚ್ಚಿನದು ಚಿಕಿತ್ಸಾಪಥದಲ್ಲಿ! ಸಂತರ ಸ್ಪರ್ಶದಲ್ಲಿ ಅಂತಹ ಅಗಾಧಗುಣ ಇರುತ್ತದೆ. ಸ್ಪರ್ಶಮಣಿಗಿಂತ ಹೆಚ್ಚಿನ ಶಕ್ತಿಯಿರುತ್ತದೆ. ತಲ್ಲೀನ ಮನದಿಂದ ತನ್ನ ಲಿಂಗ ವನ್ನು ಪೂಜಿಸಿದವರ ಹಸ್ತದಲ್ಲಿ ವಿಶಿಷ್ಟಗುಣವಿರಬಲ್ಲುದು. ಇದಕ್ಕೆ ಹಸ್ತ ಮಸ್ತಕ ಸಂಯೋಗ ಸಂಸ್ಕಾರವೆ ಸತ್ಯಸಾಕ್ಷಿ; ಪ್ರತ್ಯಕ್ಷ ಪ್ರಮಾಣ. ಮಲಜೀವಿ ನಿರ್ಮಲ ಜೀವಿಯಾಗುತ್ತಾನೆ, ದರ್ಶನದಲ್ಲಿಯೆ ಒಂದು ಪರಿಣಾಮಕಾರಿಯಾದ ಶಕ್ತಿಯಿರು ವಾಗ ಸ್ಪರ್ಶದಲ್ಲಿರದೆ? ವೈದ್ಯ ಚಿಕಿತ್ಸೆಯಲ್ಲಿ ಸ್ಪರ್ಶ (ಮರ್ದನ) ಚಿಕಿತ್ಸೆಯೂ

ಒಂದಾಗಿದೆಯೆಂಬುದನ್ನು ಯಾರು ಅರಿಯರು ? ಅದರಲ್ಲಿಯೂ ಮಹಾನುಭಾವರ ಹಸ್ತಮರ್ದನವಾದರೆ ಕೇಳಬೇಕೆ ? ಡಾಕ್ಟರ ಉದರವ್ಯಾಧಿ ವಾಸಿಯಾದುದರಲ್ಲಿ ವಿಸ್ಮಯವೆ ?

ಹರಳೇಶ್ವರದಲ್ಲಿ ನೆಲಸಿದ ನಂತರ ಅಲ್ಲಿನ ಕಾರ್ಯಕ್ಷೇತ್ರ ವಿಶಾಲವಾಗುವುದು. ಅನೇಕ ಭಾವುಕರು ಭಕ್ತರು ವಿದ್ವಾಂಸರು ಅನುಭಾವಿಗಳು ಆಕರ್ಷಿತರಾದರು. ಶಿವಾಚಾರ್ಯರ ಸಂದರ್ಶನ ಸಂಭಾಷಣೆಗಳಿಂದ ಲಿಂಗಪೂಜೆ ಪಾದಪೂಜೆಗಳಲ್ಲಿ ಭಾಗವಹಿಸುವುದರಿಂದ ಧನ್ಯರು ಪುಣ್ಯರು ಆಗುವರು, ಶಕ್ತರು ಮುಕ್ತರು ಆಗುವರು. ಎಡಹಳ್ಳಿಯ ಶ್ರೀಮಂತ ಮಲ್ಲಪ್ಪ ದೇಸಾಯರು ಇವರ ಮಗ ಶ್ರೀಮಂತ ರಾಚಪ್ಪ ದೇಸಾಯರು ಜತ್ತ ಗ್ರಾಮದ ಪ್ರಸಿದ್ಧ ವ್ಯಾಪಾರಿಗಳಾದ ಅರಬಳ್ಳಿ ತಮ್ಮಪ್ಪನವರು ಶಿವಾಚಾರ್ಯರಲ್ಲಿ ಸಾಕಿಶಯ ಶ್ರದ್ಧಾನ್ವಿತರು; ನಿಷ್ಠಾಗರಿಷ್ಠರು. ಹುಬ್ಬಳ್ಳಿ, ಜತ್ತಗಳಲ್ಲಿರುವ ಅವರ ಮನೆಗಳ ಶಾಂತಿಕಾರ್ಯ ಒಂದೇದಿನ ಶಿವಾಚಾರ್ಯರು ನೆರವೇರಿಸಿದರೆಂಬ ಮಾತನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಶಿವಾಚಾರ್ಯರ ಅನುಗ್ರಹದಿಂದ ತಮ್ಮಣ್ಣಪ್ಪನವರಿಗೂ ಇವರ ಮಗಳಿಗೂ ಮಕ್ಕಳಾಗಿರುವರು. ಅದೇ ಜತ್ತ ಗ್ರಾಮದ ಶಿವಪ್ಪ ಕಾಳಗಿ ಎಂಬ ಸದ್ಭಕ್ತನ ಸೊಸೆಗೆ ವಿಭೂತಿಯೊಂದನ್ನು ಆಶೀರ್ವದಿಸಿ ಅವಳಿಗಿರುವ ಬೇನೆಯನ್ನು ಕಳೆಯುವರು. ವಿಜಾಪುರದ ಶ್ರೀ ಆರ್. ಎಸ್. ಹಿರೇಮಠ ಡಾಕ್ಟರರ ತಂದೆ ಶ್ರೀ ರಾಜಯ್ಯನವರ ಒಡಲ ಬೇನೆಯನ್ನು ವಾಸಿ ಮಾಡುವರು. ಇವೆಲ್ಲ ಸುದ್ದಿಗಳು ಅಲ್ಲಲ್ಲಿ ಹಬ್ಬಿ ಅಸಂಖ್ಯಾತರು ಆಶ್ರಮಕ್ಕೆ ಬಂದು ಶಿವಾಚಾರ್ಯರ ಆಶೀರ್ವಾದಕ್ಕೆ ಪಾತ್ರರಾದರು. ಆಗುತ್ತಿರುವರು. ಹೀಗೆ ಬಂದ ಜನರೆಲ್ಲ ಉದ್ಧರಿಸುತ್ತ ಪಾವನ ಕ್ಷೇತ್ರದಲ್ಲಿ ಪರಮಾತ್ಮ ಸ್ವರೂಪಿಗಳಾಗಿ ಶಿವಾಚಾರ್ಯರು ವಾಸವಾಗಿದ್ದರು.

ಹರಳಯ್ಯ ಶರಣನ ಹೆಸರಿನಲ್ಲಿರುವ ಆ ಆಶ್ರಮಕ್ಕೆ ಇನ್ನೂ ಹೆಚ್ಚಿನ ಯೋಗ ಒದಗಿ ಬಂದಿದೆ. ಪೂರ್ವದಿಂದಲೂ ಒದಗಿದೆ. ಷಟ್‌ಸ್ಥಲ ಚಕ್ರವರ್ತಿ ಚನ್ನಬಸವಣ್ಣನವರೂ ಸಹ ಈ ಕ್ಷೇತ್ರಕ್ಕೆ ಆಗಮಿಸಿ ಅರ್ಚನಾನುಷ್ಠಾನವನ್ನು ನೆರವೇರಿಸಿ ಕ್ಷೇತ್ರಕ್ಕೆ ಮತ್ತೊಂದು ಮಹಾ ಯೋಗವನ್ನು ಒದಗಿಸಿ ಮುಂದೆ ಉಳಿವೆ ಮಹಾ ಮನೆಗೆ ಬಿಜಯಂಗೈದರೆಂದು ಹೇಳುವರು, ಹೀಗೆ ಅಂದಿನ ಹಲವಾರು ಶಿವಶರಣರು ಬಂದು ಇಲ್ಲಿದ್ದು ತಮ್ಮ ಪಾದಧೂಳಿಯಿಂದ ಪಾವನವಾಗಿಸಿರುವರಂತೆ ! ಅಂದಿನ ಆ ಚನ್ನ ಬಸವಣ್ಣನವರೇ ಮತ್ತೊಂದು ಶಾಂತವೀರ ಶಿವಾಚಾರ್ಯರಾಗಿ ಬಂದು ನೆಲಸಿದಂತಾಗಿದೆ. ಅದೇ ಪ್ರಜ್ಞೆ, ಅದೇ ಪ್ರತಿಭೆ; ಅದೇ ನಿಲುವು ಇವರದು. ಅವರ ಅಪರಾವತಾರವೊ ಏನೊ ಎನ್ನುವಂತಿರುವರು.

ಮುಂಜಾವಿನೊಳಿದ್ದು :

ವಿಜಾಪುರಕ್ಕೆ ಶ್ರೀಗಳು ಬಿನ್ನಹಕ್ಕೆ ಬಿಜಯಂಗೈದಿರುವರು. ನಗರಕ್ಕೆ ದಯಮಾಡಿದ ಸುದ್ದಿ ಎಲ್ಲೆಲ್ಲಿಯೂ ತಿಳಿಯುವುದು. ಅನೇಕ ಸದ್ಭಕ್ತರು ಸನ್ನಿಧಿಯ ಸಂದರ್ಶನಕ್ಕೆ ಬರತೊಡಗಿದರು. ಹಗಲೆಲ್ಲ ಬರುಹೋಗುವವರಿಗೆ ಬಿಡುವೇ ಇರಲಿಲ್ಲ, ಶಿವಾಚಾರ್ಯ ರಲ್ಲಿ ಜನಾನುರಾಗ ಅಂತಹದು.

ಹೊತ್ತು ಮುಳುಗುತ್ತ ಬಂತು. ಆ ವೇಳೆಯಲ್ಲಿ ಒಬ್ಬ ಹಣ್ಣು ಹಣ್ಣಾದ ಮುದಿಕಿ ಬರುವಳು. ಬೇಗ ದಿವ್ಯ ಮೂರ್ತಿಯ ದರ್ಶನ ಪಡೆದು ಹೋಗಬೇಕೆಂದು ಬಂದಳು. ಆದರೆ ಜನರ ಒತ್ತಡದಲ್ಲಿ ಅಜ್ಜಿಗೆ ಅವಕಾಶ ಬೇಗ ಸಿಕ್ಕದೆ ಹೋಯಿತು. ಜನ ಬರುವುದು ಕಡಿಮೆಯಾಯಿತು. ಆಗ ಅಜ್ಜಿ ಗುರುದರ್ಶನಕ್ಕೆ ಹೋಗುವುದು. ಆಗ ಆ ಅಜ್ಜಿಯನ್ನು ನೋಡಿ ಸಿವಾಚಾರ್ಯರು "ಅಮ್ಮಾ, ಎಲ್ಲಿಂದ ಬಂದೆಯಮ್ಮಾ, ಯಾರು ನೀನಮ್ಮಾ; ಚನ್ನಾಗಿರುವೆಯೇನಮ್ಮ ? ಎಂದು ಕೇಳುವರು.

ಅಪ್ಪಾ ! ನಾನು ಈ ಊರಿನವಳಲ್ಲ, ಪರಸ್ಥಳದವಳು, ಕಣಮುಚನಾಳದ ಸಂಗಮ್ಮ ಎಂಬುದು ನನ್ನ ಹೆಸರು, ನನ್ನ ಹಲ್ಲು ನೋವಾಗಿವೆ. ವೈದ್ಯರಿಗೆ ತೋರಿಸಲು ಈ ಊರಿಗೆ ಬಂದಿದ್ದೆ. ತಾವು ಇಲ್ಲಿಗೆ ದಯಮಾಡಿಸಿರುವ ಸುದ್ದಿ ತಿಳಿದು ತಮ್ಮ ದರ್ಶನಾಶೀರ್ವಾದಕ್ಕೆ ಬಂದೆ. ಜನ ಜಾತ್ರೆಯಪ್ಪ ನಿನ್ನ ಕಾಣಬೇಕಾದರೆ ಇಷ್ಟೊತ್ತು ಬೇಕಾಯ್ತು.

ಈಗ ನಿನ್ನ ಹಲ್ಲಿನ ನೋವು ಹೇಗಿದೆಯಮ್ಮಾ ?

ಅಪ್ಪಾ! ಸ್ವಲ್ಪ ಕಡಿಮೆಯಾಗಿದೆ ನಿನ್ನ ದಯದಿಂದ.

ತಾಯಿ; ನೀನು ಪರಸ್ಥಳದವಳೆಂದು ಹೇಳುತ್ತಿ. ಈಗ ಹೋಗಬೇಡ, ಇಲ್ಲಿಯೆ ಇದ್ದು ಊಟ ಮಾಡಿ ಮಲಗಿಕೋ ಮುಂಜಾವಿನಲ್ಲಿ ಎದ್ದು ಊರಿಗೆ ಹೋಗಮ್ಮ.

ಹಾಗೆ ಆಗಲಿ ನನ್ನಪ್ಪಾ ! ನಿನ್ನ ದಯಾ ದೊಡ್ಡದಪ್ಪಾ ! ! ಎಂದು ಸಂತೋಷ ಪಡುವಳು. ಊಟವೂ ಆಗುವುದು, ಒಂದು ರೂಮಿಗೆ ಹೋಗಿ ಮಲಗಲು ಅನು ವಾಗುವಾಗ ಅಲ್ಲಿರುವವರು ಈ ಅಜ್ಜಿ ಅಲ್ಲಿ ಮಲಗುವುದನ್ನು ಸಹಿಸದಾಗುವರು. ಗಟ್ಟಿಯಾಗಿ ಗದರುವರು, ಇಲ್ಲಿ ಸ್ಥಳವಿಲ್ಲ. ಮಲಗಬೇಡ. ಹೊರಕ್ಕೆ ಹೋಗಿ, ಅಲ್ಲಿ ಎಲ್ಲಿಯಾದರೂ ಮಲಗಿಕೋ ಎನ್ನುವರು.

ಈ ಮಾತುಗಳು ಶಿವಾಚಾರ್ಯರಿಗೆ ಕೇಳಿಸುವವು. ಒಡನೆ ಅಲ್ಲಿಗೆ ಎದ್ದು ಬಂದು, ಜನರಿಗೆ ಬುದ್ಧಿ ಹೇಳುವರು. "ಅವಳು ಮುಪ್ಪಿನವಳು. ಮೈಯಲ್ಲಿ ಬಲವಿಲ್ಲ. ಬೆಳಗಾಗುವವರೆಗೆ ಬಯಲಲ್ಲಿ ಮಲಗಿದರೆ ಆಕೆಯ ಗತಿಯೇನು ? ನಿಮಗೆ ಸ್ವಲ್ಪಾ

ದರೂ ವಿಚಾರವಿಲ್ಲ. ಆ ತಾಯಿ, ಒಳಗೆ ಮಲಗಿದರೆ ಮಲಗಿದ ಜಾಗ ಮಾಸುವು ದೇನು ? ಮಾಯವಾಗುವುದೇನು ? ನಿಮ್ಮಂತೆ ಅವಳ ಜೀವವಲ್ಲವೇನು ? ಒಳಗೆ ಅವಳು ಬೆಚ್ಚಗೆ ಮಲಗಲಿ. ಮುಂಜಾವದಲ್ಲಿ ಎದ್ದು ತನ್ನ ಊರಿಗೆ ಹೋಗುವಳು. ಹೊರಕ್ಕೆ ಕಳುಹಿಸಬೇಡಿರಿ, ಎಂದು ಅಪ್ಪಣೆ ಮಾಡುವರು,

ಆಗ ಎಲ್ಲರೂ ಮರುಮಾತಾಡದೆ ಸುಮ್ಮನಾಗುವರು, ಆ ಹಣ್ಣು ತಾಯಿ ಅಂದು ಅಲ್ಲಿಯೇ ಮಲಗಿ ಬೆಳಗಾದರೆ ಎದ್ದು ಶಿವಾಚಾರ್ಯರ ದಯಾಗುಣವನ್ನು ಹಾಡಿ ಹರಸುತ್ತ ತನ್ನ ಊರಿಗೆ ಹೊರಟು ಹೋಗುವಳು. ಇದು ಶಿವಾಚಾರ್ಯರ ಆದರ್ಶ ಜೀವನದ ಮತ್ತೊಂದು ಮುಖ. ಎಂಥವರನ್ನು ಅವರು ಕರುಣ ಹೃದಯ ದಿಂದ ಕಾಣುತ್ತಾರೆ ಎಂಬುದಕ್ಕೆ ಇದೊಂದು ನೈಜ ನಿದರ್ಶನ. ಹೊಸಬರು ಹಳಬ ರನ್ನು ಹಗುರಾಗಿ ಕಾಣಬಾರದು. ಅಸಹಾಯಕರಿಗೆ ಸಹಾಯಕರಾಗಿ ಬಾಳಬೇಕು. ಅಸಹಾಯ ಸ್ಥಿತಿ ಯಾರಿಗೂ ಬಾರದಿರದು. ನಾವಿಂದು ಒಬ್ಬರನ್ನು ಕಂಡಂತೆ, ನಾಳೆ ನಮ್ಮನ್ನು ಮತ್ತೊಬ್ಬರು ಹೀಗೆ ಕಂಡಾರು. ಕಾಣುವ ಕಣ್ಣು ಮನ ಕರುಣಾರ್ದ್ರವಾಗಿರ ಬೇಕು. ಎಂಬ ಎಚ್ಚರಿಕೆ ಮುದಿಕೆಯನ್ನು ಮನೆಯಿಂದ ಹೊರಕ್ಕೆ ಹಾಕಲಿದ್ದ ಕಠಿಣಾತ್ಮ ರಿಗೆ ಉಂಟಾಗಿರಬೇಕು. ಅಂಥವರ ಮನಸ್ಸಿಗೂ ಬೆಳಕನ್ನು ಅಂಟಿಸುವ ಮಣಿಹ ಮಹಾ ಪೂಜ್ಯರದು, ಮುಂಜಾವಿನೊಳೆದ್ದು ಊರಿಗೆ ಹೋಗು. ಎಂತಹ ಅರ್ಥ ಪೂರ್ಣ ಸಂದೇಶ.

## ತೊಂಬತ್ತು ವಯಸ್ಸು :

ಭಕ್ತೋದ್ಧಾರದಲ್ಲಿ ಕಂಕಣಬದ್ಧರು ಶಿವಾಚಾರ್ಯರು. ಭಕ್ತರ ಕಾರ್ಯಗಳೆಂದರೆ ತಮ್ಮನ್ನು ತಾವೇ ಮರೆಯುತ್ತಾರೆ. ತಮಗೆ ಎಷ್ಟೆ ತೊಂದರೆಯಿರಲಿ ಲೆಕ್ಕಿಸದೆ ಭಕ್ತರ ಬೇಡಿಕೆಗಳನ್ನು ನೆರವೇರಿಸುತ್ತಾರೆ. ತಮಗೀಗ ತುಂಬಾ ವಯಸ್ಸಾಗಿದ್ದರೂ ಭಕ್ತರು ಬಯಸಿದಲ್ಲಿಗೆ ದಯಮಾಡಿಸುತ್ತಾರೆ. ಅವರ ಬಯಕೆಗಳನ್ನು ನೆರ ವೇರಿಸುತ್ತಾರೆ.

ಈಗ ಇವರಿಗೆ ತೊಂಭತ್ತು ವಯಸ್ಸು. ಆದರೂ ಅಪಾರ ಇವರ ತೇಜಸ್ಸು ಅಪೂರ್ವ ಸಾಮರ್ಥ್ಯವುಳ್ಳದ್ದು ಇವರ ಮನಸ್ಸು. ಇಂದಿಗೂ ಅವರಿಗಿರುವ ಸ್ಫೂರ್ತಿ ಆದರ್ಶವಾದುದು. ಹಗಲಿರುಳು ಸ್ವಯಂ ಸಾಧನ_ಪರಸಾಧನಗಳಲ್ಲಿ ನಿರತರಾಗಿರುತ್ತಾರೆ ಬೇಸರಿಕೆಯೆಂಬುದನ್ನೇ ಅವರರಿಯರು. ಸಾರ್ವಜನಿಕರಿಗಾಗಿ ಆಗಾಗ ಸತ್ಕಾರ್ಯಗಳನ್ನು ಹಮ್ಮಿಕೊಳ್ಳುತ್ತಾರೆ. ಹಮ್ಮಿಕೊಂಡುದನ್ನು ಯಶಸ್ವಿಯಾಗಿ ಸಾಗಿಸುತ್ತಾರೆ, ಅವರ ಮೈ ಪೆಟ್ಟು ತಿಂದದ್ದರೂ ಅವರ ಮನ ಪರಿಶುದ್ಧ ಮಣಿಹದ ಪಟ್ಟನ್ನು ಬಿಟ್ಟಿಲ್ಲ.

## ವೈಚಾರಿಕ ಕ್ರಾಂತಿ :

ಶ್ರೀ ಶಾಂತವೀರ ಶಿವಾಚಾರ್ಯರು ಮೂಢ ಸಂಪ್ರದಾಯದವರಲ್ಲ. ಪ್ರತಿ ಯೊಂದನ್ನು ತಮ್ಮ ವಿಚಾರದ ಹೊಳಹಿಗೆ ಹಿಡಿದು ನೋಡುವವರು. ಪ್ರಜ್ಞಾ

ಪ್ರಕಾಶದಲ್ಲಿ ಸರಿಪಡಿಸಿ ಶೋಭಿಸುವಂತೆ ಮಾಡುವವರು. ವೈಚಾರಿಕ ಕಾಂತಿಯಲ್ಲಿ ಅವರ ಬಾಳು ಶೋಭಿಸುತ್ತಿದೆ. ಆಚಾರ ಶುದ್ಧಿ ವಿಚಾರ ಶುದ್ಧಿಗಳೆರಡರ ಸಮನ್ವಯ ಸ್ವರೂಪರವನು. ಅರಿವಿನ ಬೆಳಕಿಲ್ಲದೆ ಅವರು ಏನನ್ನೂ ಆಚರಿಸರು. ವೈಚಾರಿಕ ಶುದ್ಧಿಯಿಂದ ಭಾವಸಿದ್ಧಿಯನ್ನೂ ಆತ್ಮಸಿದ್ಧಿಯನ್ನೂ ಸಂಪಾದಿಸಿದ ಸಿದ್ಧರವರು. ಜಡ ಬುದ್ಧಿಯಿಂದ ಸಂಪ್ರದಾಯಕ್ಕೆ ಅಂಟಿಕೊಳ್ಳುವ ಜೀವ ಅವರದಲ್ಲ, ತರ್ಕಶುದ್ಧವಾದ ಸಂಪ್ರದಾಯವನ್ನು ಕೈ ಬಿಡುವ ಸ್ವಭಾವ ಅವರದಲ್ಲ. ಈಗಾಗಲೆ ವಿವರಿಸಿದ ಅವರ ವಿಶಿಷ್ಟ ವಿಚಾರಗಳಿಂದ ಅವರ ವೈಚಾರಿಕ ಕಾಂತಿ ಎಂತಹದೆಂಬುದು ವಿಚಾರ ಶೀಲರಿಗೆ ಹೊಳೆಯದಿರದು.

ಅವರು ಶಾಂತಿ ಪ್ರಿಯರು. ಆದರೆ ಅವರು ಸಂಕುಚಿತ ಶಾಂತಿಪ್ರಿಯರಲ್ಲ. ವ್ಯಷ್ಟಿ ಶಾಂತಿಯಂತೆ ಸಮಷ್ಟಿ ಶಾಂತಿಯೂ ಅವಶ್ಯವೆಂಬುದು ಅವರ ಸಾಧನಧ್ಯೇಯ. ಅದಕ್ಕಾಗಿ ಅವರು ಬಾಳಿನುದ್ದಕ್ಕೂ ಶ್ರಮಿಸಿದ್ದಾರೆ; ಶ್ರಮಿಸುತ್ತಿದ್ದಾರೆ. ಪರೋಪಕಾರವೇ ಅವರ ಪರಮ ಕೈವಲ್ಯ. ಅದೇ ಅವರ ಜೀವನ ಮೌಲ್ಯ. ಹಾಗೆ ಜೀವಿಸುವುದೇ ಜೀವನ ಸಾರ್ಥಕ್ಯವೆಂದು ಅವರ ಗ್ರಹಿಕೆ. ಈ ಅನುಭವದ ಶಾಂತಿಯ ಮೇಲೆ ಅವರಿಗೆ ಪ್ರೀತಿ. ಆತ್ಮೋದ್ಧಾರ ಪಡೆದು ಶಾಂತಿಗೊಳ್ಳುವಂತೆ ಸರ್ವೋದ್ಧಾರವನ್ನು ಸಾಧಿಸಿ ಅದನ್ನು ಅನುಭವಿಸುವ ಶಾಂತಿಯೆ ಶಾಶ್ವತ ಶಾಂತಿ; ವಿಶ್ವಶಾಂತಿಯೆಂದು ಅವರು ಅರಿತು ಅದಕ್ಕಾಗಿ ಅವರ ಅವಿಚ್ಛಿನ್ನ ಸಾಹಸ !

ಆಚಾರದ ಜೊತೆಗೆ ಅರಿವು ಅನುಭವಗಳಿಲ್ಲದ ಶಾಂತಿ ಸತ್ಯ ಶಾಂತಿಯಲ್ಲ. ಆಚಾರ–ಅರಿವು–ಅನುಭವ ಈ ಮೂರರಿಂದ ಮೂಡಿ ಬರುವ ಶಾಂತಿಯೆ ಶಾಂತಿ. ಈ ಶಾಂತಿಯನ್ನು ಅನುಭವಿಸುವಾತನೆ ವೀರ. ಈ ಮಹಾ ಪಥದಲ್ಲಿ ಸಾಗಿ ಮುನ್ನಡೆದಿದ್ದಾರೆ ಶಾಂತವೀರ ಶಿವಾಚಾರ್ಯರು.

ತನ್ನಲ್ಲಿರುವ ವೈಚಾರಿಕ ಶಕ್ತಿಯನ್ನು ಸಂವರ್ಧಿಸಿಕೊಂಡು ಸ್ವಾನುಭಾವಕ್ಕೆ ಅಳವಡಿಸಿಕೊಂಡು ಸಾಮಾಜಿಕರ ಉದ್ಧಾರಕ್ಕಾಗಿ ಸನ್ನದ್ಧನಾಗುವವನೆ ಶ್ರೀಗುರು, ಆತನದೆ ನಿಜವಾದ ಸಹಜವಾದ ಗೌರ ಪಾತ್ರ. ಅದಕುಂಟು ಸಾಮಾಜಿಕ ಗೌರವ. ಈ ಗೌರವಕ್ಕೆ ಅರ್ಹವಾದ ಗೌರ ಪಾತ್ರ ಶ್ರೀ ಶಾಂತವೀರ ಶಿವಾಚಾರ್ಯರದೆಂದರೆ ಅತಿಶಯೋಕ್ತಿಯೇನಲ್ಲ.

ತಮ್ಮ ವಿಚಾರಾನುಭವಗಳಂತೆ ಆಚರಿಸಲು ಅವರು ಎಂದಿಗೂ ಅಚಲರು. ಕುಂದದ ಸಮರ್ಥರು. ಅವರು ಪ್ರಪಂಚ–ಪರಮಾರ್ಥ ಸಮನ್ವಯದಲ್ಲಿ ಸಿದ್ಧಹಸ್ತರು. ಅವರ ಜೀವನ ಸ್ವಯ–ಪರ ವಿಕಾಸ ಸಾಧನ ಸಾಹಸದ ಆಡುಂಬೊಲ.

ಮಾನವೀಯ ಸಾಧನ ಸಾಹಸದಲ್ಲಿ ಸಂಪೂರ್ಣ ಸಿದ್ಧಿ ಯಾವ ಮಹಾನುಭಾವನ ಸೊತ್ತಲ್ಲ. ಸಾಹಸದಾಚೆಯ ತೀರನ್ನು ತಲುಪುವುದು ಸಾಧ್ಯವಿಲ್ಲ, ವಿಶಿಷ್ಟ

ರೀತಿಯಲ್ಲಿ ಪ್ರಗತಿ ಪಥದಲ್ಲಿರುವವನೆ ಮಾನ್ಯ ಮಹಾನುಭಾವ. ಈ ಸತ್ಯ ಸಂದೇಶ ವನ್ನು ಸಾರುತ್ತಿದೆ ಈ ನವ ದಶಕದ ಶಿಷ್ಟ ಶಿವಾಚಾರ್ಯರ ಚೈತ್ಯ್ರಪ್ತ ಜೀವನ.

ಪಾವನ ಮೂರ್ತಿ ಶಾಂತವೀರ ಶಿವಾಚಾರ್ಯರದು ಸತ್ಯಕ್ಕೂ ಪ್ರಾಮಾಣಿಕ ಸಾಧನ. ಒಳಗೊಂದು ಹೊರಗೊಂದು ಅವರಲ್ಲಿಲ್ಲ. ಹೆಮ್ಮೆಯಿಂದ ಹೇಳುವು ದಾದರೆ ವಿಶುದ್ಧ ವಿಶಾಸ ಮಾರ್ಗದಲ್ಲಿ ಅವರು ಬಹಳಷ್ಟು ಮುಂದೆ ಮುಂದೆ ಸಾಗಿದ್ದಾರೆ; ಮಿಗಿಲಾಗಿ ಸಾಧಿಸಿದ್ದಾರೆ. ಸಹಸ್ರ ಸಹಸ್ರ ಜನ ಶಿಷ್ಯರು ಪ್ರಪಂಚ ದಿಂದ ತಮ್ಮನ್ನು ಉದ್ಧರಿಸುವ ಹಿರಿಯ ಹೊಣೆಯನ್ನು ಅವರ ಕೆಚ್ಚಿನ ಹೆಗಲಿಗೆ ಹೊರಿಸಿದ್ದಾರೆ, ಹೊರಿಸುತ್ತಿದ್ದಾರೆ. ಇಂದಿಗೂ ಈ ಹೊಣೆಯನ್ನು ಕಿತ್ತು ಎತ್ತಿ ಹಾಕದೆ ನಿತ್ಯ ನಿತ್ತರಿಸುತ್ತಿದ್ದಾರೆ.

ಶ್ರೀ ಶಾಂತವೀರ ಶಿವಾಚಾರ್ಯ ಮಹಾ ಸ್ವಾಮಿಗಳವರದು ಸತ್ಯ ಸಾಧನ ಜೀವನ; ಸರ್ವ ಸಮನ್ವಯ ಜೀವನ; ಸಾತಿಶಯ ಸತ್ ಸಾಹಸ ಜೀವನ. ಅವರದು ನುಡಿವ ಕ್ರಾಂತಿಯಲ್ಲ, ನಡೆವ ಕ್ರಾಂತಿ; ಜೊತೆಗೆ ಜೊತೆಯವರನ್ನು ನಡೆಯಿಸಿಕೊಂಡು ಹೋಗುವ ಕ್ರಾಂತಿ. ನಡೆಗೆ ಬೇಕಾದಷ್ಟೆ ನುಡಿ. ಅವರು ಸಂಪ್ರದಾಯ ಶರಣರೂ ಅಲ್ಲ; ಸದ್ಯದ ವಾತಾವರಣ ಶರಣರೂ ಅಲ್ಲ. ಉಭಯ ಮಾಧ್ಯಮ ಶರಣರು. ಅರಿವಿನಾಚರಣೆಯ ಸತ್ಯ ಶರಣರು; ಸ್ವಾನುಭಾವಾಮೃತಪಾನಗೈದ ವೀರರು.

ಅವರ ವಾಸ್ತವ ಜೀವನವೆ ಒಂದು ಮಹಾ ಕಾವ್ಯ. ಅದುವೇ ಆ ಕಾವ್ಯವಸ್ತು. ಅವರ ಬೆಳು ಬಾಳಿನ ಬೆಳಗಿನಿಂದ ಅದು ಪ್ರಭಾವಪೂರ್ಣ ಕಾವ್ಯವಾಗಿದೆ. ಅದು ಜೀವಂತ ಕಾವ್ಯ; ಜ್ವಲಂತ ಕಾವ್ಯ. ಅದನ್ನು ಓದಿ ಅರಿಯಲು ಕ್ರಿಯಾಶಕ್ತಿ ಬೇಕು, ಕ್ರಿಯಾಶ್ರದ್ಧೆ ಬೇಕು. ಅವರ ಆ ಸದ್ಗುಣಗಳೇ ಕಾವ್ಯ ಪಂಕ್ತಿಗಳು. ಅವುಗಳಲ್ಲಿ ಆತ್ಮನಿಗೊಂದು ಉತ್ಕ್ರಾಂತಿಯ ಕೂಗು ಕೇಳಿಬರುತ್ತದೆ. ಉದ್ಬೋಧನೆಯ ಅರ್ಥ ಪೂರ್ಣ ಧ್ವನಿ ಕೇಳಿ ಬರುತ್ತದೆ. ಅವರದೇ ಆದ ಅನುಭಾವ ಬೆರೆತ ಭಾವ ಮಿಡಿಯು ತ್ತದೆ. ಆ ಕಾವ್ಯದಲ್ಲಿರುವ ಪ್ರಧಾನ ರಸ ಕರುಣ ರಸ. ಅವರ ಜೀವನ ಕಾವ್ಯ ದಲ್ಲಿ ಮತಿಗೆ ಎಟುಕದ ಗೂಢಾರ್ಥಗಳಿಗಿಂತ ಮನದುಂಬುವ ಸರಳಾರ್ಥಗಳು ಬೆಚ್ಚು. ಅವರ ಶೈಲಿ ಕಾಂತಾಸಮ್ಮಿತ ಸುಕುಮಾರ ಶೈಲಿ. ಶ್ರಾವ್ಯ ವಚೋ ವೈಖರಿ; ಪ್ರತಿ ಯೊಬ್ಬರಿಗೂ ಪರಿಣಾಮಕಾರಿ. ಕಾವ್ಯದಲ್ಲಿ ಕಳೆಗೊಂಡು ಕಾಣಿಸುವ (ಮೂಡಿದ) ವಿಚಾರಗಳಲ್ಲಿ ವಿಶಿಷ್ಟಾನುಭವಗಳಲ್ಲಿ ಅವರದೇ ಆದ ಶ್ರದ್ಧೆಯಿದೆ, ಸತ್ಕ್ರಿಯಾ ಶಕ್ತಿಯಿದೆ. ಅದರಿಂದ ಅವರ ಜೀವನ ಕವನ ಸರ್ವರ ಮನ್ನಣೆಗೆ ಪಾತ್ರ, ಶ್ರವಣಾ ಚರಣಗಳಿಗೆ ಪಾತ್ರ. ಪ್ರತಿ ಪಂಕ್ತಿಯಲ್ಲಿ ಬುದ್ಧಿ ಭಾವಗಳ ಮಿಂಚಿದೆ; ಹಾರ್ದಿಕ ರಸದ ಸೊಂಪಿದೆ. ಅದು ಅವರ ನಡೆಯ ನೆಲೆಗಟ್ಟು; ನುಡಿಯಿಲ್ಲದ ನುಡಿಗಟ್ಟು, ಇದೇ ಅವರ ಕ್ರಿಯಾಕಾವ್ಯದ ಗುಟ್ಟು. ನಮ್ಮದು ನುಡಿಕಾವ್ಯ; ಅವರದು ನಡೆ

ಕಾವ್ಯ. ಅದು ದಿವ್ಯ ; ಸೇವ್ಯ. ಈ ಕೃತಿ ಉಭಯ ಸಮನ್ವಿತ ಕಾವ್ಯ : ಸಮನ್ವಯ
ಕಾವ್ಯ. ಅವರ ನಡೆಯನ್ನು ನುಡಿಯಲ್ಲಿ ತರುವ ಸೇವೆ ಸಂದುದೆ ನಮಗೆ ಭಾವ್ಯ.

ಶ್ರೀ ಶಾಂತವೀರ ಶಿವಾಚಾರ್ಯರ ಹೃದಯ ಪೂರ್ಣ ಸಮಷ್ಟಿ ಸಮವ್ಯಷ್ಟಿಯೆ
ನಮ್ಮ ಬಾಳಿಗೆ ಸಂಪುಷ್ಟಿ ; ನಮ್ಮ ಬಗೆಗೆ ಸಂತುಷ್ಟಿ. ಅವರ ಆ ಕ್ರಿಯಾತ್ಮಕ ದೃಷ್ಟಿ
ನಮ್ಮ ಕ್ರಿಯೆಯಲ್ಲಿ ಬಂದು ನೆಲಸಿದಾಗ ನಮಗೆಲ್ಲ ಕರದಿಷ್ಟ ಸಿದ್ಧಿ; ಕಾಯಾತ್ಮ
ಸಂಶುದ್ಧಿ; ಆ ಆಚಾರ ಸ್ವರ್ಗಕ್ಕೆ ಅವರ ಅಪಾರ ಕರುಣೆ ನಮ್ಮನ್ನು ಕರೆದೊಯ್ಯಲಿ,
ಆ ಸ್ವರ್ಗ ಸುಖವನ್ನು ನಮ್ಮಲ್ಲಿ ಕರಿಗೊಳಿಸಲಿ.

ಓ ಶಾಂತವೀರ ಶಿವಾಚಾರ್ಯವರ್ಯರೆ, ಶಾಂತರಸವಾಗಿ ಹರಿದು ಬಾ ನಮ್ಮ
ಮನಕ್ಕೆ ! ವೀರ ಶಕ್ತಿಯಾಗಿ ಒಡಗೂಡ ಬಾ ನಮ್ಮ ಕಾಯಕ್ಕೆ !! ಉಭಯ
ಸಮನ್ವಯದ ಬೆಳಗಾಗಿ ಬೆಳಗ ಬಾ ನಮ್ಮ ಭಾವಕ್ಕೆ !!!



ಹರಳೇಶ್ವರ ಕ್ಷೇತ್ರದ ದೃಶ್ಯ



ಹಿಂದಿನ ಹರಳೇಶ್ವರ ತೀರ್ಥ



ಹರಳೇಶ್ವರ ಕುಮಾರ ತೀರ್ಥ



ಹರಳೇಶ್ವರ ದೇವಸ್ಥಾನದ ಮಂಟಪ



ಶ್ರೀ ಶಾಂತವೀರ ಸ್ವಾಮಿಗಳು ಅನುಷ್ಠಾನ ಮಾಡಿದ ಸ್ಥಳ

# ಅನುಬಂಧ

## ೧. ಹರಳೇಶ್ವರ ಕ್ಷೇತ್ರ ಪರಿಚಯ

ಹರಳೇಶ್ವರ ಕ್ಷೇತ್ರ ಬಬಲೇಶ್ವರದಿಂದ ಸುಮಾರು ಐದು ಮೈಲು ಅಂತರದಲ್ಲಿದೆ. ಅದೊಂದು ನಿರ್ಜನ ಪ್ರದೇಶ. ಗರುಸು ಮರಡಿ. ಯಾವ ಗಿಡಗಳೂ ಕೂಡ ಅಲ್ಲಿ ಬೆಳೆಯುವದಿಲ್ಲ, ಹಳ್ಳ, ಬಾವಿ ಮೊದಲಾದ ನೀರಿನ ಆಶ್ರಯವಿಲ್ಲ. ಅದರ ಸುತ್ತು ಮುತ್ತು ಶೇಗುಣಶಿ, ಹಲಗಣಿ, ಕಾಖಂಡಿಕಿ, ಸಂಗಾಪುರ ಮತ್ತು ಕೆಂಗೂರಿ ಹಟ್ಟಿ ಮೊದಲಾದ ಹಳ್ಳಿಗಳಿವೆ.

ಹಿಂದಕ್ಕೆ ಕಲ್ಯಾಣ ಕ್ರಾಂತಿಯ ನಂತರ ಚನ್ನಬಸವಣ್ಣನವರು ಉಳವಿ ಕಡೆಗೆ ಹೊರಟಾಗ ಒಂದು ದಿನ ಅಲ್ಲಿ ಉಳಿದು ತಮ್ಮ ಪೂಜಾನುಷ್ಠಾನ ತೀರಿಸಿಕೊಂಡು ಹೋದರೆಂದು ಹೇಳಲಾಗುತ್ತಿದೆ. ಆ ಕಾಲವಲ್ಲಿ ಅವರು ತಮ್ಮ ಪೂಜೆಗೆ ಬೇಕಾದ ನೀರಿನ ಅನುಕೂಲತೆಗೆ ತೆಗೆದ ಒರತೆಯೇ ಈ ಹರಳೇಶ್ವರ ಕ್ಷೇತ್ರದ ಮಹಿಮೆಯೆಂದು ಹೇಳಬಹುದು. ಒಂದು ಕೊಡ ಮುಳುಗುವಂಥ ತಗ್ಗಿನಿಂದ ಬೇಕಾದಷ್ಟು ನೀರು ತೆಗೆದುಕೊಂಡರೂ ನೀರು ಕಡಿಮೆ ಆಗುವುದಿಲ್ಲ; ತೆಗೆದುಕೊಳ್ಳದಿದ್ದರೆ ನೀರು ಹೆಚ್ಚಾಗಿ ಹರಿದು ಹೋಗುವುದಿಲ್ಲ. ಯಥಾಸ್ಥಿತಿಯಲ್ಲಿ ಸದಾ ಇರುತ್ತದೆ. ಯಾವ ಕಾಲದಲ್ಲೂ ಅದು ಬತ್ತುವದೇ ಇಲ್ಲ. ಅದರ ಹೊರತು ಈಗಲೂ ಕೂಡ ಬೇರೆ ನೀರಿನ ಆಶ್ರಯ ಅಲ್ಲಿಲ್ಲ. ಚನ್ನಬಸವಣ್ಣನವರು ಕುಳಿತು ಪೂಜಾನುಷ್ಠಾನ ತೀರಿಸಿಕೊಂಡು ಹೋದ ಸ್ಥಲದಲ್ಲಿ ಒಂದು ಲಿಂಗ ಪ್ರತಿಷ್ಠಾಪನೆ ಮಾಡಿ ಹೋಗಿದ್ದಾರೆ. ಹಿಂದಿನಿಂದ ಅದಕ್ಕೊಂದು ಚಿಕ್ಕ ಗುಡಿ ಮಾತ್ರ ಕಟ್ಟಲಾಗಿದೆ. ಅದರ ಹೊರತು ಬೇರೆ ಕಟ್ಟಡಗಳು ಅಲ್ಲಿರಲಿಲ್ಲ. ಈ ಚಿಕ್ಕ ಗುಡಿಯ ಸುತ್ತು ಮುತ್ತು ಕೆಲ ಬೆಳೆದ ಗಿಡಗಳು ಮಾತ್ರ ಇವೆ ಅಲ್ಲಿಗೆ ಬರತಕ್ಕ ಯಾತ್ರಿಕರಿಗೆ ನೀರು, ನೆರಳಿನ ಹೊರತು ಉಳಿದ ಯಾವ ಅನುಕೂಲತೆಗಳೂ ಇಲ್ಲ.

ಬಬಲೇಶ್ವರ ಗುರುಪಾದಸ್ವಾಮಿಗಳು ತಮ್ಮ ಹತ್ತಿಪ್ಪತ್ತು ಭಕ್ತಾದಿಗಳೊಂದಿಗೆ ಹಿಂದೆ ಒಂದು ಸಾರೆ ಈ ಕ್ಷೇತ್ರಕ್ಕೆ ಆಗಮಿಸಿದ್ದರು. ತಮ್ಮ ಸ್ನಾನ, ಪೂಜೆಗಳು ಪೂರೈಸಿದ ಬಳಿಕ ಸ್ವೀಕರಿಸಲು ಪ್ರಸಾದ ಕಟ್ಟಿಕೊಂಡು ಬಂದಿದ್ದರು. ಗುರುಪಾದಸ್ವಾಮಿಗಳು ಇಲ್ಲಿಗೆ ಆಗಮಿಸುವ ಸುದ್ದಿ ತಿಳಿದು ಅವರ ದರ್ಶನ ಪಡೆಯಲು ಬಹುಜನ ಭಕ್ತರು ಅಲ್ಲಿ ಸೇರಿದರು. ಗುರುಪಾದಸ್ವಾಮಿಗಳು ತಮ್ಮ ಪೂಜಾನುಷ್ಠಾನ ತೀರಿದ ಬಳಿಕ ಎಲ್ಲರಿಗೂ ದರ್ಶನವಿತ್ತು ಪ್ರಸಾದ ಸ್ವೀಕರಿಸಲು ಸೂಚಿಸಿದರು. ಅವರು ಸಂಗಡ ತಂದ ಪ್ರಸಾದದಿಂದಲೇ ಎಲ್ಲರಿಗೂ ತೃಪ್ತಿ ಆಗುವಷ್ಟು ಪ್ರಸಾದ ದೊರೆಯಿತು. ಎಲ್ಲರೂ ಈ ಪ್ರಸಾದ ಮಹಿಮೆಯನ್ನು ಕಂಡು ಬೆರಗಾದರು. ಈ ಪುಣ್ಯ ಕ್ಷೇತ್ರಕ್ಕೆ ಶ್ರಾವಣಮಾಸದಲ್ಲಿ ಭಕ್ತರು ಬಂದು ಹೋಗುವದು ಹೆಚ್ಚು. ವಿವಾಹ ಮೊದಲಾದ ಶುಭಕಾರ್ಯಗಳಿಗಾಗಿ ಇಲ್ಲಿಗೆ ಬರುವದು ವಾಡಿಕೆ ಯಾಗಿದೆ.

ಈ ಕ್ಷೇತ್ರಕ್ಕೆ ೧೯೧೮ರಲ್ಲಿ ಶ್ರೀ ಶಾಂತವೀರ ಮಹಾ ಸ್ವಾಮಿಗಳು ತಮ್ಮ ಬಬಲೇಶ್ವರ ಮಠದಿಂದ ಯಾರಿಗೂ ಹೇಳದೆ ತಮ್ಮ ಪೂಜಾಸಾಮಗ್ರಿಗಳನ್ನು ಮಾತ್ರ ತೆಗೆದುಕೊಂಡು ರಾತ್ರಿ ನಡೆಯುತ್ತ ಒಬ್ಬರೇ ಆಗಮಿಸಿದರು. ಈ ಸುದ್ದಿ ಕೂಡಲೇ ಸುತ್ತಲಿನ ಹಳ್ಳಿಯವರಿಗೆ ತಿಳಿಯಿತು. ಶೇಗುಣಶಿ, ಸಂಗಾಪುರ ಭಕ್ತಾದಿಗಳು ಬಂದು ಅವರಿಗೊಂದು ಪರ್ಣಕುಟೀರ ಕಟ್ಟಿದರು. ಅವರಿಗೆ ಬೇಕಾಗುವ ಇನ್ನಿತರ ಎಲ್ಲ ಅನುಕೂಲತೆಗಳನ್ನು ಶೇಗುಣಶಿಯ ಭೀಮನಗೌಡರು ಮಾಡಿಕೊಟ್ಟರು. ಶಾಂತವೀರ ಸ್ವಾಮಿಗಳು ಅಲ್ಲಿ ಆರು ತಿಂಗಳವರೆಗೆ ಅನುಷ್ಠಾನದಲ್ಲಿದ್ದರು. ಪ್ರತಿದಿನ ಬಂದು ಹೋಗುವ ಜನ ಹೆಚ್ಚಾಯಿತು. ಬಬಲೇಶ್ವರ ಭಕ್ತಾದಿಗಳು ಮಹಾಸ್ವಾಮಿಗಳಿಗೆ ಮತ್ತೆ ಮರಳಿ ಊರಿಗೆ ಬರಲು ಒತ್ತಾಯಪಡಿಸಹತ್ತಿದರು. ಭಕ್ತರ ಬಯಕೆಯಂತೆ ಬಬಲೇಶ್ವರಕ್ಕೆ ಮರಳಲು ಒಪ್ಪಿದರು. ಅನುಷ್ಠಾನ ಸಮಾಪ್ತಿಗೆಂದು ಸಂಗಾಪುರದ ಭಕ್ತರು ದೊಡ್ಡ ಪ್ರಮಾಣದಲ್ಲಿ ಅನ್ನ ಸಂತರ್ಪಣೆ ವ್ಯವಸ್ಥೆ

ಮಾಡಿದರು. ಮಧ್ಯಾಹ್ನ ಪ್ರಸಾದ ಸ್ವೀಕರಿಸಲು ಜಂಗಮರು, ಭಕ್ತರು ಸಾಲಾಗಿ ಕುಳಿತು ಪಂಕ್ತಿ
ಪ್ರಾರಂಭವಾಯಿತು. ಆಗ ನೀರಿನ ಅರಬು (ಕೊರತೆ) ಕಂಡು ಬಂದು ಶ್ರೀ ಮಹಾಸ್ವಾಮಿಗಳಿಗೆ ಅದನ್ನು
ನಿವೇದಿಸಿದರು. ಆಗ ಸ್ವಾಮಿಗಳು—"ಪ್ರಸಾದ ಅನುಕೂಲವಿದ್ದು, ನೀರಿನ ಅನಾನುಕೂಲವಾಗಬೇಕೆ ?
ಶಿವ ಶಿವಾ !" ಎಂದು ನುಡಿಯುತ್ತ ಹರಳೇಶ್ವರ ಗುಂಡ ಇರುವ ಹರಿಯದ ಹಳ್ಳದ ಕಟ್ಟೆಗೆ ಹೊರಟು
ಅದರ ಕೆಳಭಾಗದಲ್ಲಿ ಸ್ವಲ್ಪ ಅಂತರದಲ್ಲಿ ತಮ್ಮ ಅಮೃತ ಹಸ್ತದಿಂದ ಸ್ವಲ್ಪ ನೆಲ ಅಗಿದರು. ನೀರು
ಪುಟಿಯುಹತ್ತಿತ್ತು. "ನೀರಿನ ಸಮಸ್ಯೆ ಶಿವನ ಕೃಪೆಯಿಂದ ದೂರಾಯಿತು" ಎಂದು ಸ್ವಾಮಿಗಳು
ಹೇಳಿದರು. ಮುಂದೆ ಪ್ರಸಾದ ಸ್ವೀಕರಿಸಲು ಪಂಕ್ತಿಗಳು ಪ್ರಾರಂಭವಾದವು. ಅದೇ ಸ್ಥಳದಲ್ಲಿ
ಮುಂದೆ ಅದಕ್ಕೊಂದು ಆವರಣವನ್ನು ಕಟ್ಟಿಸಿ "ಕುಮಾರ ತೀರ್ಥ" ಎಂಬ ನಾಮಕರಣ ಮಾಡಲಾಗಿದೆ.

ಶ್ರೀ ಶಾಂತವೀರ ಮಹಾಸ್ವಾಮಿಗಳು ಪುನಃ ಇಲ್ಲಿಗೆ ವಾಸಿಸಲು ಆಗಮಿಸಿದ್ದು ೧೯೫೫ರಲ್ಲಿ. ಆಗ ಅವರು ಅಲ್ಲಿ ಹನ್ನೊಂದು ವರುಷ ವಾಸವಾಗಿದ್ದರು. ಅವರ ಶಿವಪೂಜೆಗಾಗಿ, ಅಡಿಗೆಗಾಗಿ ಶೇಗುಣಶಿಯ ಶ್ರೀ ರಾಮನಗೌಡರು ಒಂದು ಚಿಕ್ಕ ಕಟ್ಟಡವನ್ನು ಕಟ್ಟಿಸಿಕೊಟ್ಟರು. ಅದಕ್ಕೆ ಹೊಂದಿಯೇ ಅವರ ವಾಸಕ್ಕಾಗಿ ಬಬಲೇಶ್ವರದ ಶ್ರೀಮತಿ ನೀಲಮ್ಮ ತಾಯಿ ಕಡಿಮನೆ ಇವರು ಒಂದು ಕಟ್ಟಡ ಕಟ್ಟಿಸಿದರು. ಅತಾಲಟ್ಟಿ ಸಿದ್ದನಗೌಡರು ಒಂದು ಶಿವಯೋಗ ಮಂಟಪ ಕಟ್ಟಿಸಿದರು. ಶ್ರೀ ಎಂ. ಸಿ. ಅಂಟಿನ ನಿವೃತ್ತ ಚೀಫ್ ಎಂಜಿನಿಯರ ಅವರು ತಮ್ಮ ತಾಯಿಯವರ ಸ್ಮರಣಾರ್ಥ ಅಕ್ಕಮಹಾದೇವಿಯು ಅಕ್ಕನ ಹೆಸರಿನಲ್ಲಿ ಒಂದು ಚಿಕ್ಕ ಮಂದಿರ ಕಟ್ಟಿಸಿದರು. ಕಾಖಂಡಿಕಿಯ ಹರಿಜನ ಭಕ್ತೆಯಾದ ಶ್ರೀಮತಿ ಕೆಂಚಮ್ಮ ಎಂಬುವಳು ಅಲ್ಲಿಯ ಚಿಕ್ಕ ಶಿವಾಲಯಕ್ಕೂ, ಬಸವಣ್ಣನ ಚಿಕ್ಕ ಕಟ್ಟಡಕ್ಕೂ ಮಧ್ಯದಲ್ಲಿಯ ಬೈಲು ಜಾಗೆಯಲ್ಲಿ ಒಂದು ಕಾಂಕ್ರಿಟ ಮಂಟಪ ರಚಿಸಿದರು.

ಕಾಖಂಡಿಕಿಯ ಭಕ್ತಾದಿಗಳೆಲ್ಲ ಒಂದು ಹೊಸ ಉಗ್ರಾಣವನ್ನು ಕಟ್ಟಿಸಿದರು. ಅದು ಅಡಿಗೆಗೂ ಊಟಕ್ಕೂ ಅನುಕೂಲವಾಗಿದೆ. "ಬಸವತೀರ್ಥ" ಎಂಬ ಇನ್ನೊಂದು ಗುಂಡವನ್ನು ಕಾಖಂಡಿಕಿಯ ಶ್ರೀ ಸಿದ್ದನಗೌಡ ಕೊಕಟನೂರ ಎಂಬುವರು ಕಟ್ಟಿಸಿದರು. ಹಿಂದಕ್ಕೆ ಮಹಾಸ್ವಾಮಿಗಳು ಅನುಷ್ಠಾನ ಮಾಡಿದ ಸ್ಥಳದಲ್ಲಿ ಒಂದು ವೇದಿಕೆ ರಚಿಸಿ, ಬಿಲ್ವ ವೃಕ್ಷಗಳನ್ನು ಬೆಳೆಯಿಸಲಾಗಿದೆ. ೧೯೬೧ ರಲ್ಲಿ ಅಷ್ಟ ಗ್ರಹ ಶಾಂತಿ ಕಾಲಕ್ಕೆ ಶಿವಮಂತ್ರ ಪಠಿಸುವ ವೇದಿಕೆ. ಪ್ರಸಾದ ವಿತರಣ ವೇದಿಕೆ ರಚಿತವಾಗಿವೆ.

ಇಲ್ಲಿಗೆ ಹೋಗಿಬರಲು ವಿಜಾಪುರ ಲೋಕೋಪಯೋಗಿ ಖಾತೆಯವರಿಂದ ರಸ್ತೆ ನಿರ್ಮಾಣವಾಗಿದೆ. ಗುಂಡಕ್ಕೆ ಪಂಪ ಸೆಟ್ಟು ಜೋಡಿಸಿ ನೀರಿನ ಹೌದ (ಟ್ಯಾಂಕ) ರಚಿಸಿ ನಳಗಳ ಏರ್ಪಾಡು ; ವಿದ್ಯುಚ್ಛಕ್ತಿ, ಅನುಕೂಲತೆ ಬೆಂಗಳೂರ ಬಸವ ಸಮಿತಿಯವರು ಮಾಡಿರುವರು.

ಹರಳೇಶ್ವರ ಕ್ಷೇತ್ರದ ಆವರಣದಲ್ಲಿ ಮಾವು ಮೊದಲಾದ ಗಿಡಗಳನ್ನು ನೆಟ್ಟು, ಅಲ್ಲಿಯ ವನಶ್ರೀಯನ್ನು ಹೆಚ್ಚಿಸಲಾಗಿದೆ.

ಹರಳೇಶ್ವರ ಕ್ಷೇತ್ರವು ಹಿಂದೆ ಚನ್ನಬಸವಣ್ಣನವರಿಂದ ಅಸ್ತಿತ್ವಕ್ಕೆ ಬಂದರೂ, ಮಹಾತಪಸ್ವಿಗಳಾದ ಬಬಲೇಶ್ವರ ಲಿಂ. ಗುರುಪಾದ ಶಿವಯೋಗಿಗಳ ಮತ್ತು ಶ್ರೀ ಶಾಂತವೀರ ಮಹಾಸ್ವಾಮಿಗಳ ಪಾದಧೂಳಿಯಿಂದ ಪವಿತ್ರವಾಗಿದೆ.

ಶ್ರೀ ಶಾಂತವೀರ ಮಹಾಸ್ವಾಮಿಗಳು ಈ ನಿರ್ಜನ ಶಾಂತಿ ಕ್ಷೇತ್ರವನ್ನು ಸುಮಾರು ಹನ್ನೆರಡು ವರುಷ ತಮ್ಮ ಪೂಜಾನುಷ್ಠಾನಗಳಿಂದ ಪುನೀತವನ್ನಾಗಿ ಮಾಡಿದ್ದಾರೆ.

ಈ ಹರಳೇಶ್ವರ ಕ್ಷೇತ್ರಕ್ಕೆ ಸುತ್ತಲಿನ ಹಳ್ಳಿಗಳ ಭಕ್ತಾದಿಗಳು ಸದಾಕಾಲ, ಬರುವದು ಹೋಗುವುದು ನಡೆಯುತ್ತಿದೆ. ಪ್ರತಿದಿನ ಶೇಗುಣಶಿಯಿಂದ ಒಬ್ಬ ಪೂಜಾರಿಯು ಬಂದು ಈ ಕ್ಷೇತ್ರದ ಲಿಂಗ ಪೂಜೆ ಮಾಡಿ ಹೋಗುತ್ತಾನೆ. ಈಗ ಅದೊಂದು ಪಾವನ ಕ್ಷೇತ್ರ: ಶಾಂತಿಧಾಮವಾಗಿದೆ. ಅಲ್ಲಿಗೆ ಹೋದರೆ ಭಕ್ತಾದಿಗಳ ಮೈ, ಮನ ಹಗುರಾವಾಗುತ್ತವೆ.

## ೨. ಶಾಂತವೀರ ಸುಧೆ

೧. ಶಿವನು. ಶಕ್ತಿಯಿಂದ ವ್ಯಕ್ತವಾಗುವನು: ಆದರೆ ಆತನು. ಇಂದ್ರಿಯಗಳಿಗೆ ಅಗೋಚರ

೨. ಶಿವನು ಕಾಯುವದಕ್ಕಾಗಿ ಇರುವನು; ಕಾಡುವುದಕ್ಕಾಗಿ ಇರುವದಿಲ್ಲ.

೩. ಅರಿವು ಪರಮಾತ್ಮನ ಪ್ರಸಾದವಾಗಿರುವಂತೆ. ಮರೆವು ಕೂಡ ಪರಮಾತ್ಮನ ಪ್ರಸಾದ.

೪. ಭಕ್ತರು ನೀಡುವ ಪ್ರಸಾದಕ್ಕಿಂತಲೂ, ಅವರ ನಿಷ್ಕಲಂಕ ಭಕ್ತಿಯೇ ಹೆಚ್ಚು ರುಚಿಕರ.

೫. ಬೇಡುವದು ಬಂಧನಕಾರಕ; ನೀಡುವದು ಮುಕ್ತಿದಾಯಕ.

೬. ಬ್ರಹ್ಮಜ್ಞಾನಿ ಬಯಸದಿದ್ದರೂ ಆತನ ದೈಹಿಕ ಯೋಗಕ್ಷೇಮವನ್ನು ಯಾರೋ ನೋಡಿ ಕೊಳ್ಳುತ್ತಾರೆ.

೭. ಭಕ್ತ ದೂರಿದ್ದರೆ ಹಾನಿ ಇಲ್ಲ: ಆದರೆ ಭವಿ ಹತ್ತಿರಿದ್ದರೆ ಹಿತಕರ.

೮. ಪತಿತನನ್ನು ಯಾವುದು ಎತ್ತಿ ಹಿಡಿಯುವದೋ, ಅದೇ ನಿಜವಾದ ಧರ್ಮ.

೯. ತನ್ನ ತಾಪ ಸಹಿಸಿಕೊಳ್ಳುವದಕ್ಕಾಗಿ, ಅನ್ಯರ ಯೋಗ ಕ್ಷೇಮ ವಿಚಾರಿಸುವದು ವಿಹಿತ.

೧೦. ವೇದನೆಗಳು ಆಗುವುದು ಶರೀರಕ್ಕೆ; ಅಂತರಾತ್ಮನಿಗೆ ಯಾವ ವೇದನೆಗಳೂ ಇಲ್ಲ.

೧೧. ನನ್ನಲ್ಲಿ ನಿಜವಾಗಿ ಯಾವ ಶಕ್ತಿಯೂ ಇಲ್ಲ; ಎಲ್ಲ ಶಕ್ತಿಯೂ ಗವಿಯಲ್ಲಿ ಗುಪ್ತವಾಗಿರುವ ಗುರುವಿನಲ್ಲಿದೆ.

೧೨. ಗುರು ಮನೆಯ ಯಜಮಾನ. ಆದರೆ ಜಂಗಮ ಮನೆಗೆ ಬಂದ ಅತಿಥಿ.

೧೩. ಶಿವನ ಕಾರ್ಯಕ್ಕೆ ಧನ ತಾನಾಗಿ ಸಾಗಿಬರುತ್ತದೆ: ಬೇಡುವ ಕಾರಣವಿಲ್ಲ.

೧೪. ವಿಜ್ಞಾನಿಗಳು ಪ್ರಜ್ಞಾನವನ್ನು ಅರಿಯದಿರಬಹುದು; ಆದರೆ ಪ್ರಜ್ಞಾನಿಯು ಸರ್ವಜ್ಞನು.

೧೫. ಅಂಧ ಶ್ರದ್ಧೆಯು ಅಪೂರ್ಣ: ಅರಿತ ಶ್ರದ್ಧೆಯು ಪರಿಪೂರ್ಣ; ವಿಶಾಲ.

೧೬. ಮಾನವನು ಮೇಲು - ಕೀಳುಗಳನ್ನು ಆಚರಿಸಕೂಡದು; ಸರ್ವರಲ್ಲೂ ಸಮಾನತೆಯನ್ನು ಕಾಣುವದೇ ಮಾನವತೆಯ ಮೇಲ್ಮೆ.

೧೭. ಪ್ರಕೃತಿ ಶಕ್ತಿ ಇರುವುದು ಮಾನವನನ್ನು ಮೆಟ್ಟುವದಕ್ಕಾಗಿ ಅಲ್ಲ: ಅವನ ವಿಕಾಸಕ್ಕಾಗಿ ಅವಿರತವಾಗಿ ಪ್ರೇರೇಪಿಸುವುದಕ್ಕೆ.

೧೮. ನಾವು ವಿಷಯಗಳ ದಾಸರಾಗುವದಕ್ಕಿಂತ: ಅವುಗಳ ಪ್ರಭುವಾಗುವದು ಅರ್ಥಪೂರ್ಣ ವಾದುದು.

೧೯. ಜನಸಂಖ್ಯೆ ಬೆಳೆಯುವದು ಹಿತಕರವೆಂದು ಸಾಗಿದರೆ; ಪ್ರಕೃತಿಯು ತನ್ನ ಸಮತೋಲನ ಕಾಯ್ದುಕೊಳ್ಳಲು ಬೇರೆ ದಾರಿ ಅನುಸರಿಸುವದು.

೨೦. ಮಾನವನ ವಿಕಾಸಕ್ಕಾಗಿ ಶಾಂತಿ, ಬೇಕೇಬೇಕು: ಅಸುರಿಶಕ್ತಿಯ ಪ್ರಕೋಪವಾದಾಗ ದೈವೀ ಶಕ್ತಿಯ ಉದಯವಾಗುತ್ತದೆ.

೨೧. ದೇವರು ಆಕಾಶದಲ್ಲಿಲ್ಲ: ಆತನು ಸರ್ವರ ಹೃದಯದಲ್ಲಿ ವ್ಯಾಪಕವಾಗಿದ್ದಾನೆ. ಅವನಿರದ ಠಾವು ಇಲ್ಲ.

೨೨. ವಿಶ್ವದ ಯಾವ ವಸ್ತುವೂ ನಾಶವಾಗುವುದಿಲ್ಲ; ಆದರೆ ಅವು ರೂಪಾಂತರವಾಗುತ್ತಿರುತ್ತವೆ.

೨೩. ಉಪದೇಶವು ವ್ಯಾಪಕವಾಗಿ ಒಂದೇ ರೀತಿ ಇರುವದಿಲ್ಲ; ಅವರವರ ಅಂತಸ್ಥಕ್ಕೆ ಅನುಗುಣವಾಗಿ ವಿವಿಧ ರೀತಿಯಲ್ಲಿರುತ್ತದೆ.

೨೪. ಸನ್ಯಾಸತ್ವ ಆಧ್ಯಾತ್ಮದ ಗುರಿ ಅಲ್ಲ; ಆದರೆ ಅಧ್ಯಾತ್ಮ ವಿಕಾಸಕ್ಕೆ ಅದೊಂದು ಮೆಟ್ಟಲು. ಪ್ರಾಪಂಚಿಕನಾಗಿಯೂ ಪಾರಮಾರ್ಥ ಪಡೆಯಲು ಸಾಧ್ಯವಿದೆ.

೨೫. ಪವಿತ್ರತೆಯು, ಒಬ್ಬರಿಂದೊಬ್ಬರು ದೂರವಾಗಿರುವದರಲ್ಲಿಲ್ಲ; ಪರಸ್ಪರ ಹತ್ತಿರ ಬರುವದರಲ್ಲಿ ಹುದುಗಿದೆ.

೨೬. ಸಂಪತ್ತೆಂಬುದು ಬೆಳ್ಳಿ, ಬಂಗಾರ ಮಾತ್ರವಲ್ಲ; ಮಣ್ಣಿನಲ್ಲಿಯೇ ಸರ್ವ ಸಂಪತ್ತು ಅಡಗಿದೆ.

೨೭. ಮಠಗಳು ಆಧ್ಯಾತ್ಮದ ಕೇಂದ್ರಗಳೆಂದು ಕರೆಯಲ್ಪಟ್ಟರೂ, ಪ್ರತಿ ಮನೆಯೂ ಆಧ್ಯಾತ್ಮ ವಿಕಾಸದ ಕೇಂದ್ರಗಳಾಗಬೇಕು.

೨೮. ಪ್ರಾಪಂಚಿಕನು ಕಾಲಾಂತರದಲ್ಲಿ ಸನ್ಯಾಸಿಯಾಗಬಹುದು; ಆದರೆ ಸನ್ಯಾಸಿಯಾದವನು ಮರಳಿ ಪ್ರಾಪಂಚಿಕನಾಗುವದು ಮನೋದೌರ್ಬಲ್ಯ.

೨೯. ಸಂಸ್ಕಾರಗಳು ಪ್ರಗತಿಗೆ ಸಾಧನ; ಜಗತ್ತಿನಲ್ಲಿ ಎಲ್ಲವೂ ಒಂದಿಲ್ಲ ಒಂದು ಸಂಸ್ಕಾರಕ್ಕೆ ಒಳಗಾಗಿವೆ.

೩೦. ವಿಕಾಸ ಹೊಂದುತ್ತ ಮಾನವನು ಇಂದಿನ ಮಟ್ಟಕ್ಕೆ ಮುಟ್ಟಿದರೂ; ಇದೇ ಚರಮ ಸೀಮೆಯೆಂದು ತಿಳಿಯಬಾರದು.

೩೧. ಜಗತ್ತಿನಲ್ಲಿಯ ವಸ್ತುಗಳೆಲ್ಲವನ್ನೂ ನಾವು ಬಳಸಲು ಬಾರದು; ಆದರೆ ನಮಗೆ ಬೇಕಾದುದನ್ನು ಮಾತ್ರ ಬಳಸಲು ನಾವು ಬಾಧ್ಯರು.

೩೨. ಸ್ತುತಿಗಳಿಗೆ ನಾವು ಬಾಯಿ ಬಿಡುತ್ತೇವೆ; ಆದರೆ ನಿಜವಾಗಿ ನಿಂದೆಯೆ ನಮ್ಮನ್ನು ಮೇಲೆತ್ತಲು ಮಾರ್ಗ ಮಾಡಿಕೊಡುತ್ತದೆಂಬುದನ್ನು ಮರೆಯಬಾರದು.

೩೩. ಮಾನವನು ದೇವನ ಬಗ್ಗೆ ಹೆಚ್ಚು ಆಕರ್ಷಕನಾಗಿ ಕಂಡರೂ, ದೇವನೇ ಇಂದು ಮಾನವನ ಮಟ್ಟದವರೆಗೆ ವಿಕಾಸವಾಗಿ ವ್ಯಕ್ತವಾಗಿದ್ದಾನೆ.

೩೪. ಮೇಲೆ ಕೂಡುವದರಲ್ಲಿ ಮಾನವನ ಹಿರಿಮೆಯಿಲ್ಲ; ಅವನ ಹಿರಿಮೆ ಇರುವುದು ಅಂತರಂಗದಲ್ಲಿ.

೩೫. ಹಿಂದಿನವರು ಬೌದ್ಧಿಕ ವಿಕಾಸ ಹೊಂದಿದ್ದರೆಂದು ನಮ್ಮ ತಿಳಿವಳಿಕೆ. ಆದರೆ ಇಂದಿನ ಜಗತ್ತು ಹಿಂದಿಗಿಂತ ಹೆಚ್ಚು ವಿಕಾಸದತ್ತ ಸಾಗಿದೆಯೆಂಬುದರಲ್ಲಿ ಸಂದೇಹವಿಲ್ಲ.

೩೬. ಶರಣರ ವಚನಗಳು ಜನರಿಗಾಗಿ ಬರೆದವುಗಳಲ್ಲ; ಅವು ಶರಣರ ಸ್ವಂತ ಅನುಭವದ ಅಭಿವ್ಯಕ್ತಿಗಳಾಗಿವೆ. ಆದರೂ ಅವು ಜಗತ್ತಿಗೆ ಬೆಳಕು ನೀಡಿವೆ.

೩೭. ವೇದಗಳಲ್ಲಿ ಬಂದ ವಿಚಾರಗಳು ಶರಣರ ವಚನಗಳಲ್ಲಿ ಬಂದಿವೆ; ಆದರೆ ವಚನಗಳಲ್ಲಿ ಬಂದ ಕೆಲ ಮಾತುಗಳು ವೇದಗಳಲ್ಲಿ ವೇದ್ಯವಾಗವು.

೩೮. ಹಿಂದೆ ಅನೇಕ ಶ್ರೇಷ್ಠ ಋಷಿಗಳು ಆಗಿಹೋಗಿದ್ದಾರೆ. ಆದರೆ ಮಹಾತ್ಮಾಜಿಯವರು ಮಾತ್ರ, ಆ ಎಲ್ಲ ಋಷಿಗಳಿಗಿಂತ ಮುಂದಾದವರು. ಆಧುನಿಕ ಕಾಲದ ಅತ್ಯಂತ ಶ್ರೇಷ್ಠ ಋಷಿ.

೩೯. ವೇದವು ಯಾವುದನ್ನು ಅಂತಿಮ ಗುರಿಯೆಂದು ಒಪ್ಪಿಕೊಂಡಿರುವದೋ, ಯಾವುದಕ್ಕಾಗಿ ತಪಸ್ಸು ಅಗತ್ಯವೆಂದು ಹೇಳಲಾಗುತ್ತದೆಯೋ, ಯಾವುದನ್ನು ಪಡೆದುಕೊಳ್ಳಲು ಬ್ರಹ್ಮಚರ್ಯ ವ್ರತವನ್ನು ಆಚರಿಸಲಾಗುವದೋ ಅದೇ ಶಿವತತ್ವ; ಬ್ರಹ್ಮತತ್ವ.

೪೦. ಈ ಜಗತ್ತಿನ ಹಾದಿಯಲ್ಲಿ ಸಾಗಬೇಕಾದರೆ ಅಸುರಿ ಶಕ್ತಿಗಳನ್ನು ಎದುರಿಸುವ ಪ್ರಸಂಗ ಯಾರನ್ನೂ ಬಿಡಲಾರದು.

೪೧. ಅಸ್ವೀಕೃತ ಅಂಚೆ ಪತ್ರ ಹಿಂದಿರುಗಿ ಹೋಗುತ್ತದೆ: ನಿರಾಕರಿಸಿದ ಅಸುರಿ ಶಕ್ತಿಗಳು ಹೇಳಹೆಸರಿಲ್ಲದಂತೆ ಮರಳಿ ಹೋಗುತ್ತವೆ.

೪೨. ನಮ್ಮ ಅಸ್ತಿತ್ವಕ್ಕೆ ಯಾವ ವಿರೋಧ ಶಕ್ತಿಗಳು ಅಡ್ಡಿಯಾದರೂ ಮನಸ್ಸನ್ನು ಕದಲಿಸದೆ, ಸಾವಧಾನವಾಗಿರಬೇಕು.

೪೩. ಶ್ರೀಮಂತಿಕೆ, ಬಡತನ ಅವರವರ ಕರ್ತವ್ಯಾಧೀನ; ಹಾಗೂ ದೈವಾಧೀನ.

೪೪. ಕರ್ತವ್ಯ, ಸದ್ಗುಣಗಳಲ್ಲಿ ಗೌರವವಿದೆ.

೪೫. ಸರಳ ಜೀವನವೇ ಸುಖಕಾರಕ; ಆದರೆ ಇಲ್ಲದ್ದನ್ನು ಬಯಸಿದರೆ ನಾವು ಬಂಧನಕ್ಕೊಳಗಾಗುವೆವು.

೪೬. ವೇದ ಕಾಲದಲ್ಲಿ ಸ್ತ್ರೀ - ಪುರುಷರಲ್ಲಿ ಸಮಾನತೆ ಇದ್ದಿತು; ಅಸಮಾನತೆಗೆ ಅವಕಾಶವಾದುದು ಅನಂತರ.

೪೭. ಹಿಂದಿನ ಋಷಿಗಳೆಲ್ಲ ಬಹುಭಾಗ ಸಪತ್ನಿಕರಾಗಿದ್ದರು; ಆದರೆ ಸನ್ಯಾಸತ್ವಕ್ಕೆ ಮಹತ್ವ ಕೊಟ್ಟಿರುವದು ಮಧ್ಯಕಾಲದಲ್ಲಿ.

೪೮. ಗುರು - ಶಿಷ್ಯರಲ್ಲಿ ಬೋಧಕ, ಬೋಧ್ಯ ಸಂಬಂಧವಿದೆ.

೪೯. ಆಚಾರ, ವಿಚಾರ ಒಂದಕ್ಕೊಂದು ಪೋಷಕ; ಆಚಾರ ತನು ಮನಗಳನ್ನು ಶುದ್ಧಮಾಡುತ್ತದೆ. ವಿಚಾರ ನಮನ್ನು ನಿರ್ದಿಷ್ಟ ಗುರಿಗೆ ಒಯ್ಯುತ್ತದೆ.

೫೦. ಮತಗಳು ವಿವಿಧವಾಗಿದ್ದರೂ, ದೇವರ ಅಸ್ತಿತ್ವವನ್ನು ಮನ್ನಿಸುವದರಲ್ಲಿ ಏಕಾಭಿಪ್ರಾಯವನ್ನು ವ್ಯಕ್ತಪಡಿಸಿವೆ. ದಾರಿ ಭಿನ್ನವಾದರೂ ಗುರಿ ಒಂದೇ ಆಗಿದೆ.

೫೧. ದೇವರ ಸಾಕಾರತೆಯನ್ನು ಮಾನವರೂಪಕ್ಕಿಂತ, ಲಿಂಗರೂಪವು ಹೆಚ್ಚು ವ್ಯಾಪಕವಾಗಿ ವ್ಯಕ್ತಪಡಿಸುತ್ತಿದೆ. ಮಾನವರೂಪದ ದೇವರೆನ್ನುವವರೆಲ್ಲ ಲಿಂಗಪೂಜೆ ಮಾಡಿದ್ದೇ ಆಧಾರ.

೫೨. ವೇದಗಳ ಆದಿ ಭಾಗ ಕರ್ಮ ಪ್ರಾಧಾನ್ಯವಾಗಿದ್ದರೂ, ಅವುಗಳ ಉತ್ತರಭಾಗ ಮಾತ್ರ ಜ್ಞಾನ ಪ್ರಧಾನವಾಗಿದೆ.

೫೩. ಹಿಂದಕ್ಕೆ ಬ್ರಾಹ್ಮಣ, ಜೈನ, ಶೈವ, ವೀರಶೈವರಲ್ಲಿ ಅನ್ನೋದಕ ವ್ಯವಹಾರ, ಶರೀರ ಸಂಬಂಧಗಳು ನಡೆಯುತ್ತಿದ್ದವು. ಅವು ನಿಂತುದು ಇತ್ತೀಚೆಗೆ ಮಾತ್ರ.

೫೪. ಕದ್ದಿ ಬಂದಾಗ, ಗಾಡಿ ಹೊಡೆಯುವವನು ಬಾಯಿ ಮಾಡಿ ಎತ್ತುಗಳನ್ನು ಕದ್ದಿ ಏರಿಸುವಂತೆ ಮನೆಯ ಹಿರಿಯನು ಏನಾದರೂ ಸಮಸ್ಯೆ ಬಂದಾಗ ಸ್ವಲ್ಪ ಗರ್ಜಿಸಿ ಮುಂದೆ ಸಾಗಬೇಕು.

೫೫. ಸ್ವಾಮಿತ್ವವು ಕೆಲವೊಂದು ವರ್ಗದವರಿಗೆ ಸೀಮಿತವಾಗಿರುವುದು ಸರಿಯಲ್ಲ.

೫೬. ಮಠಗಳು ಸ್ವಾಮಿಗಳ ಸಂಬಂಧಿಕರ ಸಂರಕ್ಷಣೆಯ ಸಾಧನಗಳಾಗಬಾರದು.

೫೭. ಬೇಡಿ ತರುವುದು ಕೂಡಿ ಉಣ್ಣುವದಕ್ಕಾಗಿ, ಮಠಗಳಲ್ಲಿ ಸಾಧ್ಯವಾದ ಮಟ್ಟಿಗೆ ಉಚಿತ ಪ್ರಸಾದ ವಿತರಣೆಯಾಗಬೇಕು.

೫೮. ಮಠಗಳಿಂದ ಅನ್ನದಾನ, ವಿದ್ಯಾದಾನಗಳು ನಡೆಯಬೇಕು.

೫೯. ಪುತ್ರವರ್ಗದ ಮಠಗಳಿಗಿಂತ, ಶಿಷ್ಯ ವರ್ಗದ ಮಠಗಳು ವಿಹಿತ.

೬೦. ಈಗ ಆಸ್ತಿ ಇದ್ದ ಮಠಗಳು ಮಾತ್ರ ಉಳಿದಿವೆ; ಅವು ಗಳಿಗೆಸ್ವಾಮಿಗಳಾಗಲು ಹಲವರು ಮುಂದೆ ಬರುವರು.

೬೧. ಆಸ್ತಿಗಾಗಿ ಸ್ವಾಮಿತ್ವ ಸ್ವೀಕರಿಸುವದಕ್ಕಿಂತ ; ಸ್ವಯಂಪ್ರೇರಣೆಯಿಂದ ಸ್ವಾಮಿಗಳಾಗುವದು ಶ್ರೇಷ್ಠ, ಸ್ವಾಮಿಗಳಾಗಲು ಆತ್ಮ ಬಲ ಬೇಕು.

೬೨. ಸಮಾಜ ಕಲ್ಯಾಣ ದೃಷ್ಟಿಯಿಂದ ಊರಿಗೊಂದು ಮಠ ಇರುವದು ಲೇಸು. ಆದರೆ ಕಾಲ ಪರಿಸ್ಥಿತಿಗೆ ಅವು ಹೊಂದಿಕೊಂಡು ಸಾಗಬೇಕು.

೬೩. ಮಠಗಳು ಕೇವಲ ಉತ್ಸವದ ಕೇಂದ್ರಗಳಾಗದೆ, ಪ್ರಸಾದ, ಪುಸ್ತಕಗಳ ಕೇಂದ್ರವಾಗಬೇಕು.

೬೪. ಮಠದ ಸ್ವಾಮಿಗಳು ಹಿಂದಿನ ಪಂಪರೆಗೆ ಅಂಟಿಕೊಳ್ಳದೆ ಇಂದಿನ ಕಾಲಮಾನಕ್ಕೆ ಅನುಗುಣವಾಗಿ ಸಾಗಬೇಕು.

೬೫. ವ್ಯಕ್ತಿ ಪೂಜೆ ಕಡಿಮೆ ಆಗಿ, ಗುಣ ಪೂಜೆ ಹೆಚ್ಚಬೇಕು. ಆಗ ಮಠಗಳ ಏಳ್ಗೆ ಆಗಬಲ್ಲದು.

೬೬. ದೇಹವು ದೇವರು ಕೊಟ್ಟ ವರಪ್ರಸಾದ; ಅದನ್ನು ಹೇಗೋ ಬಳಸಿ ಹಾಳುಮಾಡುವುದು ಮಹಾಪಾಪ.

೬೭. ಶಾಪವೆಂಬುದು ದುರಿಚ್ಛೆ; ಒಬ್ಬನನ್ನು ತಿದ್ದಲು ಹೋಗುವ ಸದಿಚ್ಛೆಯೇ ನಿಶ್ಯಾಪ.

೬೮. ಜ್ಞಾನವು, ಜ್ಞೇಯಾಧೀನವು.

೬೯. ಜಗತ್ತು ಪ್ರವೃತ್ತಿ ಹಾಗೂ ನಿವೃತ್ತಿ ಈ ಎರಡೂ ಮಾರ್ಗಗಳಿಂದ ಮುಂದುವರಿಯುತ್ತಿದೆ.

೭೦. ಭೂತ ಜ್ಞಾನವು ಕಾರಣ, ಭವಿಷ್ಯ ಜ್ಞಾನವು ಕಾರ್ಯ.

೭೧. ಮಿತ ಸಾತ್ವಿಕ ಆಹಾರ, ಮಿತ ಗಾಢ ನಿದ್ರೆ, ದೀರ್ಘಾಯುಷ್ಯದ ಗುಟ್ಟು.

೭೨. ಸದೃಢವಿದ್ದಾಗ ಬಾಹ್ಯ ಪೂಜೆ; ಸ್ವಾಧೀನತೆ ತಪ್ಪಿದಾಗ ಅಂತರಂಗದ ಪೂಜೆ ಲೇಸು ಮತ್ತು ಅದು ಶ್ರೇಷ್ಠವೂ ಹೌದು.

೭೩. ಆಶಾ ವೃತ್ತಿ ತಿರೋಧಾನಗೊಳಿಸಿಕೊಳ್ಳುವದೆ ಶಾಂತಿ. ಆಶೆ, ಆಮಿಷಗಳೇ ಶಾಂತಿಗೆ ಭಂಗ. ಆಶೆಯಲ್ಲಿ ಅಶಾಂತಿ, ನಿರಾಶೆಯಲ್ಲಿ ಶಾಂತಿ.

೭೪. ಶಾಂತಿ ಕಳೆದುಕೊಂಡವನೇ ಅದನ್ನು ಪಡೆಯಲು ಹೆಣಗಬೇಕು. ಇನ್ನೊಬ್ಬ ಅಂದರೆ ಗುರುವಿನಿಂದ ಜ್ಞಾನ ದೊರೆಯಬಲ್ಲದು, ಆ ಜ್ಞಾನದಿಂದ ಶಾಂತಿ ಸಿಗಬಲ್ಲದು.

೭೫. ಸಾಧನೆಯ ಪೂರ್ವಾವಸ್ಥೆಯಲ್ಲಿ ಕರ್ಮ ಪ್ರಧಾನವಾಗಿದ್ದರೆ, ಉತ್ತರಾವಸ್ಥೆಯಲ್ಲಿ ಭಕ್ತಿ ಪ್ರಧಾನವಾಗುವದು.

೭೬. ಜೀವನ ಪಥದಲ್ಲಿ ಬಂದ ಬಿಕ್ಕಟ್ಟಿನ ಪ್ರಸಂಗಗಳನ್ನು ತಾಳ್ಮೆಯಿಂದ ಎದುರಿಸಿ ಧೀರತನದಿಂದ ಮುಂದೆ ಸಾಗಬೇಕು.

೭೭. ತಾನು ದುಡಿದುದನ್ನೇ ಮಿತವಾಗಿ ಉಪಯೋಗಿಸಿ, ಉಳಿದುದನ್ನು ದಾನ ಮಾಡಬೇಕು.

೭೮. ಭಕ್ತಿ ಮಾರ್ಗ ಬೇರೆ, ವ್ಯವಹಾರದ ಹಾದಿ ಬೇರೆ; ಒಂದರೊಳಗೊಂದು ಸೇರಿಸಬಾರದು.

೭೯. ದೇವ ಶಕ್ತಿ, ನಿಸರ್ಗ ಶಕ್ತಿಗಳಿಂದ ಜ್ಞಾನ, ಕರ್ಮ ಪಡೆದವನಿಗೆ, ಪ್ರಪಂಚದಲ್ಲಿ ಸರ್ವವೂ ಸಾಧ್ಯ.

೮೦. ಜೀವನ ಪ್ರಭೇದ, ಸಮದರ್ಶಿತ್ವ ಯಾರಲ್ಲಿಲ್ಲ, ಅವರ ಜ್ಞಾನ ದೈಹಿಕವಾದುದು.

೮೧. ಶರೀರ ನೌಕೆ ಪ್ರಪಂಚ ಸಾಗರದಲ್ಲಿ ತೇಲುತ್ತದೆ; ಪ್ರಪಂಚ ವ್ಯಾಮೋಹ ಎಂಬ ನೀರು ಒಳಗೆ ಸೇರಿದರೆ ಆ ನೌಕೆ ಮುಳುಗುವದು.

೮೨. ಯೋಗಿಗಳು ಯಂತ್ರ ಶಕ್ತಿಯನ್ನು ತಮ್ಮ ಇಂದ್ರಿಯಗಳಿಗೆ ತಂದುಕೊಳ್ಳಬಲ್ಲರು.

೮೩. ಯಾವುದು, ಯಾವುದರಿಂದಲೂ ಬಾಧಿಸಿಕೊಳ್ಳದೆ, ಪ್ರಪಂಚವು ಯಾವುದರಲ್ಲಿ ಲೀನವಾಗುವದೋ ಅದೇ ಸತ್ಯ.

೮೪. ಯಾವುದು ಎಲ್ಲದಕ್ಕೂ ಆಶ್ರಯ ಕೊಡುವದೋ ಅದೇ ದೇವರು.

೮೫. ಅಸುರೀ ಶಕ್ತಿ ಪ್ರಕೋಪಗೊಂಡಾಗ ಅದನ್ನು ಬಗ್ಗುಬಡಿಯಲು ಯುದ್ಧ ಅನಿವಾರ್ಯ.

೮೬. ಇಂದಿನ ವೈಜ್ಞಾನಿಕ ಮುನ್ನಡೆ, ಧಾರ್ಮಿಕ ಮತ್ತು ಅಧ್ಯಾತ್ಮಿಕ ಪ್ರಜ್ಞೆಯನ್ನು ಮೊಟಕುಗೊಳಿಸಿದೆ.

೮೭. ಬಾಹ್ಯ ಪಾವಿತ್ರ್ಯದಷ್ಟೇ, ಆಂತರಿಕ ಪಾವಿತ್ರ್ಯವು ಅವಶ್ಯ.

೮೮. ಯಾವ ಕಾಯಕದಲ್ಲಿಯೂ ಮೇಲು, ಕೀಳು ಎಂಬುದಿಲ್ಲ; ಎಲ್ಲವೂ ಸರಿಸಮಾನ.

೮೯. ಅಧ್ಯಾತ್ಮಿಕ ಶಕ್ತಿ ಅಳೆಯಲು ಪವಾಡಗಳು ಮುಖ್ಯವಲ್ಲ; ಅವುಗಳಿಗೆ ಮಹತ್ವ ಕೊಡದಿರುವದು ಮೇಲು.

೯೦. ಮಾನವನ ದೇಹ ಬದಲಾದರೂ, ಅವನ ಅಂತರಂಗದಲ್ಲಿಯ ಪಶುಭಾವನೆಗಳು ಇನ್ನೂ ಬದಲಾಗದೆ ಹಾಗೇ ಉಳಿದಿವೆ.

೯೧. ದುಃಖ ಅದೃಶ್ಯ; ಕಣ್ಣೀರು ದೃಶ್ಯ.

೯೨. ಧರ್ಮದ ಹಾದಿ ಒಂದೆ ವಿಧವಾಗಿಲ್ಲ; ಅವರವರ ದೃಷ್ಟಿಗನುಗುಣವಾಗಿ ಭಿನ್ನ-ಭಿನ್ನವಾಗಿವೆ.

೯೩. ದೇಹ, ಮನಸ್ಸು, ಬುದ್ಧಿ ಸಾಧಿಸಲಾರದನ್ನು, ಆತ್ಮೀಯತೆಯು ಸಾಧಿಸಬಲ್ಲದು.

೯೪. ಎರಡು ಹೃದಯಗಳ ಭಾವೈಕ್ಯವೇ ಆತ್ಮೀಯತೆ. ದೇಹ ಭಿನ್ನವಾದರೂ ಎರಡು ಹೃದಯಗಳು ಒಂದಾಗಬಲ್ಲವು.

೯೫. ಬಳ್ಳಿ ಭಕ್ತ; ಹೂವು ಗುರು. ಬಳ್ಳಿ ಬಿಟ್ಟು ಹೂವಿಲ್ಲ; ಆದರೆ ಹೂವನ್ನು ಬಿಟ್ಟು ಬಳ್ಳಿ ಇರಲಾರದು.

೯೬. ದೇವರ ಮೂರ್ತಿ ಬಂಗಾರದ್ದಿರಬಹುದು, ಆದರೆ ಗಂಟೆ ಮಾತ್ರ ಕಂಚಿನದೇ ಬೇಕಾಗುತ್ತದೆ ದೇವಸ್ಥಾನಕ್ಕೆ ಮೂರ್ತಿ, ಗಂಟೆ ಎರಡೂ ಬೇಕು.

೯೭. ಪಂಡಿತನು ಜಗತ್ತನ್ನು ಅರಿಯುವನು; ಆದರೆ ಪ್ರಾಜ್ಞನು ತನ್ನನ್ನೇ ತಾನು ಅರಿಯುವನು.

೯೮. ಪರಿಘಕ್ಕೆ ಬಿಂದುವೇ ಕಾರಣ; ಪರಿಘ, ಬಿಂದುಗಳೆರಡೂ ಒಂದೆ.

೯೯. ಜನಸಂಖ್ಯೆ ಬೆಳೆಯ ಹತ್ತಿದೆಂದು ಎಲ್ಲರೂ ಹೇಳುತ್ತಾರೆ; ಆದರೆ ಅದನ್ನು ನಿಯಂತ್ರಿಸಲು ಪ್ರಕೃತಿ ಎಂದೂ ಮರೆಯಲಾರದು.

೧೦೦. ದೇಹಕ್ಕೆ ಅಂಗಿಗಳಿವೆ; ಅಂಗಿಗಳಿಗಾಗಿ ದೇಹವಿಲ್ಲ. ನಮಗಾಗಿ ಜಗತ್ತು ಇದೆ; ಜಗತ್ತಿಗಾಗಿ ನಾವಿಲ್ಲ.

೧೦೧. ವಿಜ್ಞಾನಿಗಳು ಭೌತಿಕ ಯಂತ್ರನೋಡಿ ಬಾಯಿ ಬಿಡುತ್ತಾರೆ; ಆದರೆ ಮಾನವ ಯಂತ್ರವನ್ನು ಅವರು ಅರ್ಥಮಾಡಿಕೊಂಡೇ ಇಲ್ಲ.

೧೦೨. ವಿಜ್ಞಾನಿ, ಪ್ರಾಜ್ಞಾನಿಯನ್ನು ಅಲ್ಲಗಳೆಯುತ್ತಾನೆ: ಆದರೆ ಪ್ರಾಜ್ಞಾನಿಯು ವಿಜ್ಞಾನಿಯನ್ನು ಅಲ್ಲಗಳೆಯುವುದಿಲ್ಲ. ಪ್ರಜ್ಞಾನದಲ್ಲಿಯೇ ವಿಜ್ಞಾನ ಹುದುಗಿದೆ.

೧೦೩. ದೂರ ಇರುವುದರ ಬಗೆಗೆ ವಿಚಾರಿಸುತ್ತ ಕೂಡುವುದಕ್ಕಿಂತ, ಹತ್ತಿರ ಇದ್ದುದ ರೊಂದಿಗೆ ಸಮರಸವಾಗುವದು ಲೇಸು.

೧೦೪. ಪ್ರಪಂಚದಲ್ಲಿ ಪೇಚಾಡುವವರಿಗೆ ಮಂತ್ರೋಪದೇಶಕ್ಕಿಂತ; ಮಾರ್ಗದರ್ಶನ ಮಾಡು ವದೇ ಮೇಲು.

೧೦೫. ಭೂಮಂಡಲದ ಸಮಸ್ಯೆಗಿಂತ ನಿಂತ ನೆಲದ ಪರಿಸರದ ಸಮಸ್ಯೆ ಮೊದಲು ಗಮನಿಸ ಬೇಕು.

೧೦೬. ಗುರುವಿಗೆ ತನು, ಲಿಂಗಕ್ಕೆ ಮನ, ಜಂಗಮಕ್ಕೆ ಧನ ನೀಡಬೇಕೆಂದು, ಮಠಕ್ಕೆ ಮಜ್ಜಿಗೆ ಗಾಗಿ ಬಂದವರಿಗೆ ಹೇಳುವುದು ಯುಕ್ತವಲ್ಲ.

೧೦೭. ಯಾರೇ ಭಕ್ತರು ಬರಲಿ, ಗುರುಗಳು ತಮ್ಮ ವಿಚಾರ ಅವರ ತಲೆಗೆ ತುಂಬದೆ, ಭಕ್ತರ ವಿಚಾರಕ್ಕೆ ಓಗೊಟ್ಟು ಅವರಿಗೆ ದಾರಿ ತೋರಿಸಬೇಕು.

೧೦೮. ಗುರು ಭಕ್ತಾದಿಗಳಿಗೆ ಭಾರವಾಗುವುದಕ್ಕಿಂತ, ಹಗುರಾಗುವುದು ಹಿತಕರ.

೧೦೯. ಗುರು ಮೇಲು. ಭಕ್ತರು ಕೀಳು ಎಂಬ ಭಾವನೆ ಸರಿಯಲ್ಲ. ಗುರು - ಶಿಷ್ಯರು ಸರಿಸಮಾನರು.

೧೧೦. ಗುರುವಾದವನು ಭಕ್ತರ ಹಣ ಯಾಚಿಸುವುದಕ್ಕಿಂತ; ಅವರ ಹೃದಯ ಯಾಚಿಸುವುದು ಲೇಸು.

೧೧೧. ನಿರ್ಜೀವ ಕಲ್ಲು, ಮಣ್ಣು, ಮರ, ನೀರು ಪೂಜಿಸುವದಕ್ಕಿಂತ; ಸಜೀವ ಮಾನವನ ಪ್ರೇಮ ಶ್ರೇಯಸ್ಕರ.

೧೧೨. ಶಿವನ ವಾಸ ಸುಡುಗಾಡ; ಅರಮನೆಯಲ್ಲ.

೧೧೩. ಬೇಡಿಕೆ ಬೆಳೆಯಬಾರದು, ಆದಿಕೆ ಹೆಚ್ಚಬಾರದು. ಸ್ವಾವಲಂಬನದ ನಡೆಗೆ ಮುಕ್ತದ್ವಾರ ಇರಬೇಕು.

೧೧೪. ದೇವರು ದೂರಿಲ್ಲ; ನಮ್ಮ ಹತ್ತಿರವೇ ಇರುವನು. ಒಳಗಣ್ಣು ಇದ್ದವನು ಮಾತ್ರ ನೋಡಬಲ್ಲನು.

೧೧೫. ಜನರಿಗೆ ಇಂದು ಮಂತ್ರೋಪದೇಶ ಬೇಕಿಲ್ಲ; ಅವರವರ ಮಟ್ಟದ ವಚನೋಪದೇಶ ಮಾತ್ರ ಬೇಕಾಗಿದೆ.

೧೧೬. ಗುರು ತ್ಯಾಗಿ, ಭಕ್ತ ಭೋಗಿ ಆದರೆ ನಡೆಯಬಹುದು: ಆದರೆ ಗುರು ಭೋಗಿ, ಭಕ್ತ ತ್ಯಾಗಿಯಾದರೆ ನಡೆಯಲಾರದು.

೧೧೭. ಸಂಸಾರ ಸುಳ್ಳೆಂದೇ, ದೇವರಿಗೆ ನಾವು ದೂರಾಗಿದ್ದೇವೆ. ಸಂಸಾರವೂ ಆತನ ಲೀಲೆ ಎಂದು ಅರಿತವನಿಗೆ ದೇವರು ಹತ್ತಿರದಲ್ಲಿಯೇ ಇರುವನು; ಅಂದರೆ ಅವನೇ ದೇವರು.

೧೧೮. ಪ್ರಪಂಚ, ಪಾರಮಾರ್ಥಗಳು ಒಂದೇ ನಾಣ್ಯದ ಎರಡು ಮುಖಗಳು ಮಾತ್ರ: ಅವು ಬೇರೆ ಬೇರೆ ಅಲ್ಲ.

# ೩. ಶಾಂತವೀರ ವಿಚಾರ ಧಾರೆ

೧. ದೇವತ್ವ — ಮಾನವನು ತನ್ನ ನಿತ್ಯ ವ್ಯವಹಾರದಲ್ಲಿ ನಿಸರ್ಗಕ್ಕೆ ಹೊಂದಿಕೊಂಡಾಗಲಿ, ನಿಸರ್ಗವನ್ನು ಬದಿಗಿರಿಸಿ ತನ್ನದೇ ಒಂದು ಹಾದಿಯಿಂದ ಆನಂದಧಾಮಕ್ಕೆ ಹೋಗುವಾಗ ನಿಸರ್ಗದ ಅಡಿತಡೆ ಇವನಿಗೆ ಬಂದಾಗ ಅವುಗಳನ್ನು ಪರಿಹರಿಸಲು ಇವನ ಬುದ್ಧಿಶಕ್ತಿ ಕುಂಠಿತ ವಾದಾಗ, ಅವನು ಅಸಹಾಯಕ ಸ್ಥಿತಿಯಲ್ಲಿದ್ದಾಗ ಹತಾಶನಾಗಿ, ದಿಙ್ಮೂಢನಾಗುವನು. ಆಗ ಅನನ್ಯ ಗತಿಕನಾಗಿ ಯಾವುದೋ ಒಂದು ಅನಿರ್ದಿಷ್ಟ ಶಕ್ತಿಗೆ ತನ್ನನ್ನು ಒಪ್ಪಿಸಿ ನಿಂತುಬಿಡುವನು. ಆ ಅನನ್ಯ ಶಕ್ತಿಯೇ ದೇವರು.

ಅದನ್ನೇ ಕೇಂದ್ರೀಕರಿಸಿ ಒಂದು ಸ್ವರೂಪ ಕೊಟ್ಟು ತನಗಿರುವ ಬಾಧೆಯನ್ನು ನಿವಾರಿಸಿ ಕೊಳ್ಳುವುದಕ್ಕಾಗಿ ಅದಕ್ಕೆ ಸಾಕಾರ ಸ್ವರೂಪ ಕೊಟ್ಟು ಸಾಗುವನು. ಮುಂದೆ ಅವನ ಪರಿಪಕ್ವತೆಯು ಸೂಕ್ಷ್ಮವಾಗಿ ಹೋದಂತೆ ಅದೇ ನಿರಾಕಾರದ ಅನುಭವಕ್ಕೆ ಬರುವನು. ಅವನೇ ದೇವರು. ಅವನು ಶಕ್ತಿ ಸಮೇತನು. ತನ್ನ ಬಿಟ್ಟು ದೇವರಿಲ್ಲ.

೨. ಮಾರ್ಗ — ದ್ವೈತ. ವಿಶಿಷ್ಟಾದ್ವೈತ. ಅದ್ವೈತ ಹಾಗೂ ಶಕ್ತಿ ವಿಶಿಷ್ಟಾದ್ವೈತ ಮತ ಗಳೆಲ್ಲ ದೇವರೆಡೆಗೆ ಹೋಗಲು ವಿವಿಧ ಮಾರ್ಗಗಳಾಗಿವೆ.

೩. ಬೆಳವಣಿಗೆ — ಪ್ರಜ್ಞಾನವು ನಿವೃತ್ತಿಪರವಾಗಿದ್ದು ದೇವತ್ವಕ್ಕೆ ಮುಟ್ಟುವದು. ಇನ್ನು ವಿಜ್ಞಾನವು ಪ್ರವೃತ್ತಿ ಪರವಾಗಿದ್ದು ಅದು ಇನ್ನೂ ಶೋಧಕವಾಗಿರುವದು.

೪. ಶ್ರೀ ಗುರುಪಾದ ಶಿವಯೋಗಿಗಳು—ಶ್ರೀ ಗುರುಪಾದ ಶಿವಯೋಗಿಗಳು ಗುರಿಯ ಕಡೆಗೆ ಸರ್ವಾರ್ಪಣ ಮಾಡಿಬಿಟ್ಟಿದ್ದರು. ನಾವು ಅವರ ನಡೆಗೆ ಪ್ರಾಧಾನ್ಯತೆಯನ್ನು ಕೊಟ್ಟು. ಅದನ್ನು ನಮ್ಮ ನಡೆಯಲ್ಲಿ ಇಳಿಸಿಕೊಳ್ಳುವದು ನಮ್ಮ ಕರ್ತವ್ಯವಾಗಿದೆ.

೫. ಭಕ್ತಿ ಜ್ಞಾನ ಕರ್ಮ — ಭಕ್ತಿಗೆ ಯಾವ ಸಾಹಿತ್ಯ ಬೇಕಿಲ್ಲ. ವಿಶ್ವಾಸದ ಪರಿಪಕ್ವ ಅವಸ್ಥೆಯೇ ಭಕ್ತಿ. ದೇವರಿಗೆ ತನ್ನ ಸಂಪೂರ್ಣ ಸಮರ್ಪಣೆ ಮಾಡುವದೇ ಭಕ್ತಿಯ ಚರಮ ಸೀಮೆ. ಜ್ಞಾನವು ಇಚ್ಛೆಯ ಮೂಲಕ ಉಂಟಾಗುವದು. ಇಚ್ಛೆಯಿಂದ ವಸ್ತುವಿನ ಜ್ಞಾನ ವಾಗುವದು. ಎಷ್ಟೇ ಜ್ಞಾನವಾದರೂ ಕ್ರಿಯೆ ಇಲ್ಲದೆ ಅದು ಫಲ ಪ್ರದವಾಗುವದಿಲ್ಲ. ಜ್ಞಾನಕ್ಕೆ ವಿಷಯವಾದ ವಸ್ತುವನ್ನು ಕಾಣಲು ಬಲವಂತವಾದ ಗಮನ ರೂಪವೇ ಕರ್ಮ.

೬. ಬಾಹ್ಯ-ಅಂತರಿಕ — ಅಧ್ಯಾತ್ಮಿಕ ಶಕ್ತಿಯು ಬಾಹ್ಯ. ಅಂತರದಲ್ಲಿ ವ್ಯಾಪ್ತಿ ಇದೆ. ಬಾಹ್ಯ ಅಂತರಿಕವೆಂಬುದು ಕಾಲ್ಪನಿಕ. ಇರುವುದೆಲ್ಲವೂ ಒಂದೇ ಆಗಿದೆ.

೭. ಮನಸ್ಸಿನ ನಿಗ್ರಹ — ಶರೀರವನ್ನು ಹತೋಟಿಯಲ್ಲಿ ತಂದರೆ. ಮನಸ್ಸು, ಪ್ರಾಣಗಳು ತಾವೇ ಹತೋಟಿಯಲ್ಲಿ ಬರುತ್ತವೆ. ಆದರೆ ಶರೀರವು ತಾಮಸದವಾಗದೆ. ಸಾತ್ವಿಕವಾಗಿರಬೇಕು. ರಜೋ, ತಮಗಳು ಗೌಣವಾಗಿರಬೇಕು.

೮. ಆಧ್ಯಾತ್ಮಿಕದಲ್ಲಿ ಸ್ತ್ರೀಯರ ಪಾತ್ರ — ಆಧ್ಯಾತ್ಮಿಕ ವಿಷಯದಲ್ಲಿ ಪುರುಷರು ಅಡಿಗೆಯ ಮನೆಯಲ್ಲಿಟ್ಟ ಸ್ತ್ರೀಯರನ್ನು ಮುಕ್ತಮಾಡಿದ್ದರೆ, ಅವರು ಪುರುಷರಿಗಿಂತ ಮೇಲಾಗುತ್ತಿದ್ದರು. ಆಧ್ಯಾತ್ಮ ವಿಷಯದಲ್ಲಿ ಪುರುಷರಿಗಿಂತ ಅವರು ಯಾವ ರೀತಿಯಲ್ಲಿ ಕಡಿಮೆ ಆಗುತ್ತಿರಲಿಲ್ಲ. ಇದನ್ನರಿತ ಬಸವಣ್ಣನವರು ಸ್ತ್ರೀಯರಿಗೆ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಅವರಿಗೆ ಪ್ರವೇಶಕೊಟ್ಟವರಲ್ಲಿ ಆಧುನಿಕ ಕಾಲದಲ್ಲಿ ಮೊದಲಿಗರು. ಅದರ ಪರಿಣಾಮದಿಂದ ಎಷ್ಟೋ ಮಹಿಳೆಯರು ವಚನಕಾರರಾಗಿ ಮುಂದೆ ಬರಲು ಅವಕಾಶವಾಯಿತು.

೯. ಪ್ರಪಂಚ-ಪಾರಮಾರ್ಥ — ಆಧ್ಯಾತ್ಮಿಕ ವಿಷಯವಾಗಿ ಇಚ್ಛೆಪಟ್ಟರೆ ಸರ್ವರಿಗೂ ಅವಕಾಶವುಂಟು. ಅದರಲ್ಲಿ ಯ್ಯಾವುದೇ ಕಾರಣದಿಂದ ಒಬ್ಬೊಬ್ಬರಲ್ಲಿ ಬೇಸರವಾಗಬಹುದು. ಆದರೂ ಅವರು ತಮ್ಮ ಐಚ್ಛಿಕ ಶಕ್ತಿಯನ್ನು ಬೆಳೆಸಿಕೊಳ್ಳಬೇಕು. ಬೆಚ್ಚದೆ, ಬೆದರದೆ ಮುಂದಡಿ ಇಡಬೇಕು. ಈ ದೇವೋನ್ಮಾದ ಅವಸ್ಥೆಯಲ್ಲಿ ಅವನಿಗೆ ಉಳಿದ ವಿಷಯದಲ್ಲಿ ವಿಸ್ಮೃತಿಯಾಗುತ್ತದೆ. ಆ ಸಮಯದಲ್ಲಿ ಸತ್ಯದರ್ಶನ ಉಂಟಾಗುತ್ತದೆ.

೧೦. ಪ್ರಜ್ಞಾನಿ-ವಿಜ್ಞಾನಿ — ವಿಜ್ಞಾನಿಯು ಭೌತಿಕವಾಗಿ ಸಾಗುವನು. ಪ್ರಜ್ಞಾನಿ ಆಧ್ಯಾತ್ಮಿಕವಾಗಿ ಸಾಗುವನು. ವಿಜ್ಞಾನಿಯ ಜಗತ್ತು ಬೇರೆ, ಪ್ರಜ್ಞಾನಿಯ ಜಗತ್ತು ಬೇರೆ. ಅವನು ಬಹಿರ್ಮುಖಿವಾಗಿ ಸಾಗುತ್ತಾನೆ, ಈತನು ಅಂತರ್ಮುಖಿವಾಗಿ ಸಾಗುತ್ತಾನೆ. ವಿಜ್ಞಾನಿಯ ವಿಷಯ ಶ್ರೇಯ, ಪ್ರಜ್ಞಾನಿಯ ವಿಷಯ ಪ್ರೇಯ. ಇವೆರಡೂ ಮಾನವನಿಗೆ ಅವಶ್ಯ ಇವೆ.

೧೧. ಉಪದೇಶದ ರೀತಿ — ಶ್ರೀಕೃಷ್ಣನು ಗೀತೆಯನ್ನು ಅರ್ಜುನನ ಮೂಲಕ ಜಗತ್ತಿಗೆ ಉಪದೇಶ ಮಾಡಿರುವನು. ಆದರೆ ಬಸವಾದಿ ಪ್ರಮಥರು ತಮ್ಮ ಹೃದಯಸ್ಥ ಪರಮಾತ್ಮನಿಗೆ ನಿವೇದನೆ ಮಾಡಿಕೊಂಡಿರುವರು. ಈ ನಿವೇದನೆಯು ಜಗತ್ತಿಗೂ ಅನ್ವಯಿಸುವದು.

೧೨. ಮಹಾತ್ಮಾಜಿ — ವೇದಕಾಲದ ಋಷಿಗಳು ಮಾನವಕೋಟಿಯ ಹಿತಕ್ಕಾಗಿ ಎಷ್ಟು ಶ್ರಮಿಸಿದರೋ, ಆಧುನಿಕ ಮಹರ್ಷಿ ಮಹಾತ್ಮಾ ಗಾಂಧಿಯವರು ಅದಕ್ಕಿಂತಲೂ ಹೆಚ್ಚು ವ್ಯಾಪಕವಾಗಿ ಶ್ರಮಿಸಿ ಕೆಲಸ ಮಾಡಿದ್ದಾರೆ.

ಮಹಾತ್ಮಾ ಗಾಂಧಿಯವರು ತಮ್ಮ ಅನುಯಾಯಿಗಳು ಏನಾದರೂ ತಪ್ಪು ಮಾಡಿದರೆ ಅವರಮೇಲೆ ಕೋಪಗೊಳ್ಳದೆ, ಅವರ ತಪ್ಪನ್ನು ಹೋಗಲಾಡಿಸಲು ತಮ್ಮಮೇಲೆ ತಾವೇ ಪ್ರತಿಕ್ರಿಯೆ ಮಾಡಿಕೊಂಡಿದ್ದಾರೆ. ಅದರಿಂದ ಅವರ ಅನುಯಾಯಿಗಳು ತಮ್ಮ ತಪ್ಪನ್ನು ಅರಿತು ಸರಿಪಡಿಸಿಕೊಳ್ಳುತ್ತಿದ್ದರು.

ಅವರು ತಮ್ಮ ಇಡೀ ಜೀವಮಾನದಲ್ಲಿ ಸತ್ಯ, ಅಹಿಂಸೆಗಳನ್ನು ಪರಿಪಾಲಿಸುತ್ತ ಬಂದಿರುವರು. ತಮ್ಮ ಧ್ಯೇಯದ ಅರಿವು ನಿತ್ಯ ಜಾಗ್ರುತವಾಗಿರುತ್ತಿತ್ತು. ಅವರು ಅದನ್ನು ಎಂದೂ ಬದಲಾಯಿಸುತ್ತಿರಲಿಲ್ಲ.

೧೩. ಅಸ್ಪೃಶ್ಯತೆ — ಅಸ್ಪೃಶ್ಯತೆಯು ಗ್ರಾಮಮಂಡಳದವರು ಕೊಟ್ಟ ನಿರ್ಣಯವನ್ನು ಪರಿಪಾಲಿಸದವರಿಗೆ ಹಾಕಿದ ಬಹಿಷ್ಕಾರದಿಂದ ಬೆಳೆದು ಬಂದಿದೆ. ಇದರಿಂದ ಅವರು ಸಮಾಜದಿಂದ ದೂರಾಗಬೇಕಾಯಿತು.

ಅಸ್ಪೃಶ್ಯತೆಯನ್ನು ಹೋಗಲಾಡಿಸಲು ಓದೆ ಬಸವಣ್ಣನವರು, ಇತ್ತೀಚಿಗೆ ಮಹಾತ್ಮಾ ಗಾಂಧಿಯವರು ಮನಃಪೂರ್ವಕ ಪ್ರಯತ್ನಿಸಿದರೂ ಅದು ಸಾಕಷ್ಟು ಪ್ರಮಾಣದಿಂದ ಆಗಲಿಲ್ಲ. ಆದರೂ ಅದರ ನಿವಾರಣೆಗೆಗಾಗಿ ನಡೆದಿರುವ ಪ್ರಯತ್ನಗಳು ಮುಂದುವರಿಯುವದು ಅವಶ್ಯವಿದೆ.

೧೪. ಯುದ್ಧ ಅನಿವಾರ್ಯ — ಆಸುರಿ ಶಕ್ತಿಯು ಪ್ರಕೋಪವಾದಾಗ ಅದನ್ನು ದಮನ ಮಾಡಲು ದೈವೀಶಕ್ತಿಯ ಹೋರಾಟ ನಡೆಯುವುದು ಅವಶ್ಯವಿದೆ. ಆಸುರಿ ಶಕ್ತಿಯು ದಮನ ವಾಗದಿದ್ದರೆ, ಅಸುರಿ ಶಕ್ತಿಯ ಹೋರಾಟದಲ್ಲಿ ದೈವೀ ಶಕ್ತಿಯ ಸಂಪನ್ನರು ಕೂಡ ಹಾಳಾಗಿ ಹೋಗ ಬೇಕಾಗುತ್ತದೆ. ಆದುದರಿಂದ ಯುದ್ಧವು ಜಗತ್ ಕ್ಷೇಮಕ್ಕಾಗಿ ಅನಿವಾರ್ಯವು.

೧೫. ಕಾಯಕವೇ ಕೈಲಾಸ — ಕಾಯಕವೇ ಕೈಲಾಸ ಎಂಬ ತತ್ವದಲ್ಲಿ ಅದರ ವ್ಯಾಪ್ತಿ. ವಿಶಾಲವಾಗಿದೆ. ಇದರಿಂದ ಪ್ರತಿಯೊಬ್ಬನೂ ಕಾಯಕ ಜೀವಿ ಆಗಲೇಬೇಕು. ಇದರಲ್ಲಿ ವ್ಯಕ್ತಿಯ್ಯ ಹಿತವೂ ಇದೆ; ದೇಶದ ಹಿತವೂ ಇದೆ. ಅದರ ಪರಿಣಾಮದಿಂದ ಪ್ರತಿಯೊಬ್ಬರು ದುಡಿಯಲೇ ಬೇಕು. ದುಡಿದು ಬಂದುದನ್ನು ತನಗೆ ಅವಶ್ಯವಿದ್ದುದನ್ನು ಬಳಸಿ ಉಳಿದುದನ್ನು ದುಡಿಯಲು ಶಕ್ತಿ ಯಿಲ್ಲದವರಿಗೆ ಉಪಯೋಗಿಸಬೇಕು. ಅದರಿಂದ ಸಂಗ್ರಹ ಬುದ್ಧಿ ಅಳಿಸಿಹೋಗುವದು. ಇದೇ ಕಾಯಕದ ತತ್ವವು.

ಈ ಕಾಯಕದ ತತ್ವದಿಂದ ದೇಶದಲ್ಲಿಯ ವಿಷಮತೆಯು ಅಳಿಯುವದು, ಸಮಾನತೆಯು ಬೆಳೆದು ಬರುವದು. ಯಾಚನಾ ವೃತ್ತಿಯು ತನ್ನಿಂದ ತಾನೇ ಮಾಯವಾಗುವದು.

೧೬. ಆಕಾಶವಾಣಿ ಭಾಷಣ-(ಟೇಪ್‌ರಿಕಾರ್ಡಿದೆ) — ನಡೆಯೊಂದು ಬೇರೆ, ನುಡಿಯೊಂದು ಬೇರೆ ಆದರೆ ಮಾನವ ಜನಾಂಗಕ್ಕೆ ಯಾವ ಹಿತವಾಗದು. ಇಂದು ಕಂಡುಬರುವ ಎಲ್ಲ ಕಠಿಣ ಸಮಸ್ಯೆಗಳಿಗೆ ನಮ್ಮ ನಡೆ, ನುಡಿಗಳಲ್ಲಿ ತಾಳ ಮೇಳ ಇಲ್ಲದುದೇ ಮೂಲಕಾರಣವು.

೧೭. ಇಂದಿನ ಸಮಸ್ಯೆ—ಮಹಾತ್ಮಾ ಗಾಂಧಿಯವರ ಭಾಷಣವು ಸಾಮಾನ್ಯ ಜನರ ಮನಸ್ಸಿಗೆ ಮುಟ್ಟುತ್ತಿತ್ತು. ಪ್ರತಿಭೆಯಿಂದ ಬಂದ ಮಾತು, ಕೇಳುವವರ ಹೃದಯದಲ್ಲಿ ಮೂಡಿಬಿಡುತ್ತದೆ. ಆ ಮಾತು ನಡೆಯಲ್ಲಿ ಇಳಿದು ಬರುತ್ತದೆ. ಆ ನುಡಿ, ನಡಿಗೆಗೆ ಚಾಲನ ಕೊಟ್ಟಿತು.

ಆ ನುಡಿಯ ಉಪಯೋಗವನ್ನು ಈಗಿನವರು ಸ್ವಾರ್ಥದ ಸಲುವಾಗಿ ಬಳಸುತ್ತಾರೆ. ಅದರಿಂದ ಯಾವ ಫಲವಾಗುವದಿಲ್ಲ.

ಭಾಷಣವೆಂದರೆ ಶ್ರೋತೃಗಳ ಹೃದಯ ಬೆಳಗಬೇಕು. ಅದು ಅವನ ನಡೆಯಲ್ಲಿ ಇಳಿಯ ಬೇಕು.

ನೂರರಲ್ಲಿ ೯೯ ಜನರು ಅನ್ಯರ ಮಾತನ್ನು ಕದ್ದು ಮಾತನಾಡುವವರಿರುವರು. ಅದರಿಂದ ಏನೂ ಪ್ರಭಾವವಾಗದು.

ತಾನು ನುಡಿಯುವುದನ್ನು ತನ್ನ ನಡೆಯಲ್ಲಿ ಇಳಿಸಿಕೊಳ್ಳದೆ ಮಾತನಾಡಿದರೆ ಅದರಿಂದ ಯಾವ ಫಲ ಪ್ರಾಪ್ತವಾಗುವದಿಲ್ಲ.

೧೮. ದೇವರ ಅಸ್ತಿತ್ವ — ಉಪನಿಷತ್ಕಾರರು ದೇವರ ಅಸ್ತಿತ್ವದ ಬಗ್ಗೆ ಅನೇಕ ಭಿನ್ನ ಭಿನ್ನ ಅಭಿಪ್ರಾಯಗಳನ್ನು ಮಂಡಿಸುತ್ತಾರೆ. ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಿವಾದ್ವೈತ ಅಥವಾ ಶಕ್ತಿವಿಶಿಷ್ಟಾದ್ವೈತ.

# ೪. ಸ್ವಾಮಿಗಳ ಪತ್ರ ಸಂಗ್ರಹ

ಶ್ರೀ ಶಾಂತವೀರ ಸ್ವಾಮಿಗಳು ಕಳೆದ ಅರವತ್ತು ವರುಷಗಳಿಂದ ತಮ್ಮ ನಿಕಟ ಸಂಪರ್ಕವನ್ನಿಟ್ಟು ಕೊಂಡ ಶ್ರೀ ಸ. ಚ. ಮಿರ್ಜಿಯವರಿಗೆ ಬರೆದ ಅವರ ಹಸ್ತಾಕ್ಷರಗಳ ಹದಿಮೂರು ಹಳೆ ಪತ್ರಗಳಲ್ಲಿಯ ಮಹತ್ವದ ಮಾತುಗಳನ್ನು ಸಂಗ್ರಹಿಸಿ ಈ ಕೆಳಗೆ ಕೊಡಲಾಗಿದೆ.

ಒಂದು ೭-೬-೧೯೩೬

ಸದ್ವೃತ್ತಿಯು ಪರಿಪಾಲಿಸಲ್ಪಡಲಿ. ಸತ್ಸಂಗವು ಸದಾ ಸನ್ನಿಹಿತವಾಗಿರಲಿ. ಸತ್ಕ್ರಿಯುವು ಭಾವೈಕ್ಯ ಮಾತ್ರ ಇರಲಿ. ಯಥಾ ಶಕ್ತಿ ಬಾಹ್ಯವಿರಲಿ. ಧ್ಯೇಯುವು ಭಾವಾಧೀನವಿದೆ, ಭಾವವು ವಿಷಯಾಧೀನವಾಗಿದೆ, ನಿವೃತ್ತಿಯು ಪೌರುಷದಲ್ಲಿದೆ, ಪೌರುಷವು ಭಾಗ್ಯವಶೇನ ಪ್ರಾಪ್ತವಿದೆ.

ಎರಡು ೧೦-೧೧-೧೯೩೬

ಪ್ರತಿ ದಿವಸ ಶರೀರಕ್ಕೆ ಸಾಕಾಗುವಷ್ಟು ವ್ಯಾಯಾಮ ದೊರೆಯಬೇಕು, ಗ್ರಂಥಗಳನ್ನು ಬರೆಯುವದಿರಲಿ, ಧ್ಯೇಯವನ್ನು ಸಾಧಿಸಿಕೊಳ್ಳುವದಿರಲಿ, ನಿತ್ಯ ನೇಮಗಳನ್ನು ಸಾಗಿಸುವದಿರಲಿ ಎಲ್ಲವೂ ಕ್ರಮಬದ್ಧವಾಗಿರಬೇಕು.

ಮೂರು ೧೫-೯-೧೯೩೬

ದೈವಿಕ ಕೃಪಾದೃಷ್ಟಿಯು ಸಮೃದ್ಧವಾಗಲಿ, ಇದೇ ನನ್ನ ಆಶೀರ್ವಾದ. ಕಾರ್ಯ ಬೆಳೆದರೂ ಅಶಾಂತತೆಯನ್ನು ಬೆಳೆಯಗೊಡಬಾರದು ಅನ್ನುವ ನಿಮ್ಮ ಅಭಿಪ್ರಾಯದಂತೆ ನನ್ನ ಆಲೋಚನೆ ಯಿದೆ.

ನಾಲ್ಕು ೭-೨-೧೯೩೬

ಯಾವ ಹೇತುವಿನಿಂದ ಉತ್ತರ ನಿರೀಕ್ಷಿಸುವಿರೋ ಆ ಹೇತು ಮನಸ್ಸಿನಿಂದಲೇ ಪೂರೈಸಲ್ಪಡುವದು.

ಐದು ೨೯-೬-೧೯೩೫

ಜ್ಞಾನ ಸಂಗ್ರಹಾಲಯದ ಕೇಂದ್ರದಲ್ಲಿ ನೀವು ನಿಂತಿದ್ದು ನಿಮ್ಮ ನಿರಂತರಾತುರ ವೃತ್ತಿಗೆ ರಮಣೀಯ ನಿಲ್ದಾಣವು, ಹೃದಯಂಗಮವೇ ಸರಿ. ಇಂಥ ಸುಮನೋಹರವಾದ, ಸರ್ವತೋ ಮುಖವಾದ ನಿಲ್ದಾಣದಲ್ಲಿ ಸದ್ಬೋಧಗಳ ಗುಂಪು ಗುಂಪುಗಳೇ ಎಡೆಬಿಡದೇ ಎಡ ತಾಕುತ್ತಿರುವವು. ಯಾವುದರ ಹಸಿವೆಯಿಂದ ವೃತ್ತಿಯು ಚಂಚಲವಾಗಿತ್ತೋ ತತ್ಪ್ರಾಪ್ತಿ ಅನುಭವಗಳಿಂದ ಸಂತೃಪ್ತಿ ಗೊಂಡು ಆನಂದ ಸಾಗರದ ಮೇಲ್ಮೈಯಲ್ಲಿ ತೇಲುತ್ತಿರುವಾಗ ಎದ್ದು ಬರುವ ತೆರೆಗಳಲ್ಲಿ ಒಂದೊಂದು ತೆರೆಯನ್ನು ಕಾಲಕಾಲಕ್ಕೆ ಇತ್ತಕಡೆಗೆ ನೂಕುತ್ತಿರಬೇಕು.

ಆರು ೨೧-೧-೧೯೩೬

ಶಿವಾನುಭವಾಮೃತವನ್ನು ನಿರಂತರವಾಗಿ ಪಾನಮಾಡಲಿಚ್ಛಿಸುವ ನಿಮ್ಮಂತರಂಗವು ತನ್ಮಹೋ ದಧಿಯಲ್ಲಿ ನಿಮಗ್ನವಾಗಲಿ, ಬಾಹ್ಯ ರೂಪದಿಂದ ತತ್ಪಾನವು ಔಪಚಾರಿಕವೆನಿಸುವದು. ಆದರೂ ನಿಮ್ಮ ಯೋಗಕ್ಷೇಮಗಳನ್ನು ಭಾವಮಯವಾಗಿಯೇ ವಿಚಾರಿಸುವೆವು. ಭಾವ ಕಲ್ಪತರು ಸರ್ವಾಭೀಷ್ಟ ಪ್ರದವದೆ, ಇದು ಭಕ್ತಿ ಗಮ್ಯವಿದೆ. ನಿಮ್ಮ ಸ್ವೀಕೃತ ಕಾರ್ಯವು ಸುಖಮಯವಾಗಲಿ.

ಏಳು ............

ಬಾಳೆಹಳ್ಳಿಯಿಂದ ಬರೆದ ಪತ್ರ ಮುಟ್ಟಿತು. ಗುರು ಕಾರ್ಯಕ್ಕೆ ಹೋಗಿ ಗುರುದರ್ಶನ ತಕ್ಕೊಂಡ ನಿಮ್ಮ ಜನ್ಮವೇ ಧನ್ಯವು. ಬಾಳೆಹಳ್ಳಿಯ ಯಾವತ್ತೂ ಸಂಗತಿಯನ್ನು ಪತ್ರದ್ವಾರಾ ತಿಳಿಯಲಿಚ್ಛಿಸುವೆನು.

ಎಂಟು

೩೦–೧೦–೧೯೨೫

ನೀವು ಯಾವತ್ತೂ ರೀತಿಯಿಂದ ಮಿತವ್ಯಯರಾಗಿರಬೇಕು. ಮಿತವ್ಯಯಿಗಳು ಅರ್ಥವಂತರು. ಈ ಸಾರಭೂತ ಪ್ರಯೋಗವು ದ್ವಿವಿಧ ದೃಷ್ಟಿಯಿಂದ ವಿಚಾರಣೀಯ.

ಒಂಭತ್ತು

೩–೧೦–೧೯೨೫

ಭಾವವು ಗಂಭೀರವಾಗಲಿ, ಶಾಂತಿಗೆ ಎಂಬು ಕೊಡಿರಿ. ಇದ್ದುದೇ ಸ್ವರ್ಗವೆಂದು ನಿಸ್ಸಂದೇಹವಾಗಿ ನಂಬಿರಿ. ಇದೇ ಸ್ವರ್ಗದ ಕಡೆಯ ಸೋಪಾನವು.

ಹತ್ತು

೨–೮–೧೯೨೫

ಏಕೋತ್ತರ ಶತಸ್ಥಲದ ಕೆಲಕೆಲವು ಸ್ಥಲವಲ್ಲಿ ಬೋಧಾತ್ಮಕವಾದ ಪ್ರಧಾನ ವಾಕ್ಯಗಳ ಸಂಗ್ರಹವನ್ನು ಬೇರೆಯಾಗಿ ಮಾಡಿಡಬೇಕು. ಇನ್ನು ಮುಂದೆ ಬರೆಯುವ ಪತ್ರಗಳಲ್ಲಿ ಇಂಥ ವಾಕ್ಯಗಳು ಅಡಕವಾಗಿರಬೇಕು. ಜ್ಞಾನಸುಧಾ ಸಾಗರ ತಟ ಸಂಚಾರಿಯಾದ ನಿಮ್ಮ ಪ್ರಬಲೇಚ್ಛೆಯು ಬೆಳೆಯುತ್ತ, ಬೆಳೆಯುತ್ತಾ ಹೋದಹಾಗೆ ಬೌದ್ಧಿಕ ವಿಕಾಸವಾಗ ಹತ್ತುವದು. ಈ ವಿಕಾಸಕ್ಕೆ ಉತ್ತಮ ಸಂಗ ಮತ್ತು ಸಾಧು ವರ್ತನಗಳು ಜೋಡಾದರೆ ಬಹುದಿನಗಳಿಂದ ನೀವು ಯಾವದನ್ನು ಕುರಿತು ಆತುರ ಪಡುತ್ತಿದ್ದಿರೋ ಅದುವೇ ನೀವಾಗುವಿರಿ.

ಹನ್ನೊಂದು

...............

ಅತ್ತ ಕಡೆಯಿಂದ ದೌರ್ಜನ್ಯ ಪ್ರವಾಹವು ೧೯೨೧ ಸಾಲಿನಿಂದ ೧೯೨೬ ಸಾಲಿನವರೆಗೂ ಅವಿಚ್ಛಿನ್ನವಾಗಿ ಬಹುಭೀಕರ ವೇಗದಿಂದ ಹರಿಯಹತ್ತಿರುವದು. ಸಮಗ್ರವಾಗಿ ಐದಾರು ವರ್ಷಗಳಿಂದಲೂ ಬಲವಾದ ಶಾಂತಿಮಯ ಒಡ್ಡನ್ನು ಬಹು ಪ್ರಯಾಸದಿಂದ ಹಾಕುತ್ತ ಬಂದಿರುವೆನು. ಪರಂತು ಉಗಮದಲ್ಲಿ ಅತಿವೃಷ್ಟಿಯಾದ್ದರಿಂದ ಪ್ರವಾಹವು ಸೀಮೆದಪ್ಪಿ ಬಂದು ಒಡ್ಡನ್ನು ದೋಚಿಕೊಂಡು ಹೋಯಿತು. ಒಡ್ಡೂ ಇಲ್ಲಾ ಒಡ್ಡಿನ ಸಾಮಗ್ರಿಯೂ ಸೆಳವಿಗೆ ಸಿಕ್ಕು ಹರಿದುಹೋದವು. ತಿರುಗಿ ಹಾಕಲು ಅಶಕ್ತನು.

ಈ ಬಗ್ಗೆ ನಾನು ನನ್ನ ಭಾವಿ ಚರಿತಾರ್ಥದ ವಿಷಯವಾಗಿ ಘೋರ ವಿಚಾರದಲ್ಲಿ ಪ್ರವೇಶಿಸಿದೆನು. ವಿಚಾರ ಸರಣಿಯ ಯಾವ ಭಾಗದಲ್ಲಿಯಾದರೂ ಒಂದಿಲ್ಲೊಂದು ಕಾರಣದಿಂದ ಮುಳ್ಳುಗಳು ದಟ್ಟಾಗಿ ಬೀಳಹತ್ತಿರವವು. ದಾರಿಯ ಯಾವ ಭಾಗವೂ ಎಂಬು ಕೊಡುವದಿಲ್ಲ. ವಿಚಾರವು ಆ ಅಬ್ಬಿರದ ಪಾದಾಕ್ರಾಂತವಾಗಿರುವದು.

ಈ ಮಹತ್ವಾಕಾಂಕ್ಷೆಯು ಬಾಹ್ಯ ಪದಾರ್ಥದಲ್ಲಷ್ಟೇ ತೊಡಗಿದ್ದರೆ ಪೂರ್ವ ತ್ಯಾಗದಾತೆ ಪ್ರಕೃತ ತ್ಯಾಗವು ಕೂಡಾ ಇಷ್ಟವಿತ್ತು. ಪರಂತು ನನ್ನ ಅಸ್ತಿತ್ವವೇ ಮಹತ್ವಾಕಾಂಕ್ಷೆಗೆ ಬಹು ದೊಡ್ಡ ತೊಡಕಾಗಿರುವದು.

ಈ ತೊಡರನ್ನು ಬಿಡಿಸಿಕೊಳ್ಳುವ ಪ್ರಯತ್ನವು ನೀಚೋಚ್ಚ ಭಾವವನ್ನು ನೋಡದೆ ಹಲವು ಪ್ರಕಾರ ಧಾವಿಸ ಹತ್ತಿರುವದು. ನಾನು ಆಶಾ ಭೂತ ಗಸ್ತವಾಗಿ ಈ ಬಾಹ್ಯ ನೋಟಕ್ಕೆ ದಾಸನಾಗಿ ಐಚ್ಛಿಕ ವಿಷಯಗಳ ಬೆನ್ನಟ್ಟಿಲ್ಲ. ಚಿತ್ತವು ಶಾಂತಿ ನಿಕೇತನವನ್ನು ಕಳಕೊಂಡು ಅಲೆದಾಡುತ್ತಿರುವದು.

ಅದು ತನ್ನ ಸ್ವಾಸ್ಥತೆಗೆ ಸಹಾಯವಾಗುವ ಹಲವು ಉಪಾಯಗಳ ಶೋಧನೆಯಲ್ಲಿ ಮುಳುಗಿತು. ಇದಕ್ಕಾಗಿ ತನ್ನ ಶಕ್ತಿಯ ಬಹುಭಾಗವನ್ನು ವೆಚ್ಚ ಮಾಡಿಕೊಂಡಿತು. ಉಪಾಯದ್ವಯಗಳ ಹೊರ್ತಾಗಿ ಯಾವದೂ ಕಾಣಲಿಲ್ಲ. ಇನ್ನುಮೇಲೆ ಈ ಉಪಾಯದ್ವಯಗಳಾದ ಸ್ಥಾನಾಂತರ, ಮನಾಂತರ ಹೊರ್ತು ಗತ್ಯಂತರವೇ ಉಳಿಯಲಿಲ್ಲ.

ಆ ಪೂಜ್ಯ ಪ್ರಪಿತಾಮಹರಾದ ಮಹಾತ್ಮರು ತಮ್ಮ ತಪೋಬಲದ ಫಲವನ್ನು ಭೂತಹಿತಾರ್ಥವಾಗಿ ಇಟ್ಟಿರುವರಲ್ಲದೇ, ದುರ್ಭೋಗ ಧೂಮ ವ್ಯಾಪ್ತಿಗೆ ಕಾರಣವಾಗುವದು ಮಹಾತ್ಮರ

ಇಚ್ಛೆ ಇಲ್ಲ. ಕಾರಣ ಸ್ಥಾನಾಂತರಕ್ಕಿಂತಲೂ ಮನಾಂತರದಲ್ಲಿಯೇ ಮಹಾತ್ಮರ ಇಚ್ಛೆಯಾದರೂ ನೆರವೇರಿತು. ತದ್ವಾರಾ ಚಿತ್ತಕ್ಕೆ ಶಾಂತಿಯು ದೊರೆಯಬಹುದು. ಇದೇ ನನ್ನ ನಿಶ್ಚಯವು. ಫಲವು ಮಹಾತ್ಮರ ಅಧೀನವಿದೆ.

ಹನ್ನೆರಡು

೧೬-೧೧-೧೯೭೩

ಹಸಿವು ಪಿಸುವನ್ನು ಘಾಸಿಗೊಳಿಸುತ್ತಿದೆ. ಅರಿವು ಜಾಗ್ರತವಾದಾಗ ಇದು ಮಾಯವಾಗುವದು. ಅರಿವು ಮಂದವಾದಾಗ ಅದು ಜಾಗ್ರತವಾಗುವದು. ಈ ತರದ ಹೋರಾಟವೇ ಘಾಸಿಯಾಗುವದಕ್ಕೆ ಕಾರಣವಾಗಿದೆ.

ಈ ನಿಮ್ಮ ಪೇಚಾಟದಲ್ಲಿ ಮನಸ್ಸು ಸುತ್ತುವರೆಯಬಹುದು. ಮನಸ್ಸು ಅನಾದಿ ಕಾಲದಿಂದಲೂ ತ್ರಿಗುಣಾತ್ಮಕವಾದ ಈ ಪ್ರಪಂಚವನ್ನು ತನ್ನ ಗರ್ಭದಲ್ಲಿಟ್ಟುಕೊಂಡು ಅದರೊಂದಿಗೆ ಆಡುತ್ತ ಬಂದಿದೆ.

ಒಂಟಿಯಾಗಿರುವ ರೂಢಿ ಅದಕ್ಕಿರುವದಿಲ್ಲ. ಮನಸ್ಸಿನ ಗರ್ಭದಲ್ಲಿ ಅಡಗಿದ ಪ್ರಪಂಚವನ್ನು ಕಿತ್ತೊಗೆದು ಅದನ್ನು ಏಕಾಕಿ ಮಾಡುವದು ನಿಮ್ಮ ಪ್ರಯತ್ನವಾಗಿದೆ.

ಹೊಸದಾಗಿ ರಥಕ್ಕೆ ಹೂಡುವ ಕುದುರೆಯು ಬೆದರುವದು ಸ್ವಾಭಾವಿಕ. ಆದರೆ ಸಾರಥಿಯು ಅದರ ಕಡಿವಾಣವನ್ನು ಕೈಯಲ್ಲಿ ಹಿಡಿದು ಮುನ್ನಡೆಸುವ ಕಾರ್ಯದಲ್ಲಿ ತೊಂದರೆ ಸಹಿಸಬಹುದು. ಆದರೆ ಮಾನಸ ಅಶ್ವವನ್ನು ರೂಢಿಗಿಳಿಸುವದಕ್ಕೆ ದೀರ್ಘಕಾಲಬೇಕು.

ಈ ದೀರ್ಘಕಾಲದಲ್ಲಿ ಸಾಧಕನು ಬೇಸರಗೊಳ್ಳಬಹುದು. ಸಾಧಕನು ದಕ್ಷನಾಗಿ ತನ್ನ ಕರ್ತವ್ಯದಲ್ಲಿ ನಿರತನಾಗಿ ನಡೆದರೆ ಮುನ್ನಡೆದರೆ ದೇವರು ಬರಿದಾದ ಹೃದಯದಲ್ಲಿ ತನ್ನ ಸ್ವರೂಪವನ್ನು ಪ್ರಕಟಗೊಳಿಸುವನು.

ನೀವು ದೇಹ ಭಾವನೆಯಲ್ಲಿ ವಿಶ್ವಭಾವನೆಯನ್ನು ಬೆಳೆಯಿಸಿಕೊಂಡು ಸಾಧನೆಮಾಡಿದರೆ ಕಾಲ ಭಾರವಾಗುವದು. ಪ್ರಜ್ಞಾ ಮೂಢವಾಗುವದು.

ಧ್ಯೇಯ ದೃಶ್ಯವಲ್ಲ. ಅದನ್ನು ದೃಶ್ಯ ವಸ್ತುವಿನಂತೆ ತೋರಿಸುವದು ಸಾಧ್ಯವಿಲ್ಲ. ಸಾಧಕನು ಸಾಧನೆಯಲ್ಲಿ ಮೆಲ್ಲ, ಮೆಲ್ಲನೆ ಹೆಜ್ಜೆ ಇಡುತ್ತ ಸಾಧಿಸುತ್ತ ಹೋಗುತ್ತಾನೆ. ಕ್ರಮೇಣ ಅವನಿಗೆ ಅರಿವು ಆಗುವುದು.

ಅನುಭವವು, ಅನುಭಾವ್ಯವಾಗಬೇಕಾದರೆ ಸ್ವಯಮೇವ.

ಹದಿಮೂರು

೭-೫-೧೯೭೬

ನಾಳೆಯೇ ಹದಿನೆಂಟನೆಯ ತಾರೀಖಿನ ದಿನದವರೆಗೆ ನೀವು ಕ್ರಮಿಸಿದ ದೂರ ಎಪ್ಪತ್ತುನಾಲ್ಕು ಮೈಲುಗಲ್ಲು ನಡೆದು ಬಂದಂತಾಗುವದು. ಇನ್ನೂ ಈ ದಾರಿ ಬಹಳ ದೂರವಾಗಿಯೂ. ಅಂಕುಡೊಂಕಾಗಿಯೂ ಇದೆ. ಬಹಳ ಎಚ್ಚರದಿಂದ ಪಯಣಿಸಬೇಕು. ಚಿಕ್ಕ ದೊಡ್ಡ ದಾರಿಗಳೂ ಮಗ್ಗಲಿಗೆ ಉಂಟು. ಆದರೂ ಮಧ್ಯಮಮಾರ್ಗವನ್ನು ತ್ಯಜಿಸಬಾರದು. ನಿಮ್ಮ ಮಾನಸವು ಧ್ಯೇಯಕ್ಕಾಗಿ ದೂರ ಬಂದಿರುವದು ಸತ್ಯ. ಆದರೂ ನಾವು ನಡೆದಂತೆ ನಮ್ಮ ನೆರಳು ನಮ್ಮ ಮುಂದೆಯೇ ಹೋಗುವಂತೆ. ಹೀಗೆ ಹೋದರೆ ಧ್ಯೇಯವು ಗಗನ ಕುಸುಮವೇ ಸರಿ. ನಿಮ್ಮ ನೆರಳನ್ನು ನೀವು ಹಿಂದೆ ಹಾಕಬೇಕಾದರೆ ತಿರುಗಿ ನಿಂತರೆ ಸಾಕು. ನೆರಳು ಹಿಂದಾಯಿತು ಪ್ರಕಾಶ ಬಂದಿತು. ಈ ಅರಿವು ಸರಳರೇಖೆಯಲ್ಲಿ ಹೋಗಬೇಕು. ಈ ರೇಖೆಯು ಎಡದಲ್ಲಿ ಅತಿ ಆಳವಾದ ಕೊಳ್ಳ. ಬಲದಲ್ಲಿ ಬಹು ಎತ್ತರವಾದ ಪರ್ವತ ಶಿಖರ. ಜಾರಿದರೆ ಕೊಳ್ಳ; ಏರಿದರೆ ಇಷ್ಟ ವಸ್ತುವು; ಏರುವುದು ಕಷ್ಟ ಜಾರಿದರೆ ತೀರಿತು ನಮ್ಮ ಆಯುಷ್ಯ. ಆದರೂ ಧೃತಿಗೆಡಬಾರದು.

# ಸ್ಮರಣೆಯು ಸಂಗ್ರಹ

ಶ್ರೀ ಶಾಂತವೀರ ಮಹಾಸ್ವಾಮಿಗಳು ತಮ್ಮ ಅನುಭವವನ್ನು ಸ್ಮರಣೆಯಿಂದ ಹೇಳಿದ್ದನ್ನು "ಸ್ಮರಣೆಯ ಸಂಗ್ರಹ" ಎಂಬ ಹೆಸರಿನಿಂದ ಈ ಕೆಳಗೆ ಕೊಡಲಾಗಿದೆ. ವಿವಿಧ ಮಹತ್ವದ ವಿಷಯಗಳು ಅದರಲ್ಲಿ ಅಡಕವಾಗಿರುವವು.

೧. ಪ್ರವೃತ್ತಿ, ನಿವೃತ್ತಿ ಎಂಬುವಾಗಿ ಮಾನವರ ಎರಡು ಮಾರ್ಗಗಳು. ಸಾತ್ವಿಕ ಜೀವಿಗಳು ನಿವೃತ್ತಿ ಪರವಾಗಿಯೂ ರಾಜಸ, ತಾಮಸ ಜೀವಿಗಳು ಪ್ರವೃತ್ತಿ ಪರವಾಗಿಯೂ ಇರುವರು.

೨. ಜೀವನಯಾತ್ರೆ ಸಾಗಿಸುತ್ತಿರುವಾಗ ಮುಂದೆ, ಮುಂದೆ ಹೋದಂತೆ ಆಯಾ ಪ್ರಸಂಗಗಳಲ್ಲಿ ಆಯಾ ಕಾರ್ಯ ಮಹತ್ವವು.

೩. ಜೀವನ ಪಥದಲ್ಲಿ ಬಂದ ಪ್ರಸಂಗಗಳನ್ನು ಎದುರಿಸಿ ವಿವೇಕದಿಂದ, ಧೀರತನದಿಂದ ಮುಂದುವರಿಯಬೇಕು.

೪. ಸತ್ಯ, ಮಿಥ್ಯಗಳನ್ನು ವಿಂಗಡಿಸುವ ಶಕ್ತಿಯೇ ವಿವೇಕ: ಒಂದು ಪದಾರ್ಥವನ್ನು ವಿಂಗಡಿಸಿ ಅರಿಯುವದೇ ವಿವೇಕ.

೫. ಕರ್ಮ, ಭಕ್ತಿ, ಜ್ಞಾನ ಇವು ಮೂರೂ ಒಂದಕ್ಕೊಂದು ಪೋಷಕವಾಗಿವೆ. ಕರ್ಮಅಷ್ಟದಾರಿ ಹಿಡಿಯದಂತೆ ಜ್ಞಾನವು ತಿಳಿಸಿಕೊಡುತ್ತದೆ. ಭಕ್ತಿಯು ಅತ್ಯಂತ ಸಾತ್ವಿಕವಾದ ಸೂಕ್ಷ್ಮ ಕ್ರಿಯೆ.

೬ ಸಾಧನಾವಸ್ಥೆಯಲ್ಲಿ ಪ್ರಥಮದಲ್ಲಿ ಕರ್ಮ ಪ್ರಧಾನ: ನಂತರ ಭಕ್ತಿ ಪ್ರಧಾನ.

೭. ಜನರನ್ನು ಸನ್ಮಾರ್ಗದಲ್ಲಿ ಒಯ್ಯುವ ಶಕ್ತಿ, ಅಥವಾ ಸತ್ಪಥದಲ್ಲಿ ನಡಿಸುವ ಶಕ್ತಿಯೇ ನೀತಿ.

೮. ಹಿಂದೂಧರ್ಮದ ಎಲ್ಲ ಶಾಸ್ತ್ರಗಳು ಪುನರ್ಜನ್ಮವನ್ನು ಒಪ್ಪುವವು.

೯. ಯಾವನಿಗೆ ಮನಶ್ಶಾಂತಿ ಕಲಕಾಗಿರುವುದೋ ಅದನ್ನು ಶುದ್ಧಮಾಡಿಕೊಳ್ಳಲು ಆತನೆ ಹೊಣೆಗಾರ. ಆಶೆ ಆಮಿಷಗಳೇ ಶಾಂತಿ ಭಂಗಕ್ಕೆ ಕಾರಣ. ಆತ್ಮೋದ್ಧಾರ ಮಾಡಿಕೊಳ್ಳಲು ಆರಂಭಿಸಿದರೆ ಮನಶ್ಶಾಂತಿ ಲಭಿಸುವದು.

೧೦. ಒಮ್ಮೆ ಶಾಂತಿಯು ಹೃದಯದಲ್ಲಿ ನೆಲೆಯೂರಿ ನಿಂತ ಕೂಡಲೇ ಅಷ್ಟಕ್ಕೆ ಬಿಟ್ಟರೆ ನಡೆಯದು. ಜೀವನದಲ್ಲಿ ಪುನಃ,ಪುನಃ ಶಾಂತಿ ಕಲಕುವದು.

೧೧. ಶಮ, ಶಾಂತಿ ಬಹೀರಿಂದ್ರಿಯ ನಿಗ್ರಹ: ದಮ, ದಾಂತಿ ಅಂತರಿಂದ್ರಿಯ ನಿಗ್ರಹ. ಕೇವಲ ಬಹೀರಿಂದ್ರಿಯ ನಿಗ್ರಹ ಮಾಡಿದರೆ ಸಾಲದು.

೧೨. ಮಾನವನು ಜಡವಾದ ಕಲ್ಲಿನಲ್ಲಿ ಶ್ರದ್ಧೆಯನ್ನಿಟ್ಟರೆ ಅವನ ಇಷ್ಟಾರ್ಥ ಸಿದ್ಧಿಯಾಗುವುದು ಪರಂಪರೆಯಿಂದ ಅನುಭವಕ್ಕೆ ಬಂದ ಮಾತಾಗಿದೆ. ಆದರೆ ಅದೇ ಶ್ರದ್ಧೆಯನ್ನು ಒಪ್ಪು ಸಜೀವ ಮಾನವನಲ್ಲಿ ಇರಿಸಿದರೆ ಇಷ್ಟಾರ್ಥ ಸಿದ್ಧಿಸದೆ ಇರದು.

೧೩. ಈ ವಿಶ್ವದಲ್ಲಿ ಮಾನವನಿಗೂ ಮಾನವೇತರ ಪ್ರಾಣಿಗೂ ಇರುವ ಭೇದವೆಂದರೆ ಹೃದಯದ ಅಸ್ತಿತ್ವ, ಹಾಗೂ ಹೃದಯದ ನಾಸ್ತಿತ್ವ. ಅಂದರೆ ಮಾನವನಿಗೆ ಹೃದಯವಿದೆ. ಮಾನವೇತರ ಅನ್ಯಪ್ರಾಣಿಗಳಿಗೆ ಹೃದಯವಿಲ್ಲ.

೧೪. ಜಗತ್ತಿನಲ್ಲಿ ಸಮಸ್ತ ಜೀವಕೋಟಿಯಲ್ಲಿ ಮಾನವನೇ ಅತಿ ಮೌಲ್ಯಕ್ಕೆ ಬರಬೇಕಾದರೆ, ಉಳಿದ ಪ್ರಾಣಿಗಳಿಗಿಂತ ಮಾನವನಿಗೆ ದೇವರು ನೀಡಿರುವ ಇಂದ್ರಿಯ ಸೌಕರ್ಯವೇ ಒಂದು ಪ್ರಬಲ ಕಾರಣ.

೧೫. ನನ್ನನ್ನು ಜನ ಸುಮ್ಮನೆ ದೊಡ್ಡವನೆಂದು ಗಣಿಸುವರು. ಗಾಜಿನ ತುಂಡು ರತ್ನದ ಆಶ್ರಯದಲ್ಲಿದ್ದರೆ ಅದೂ ರತ್ನದಂತೆ ಬೆಳಗುತ್ತದೆ. ಆದರೆ ಆ ಪ್ರಕಾಶ ಕಾಜಿನದಲ್ಲ; ರತ್ನದ್ದು. ಇದರಂತೆ ಈ ಘಟವು ಮಹಾ ತಪಸ್ವಿಗಳಾದ ಗುರುಪಾದೇಶ್ವರ ತಪೋಭೂಮಿಯ ಆಶ್ರಯದಲ್ಲಿ ನಿಂತ ಕಾರಣ ಅದಕ್ಕೆ ಬಂದಿರುವ ಪೂಜ್ಯತೆ ಕೀರ್ತಿ ಆ ತಪಸ್ವಿಯದೆ.

೧೬. ನಮ್ಮ ಕಾಲು ಎಲ್ಲರ ಕಾಲಿನಂತೆಯಿವೆ. ಆದರೆ ನಮ್ಮ ಕಾಲಿನ ಮೇಲಿನ ನೀರು ಪವಿತ್ರವೆನಿಸಿತು, ಪವಾಡ ಮೆರೆಯಿಸಿತು. ಆದರೆ ಸಾಮಾನ್ಯರ ಕಾಲ ಮೇಲಿನ ನೀರು ಏಕೆ ಪಡೆಯಲಿಲ್ಲ? ಏಕೆಂದರೆ ಗುರುವಾದ ವ್ಯಕ್ತಿಯ ಕಾಲಿನಲ್ಲಿ ಶ್ರದ್ಧೆ ಇದೆ. ಆ ಶ್ರದ್ಧೆಯೇ ಅವರಿಗೆ ಫಲವನ್ನು ನೀಡಿದೆ.

೧೭. ಶ್ರದ್ಧೆ, ಭಕ್ತಿ, ನೀಲಾಕಾಶ ನೋಡುವದು ನನ್ನ ಮನಶ್ಶಾಂತಿಗೆ ಮೂಲಕಾರಣವಾಗಿವೆ.

೧೮. ಸ್ವಂತದ ರಕ್ತ ಸಂಬಂಧಿಗಳನ್ನು ದೂರೀಕರಿಸಿ, ಸರ್ವ ಸಂಬಂಧಿಯಾಗುವವರಲ್ಲಿ ಸ್ವಾಮಿತ್ವದ ಶ್ರೇಷ್ಠತೆ ಇದೆ.

೧೯. ಲಾಂಛನ ಬೇಕೇ ಬೇಕು; ಆದರೆ ಆಂತರಿಕ ಬದಲಾವಣೆಯಾಗದಿದ್ದರೆ ಆ ಲಾಂಛನಕ್ಕೆ ಯಾವ ಅರ್ಥವಿಲ್ಲ.

೨೦. ಭೋಗ್ಯ ವಸ್ತುಗಳು ಬೆಳೆದ ಈ ಕಾಲದಲ್ಲಿ ಮಾನಸಿಕ ಬ್ರಹ್ಮಚರ್ಯ ಪರಿಪಾಲಿಸುವದು ತೀರ ಕಷ್ಟ. ಆದರೆ ಶಾರೀರಕ ಬ್ರಹ್ಮಚರ್ಯವನ್ನಾದರೂ ಪಾಲಿಸುವದು ಸ್ವಾಮಿಗಳಾದವರ ಕರ್ತವ್ಯ.

೨೧. ದೇವ ಪೂಜೆಗೆ ಹೆಚ್ಚು ಸಾಹಿತ್ಯಗಳ ಸಂಗ್ರಹದ ಅವಶ್ಯಕ್ಕಿಂತ, ಮನಸ್ಸನ್ನು ಒಂದುಗೂಡಿಸಿ ಮಾಡುವ ಪೂಜೆ ಮಹತ್ವದ್ದು.

೨೨. ಜಪ-ತಪಗಳಲ್ಲಿ ಜೀವನವನ್ನೇ ಮುಡುಪಾಗಿಟ್ಟವರಿಗೆ ದೇವರ ದರ್ಶನವಾಗುವದು ಕಠಿಣವಾಗಿರುವಾಗ, ಏನೂ ಸಾಧನೆ ಮಾಡದವರಿಗೆ ಮೈಯಲ್ಲಿ ದೇವರು ಬರುವದೆಂದು ಹೇಳುವದು ಹಾಸ್ಯಾಸ್ಪದ.

೨೩. ಸಂಭಾವ್ಯ ಪವಾಡಗಳನ್ನು ನಂಬಬಹುದು; ಆದರೆ ಅಸಂಭಾವ್ಯ ಪವಾಡಗಳನ್ನು ನಂಬುವದು ಕಷ್ಟ. ಪವಾಡಗಳ ಮೇಲಿಂದ ಮಹಾಪುರುಷರನ್ನು ಅಳೆಯುವದು ಸರಿ ಅಲ್ಲ.

# ಎಡರು ಎದುರಿಸಿದ ವೀರರು

"ನಾಳೆ ಬಪ್ಪುದು ನಮಗಿಂದೇ ಬರಲಿ,
ಇಂದು ಬಪ್ಪುದು ನಮಗೀಗಲೇ ಬರಲಿ,
ಇದಕಾರಂಜುವರು, ಇದಕಾರಳುಕುವರು,
ಜಾತಸ್ಯ ಮರಣಂ ಧ್ರುವಂ ಎಂಬುದಾಗಿ
ನಮ್ಮ ಕೂಡಲ ಸಂಗಮದೇವ ಬರಹವ
ತಪ್ಪಿಸುವರೆ ಹರಿ ಬ್ರಹ್ಮಾದಿಗಳವಲ್ಲ."

ಶ್ರೀ ಶಾಂತವೀರ ಮಹಾಸ್ವಾಮಿಗಳು ಒಂದುಸಲ "ನನ್ನ ಜೀವನದಲ್ಲಿ ದಿ. ವೀರನಗೌಡರಿದ್ದಾಗ ಕಳೆದ ಹತ್ತು ವರುಷ ನೆಮ್ಮದಿಯ ಕಾಲ; ಉಳಿದ ಎಪ್ಪತ್ತು ವರುಷಗಳು ಸಾಮಾನ್ಯವಾಗಿ ಕಷ್ಟದ ಜೀವನ." ಎಂದು ಹೇಳಿದ್ದರು.

ಆ ಎಪ್ಪತ್ತು ವರುಷಗಳ ಕಷ್ಟದ ಘಟನೆಗಳೇ ಅವರನ್ನು ಮಹಾಪುರುಷರನ್ನಾಗಿ ಮಾಡಿದವು. ಕಾಸದೆ ಚಿನ್ನವಾಗದು; ಸಾಣೆಹಿಡಿಯದೆ ರತ್ನವಾಗದು. ಮಹಾಸ್ವಾಮಿಗಳು ಅನುಭವಿಸಿದ ಕೆಲ ಕಹಿ ಘಟನೆಗಳೇ ಅವರನ್ನು ಇಂದಿನ ಪೂಜ್ಯ ಸ್ಥಾನಕ್ಕೆ ಏರಿಸಲು ಕಾರಣವಾದವೆಂದು ಹೇಳಬಹುದು.

ವೀರನಗೌಡರು ದಿವಂಗತರಾದ ನಾಲ್ಕೇ ವರುಷಗಳಲ್ಲಿ ಮಹಾಸ್ವಾಮಿಗಳು ಮಠ ಬಿಟ್ಟು ಹರಳೇಶ್ವರ ಕ್ಷೇತ್ರಕ್ಕೆ ಕಾಳರಾತ್ರಿಯಲ್ಲಿ ಒಬ್ಬರೇ ಹೊರಟು ಹೋಗುವಂತಾಯಿತು. ಇದೊಂದು ಕಲ್ಪಿಸಲಾರದ ಘಟನೆ.

ಮರಳಿ ಮಠಕ್ಕೆ ಬಂದರೂ ನಾಲ್ಕೇ ವರ್ಷದಲ್ಲಿ ಇದ್ದ ವಿಸ್ತಾರವಾದ ಮಠ ಬಿಟ್ಟು ಊರ ಹೊರಗೆ ಭಕ್ತರು ಕಟ್ಟಿಸಿಕೊಟ್ಟ ಮಠದಲ್ಲಿ ೧೯೨೨ ರಿಂದ ೧೯೫೨ರ ವರೆಗೆ ಮೂವತ್ತು ವರುಷ ಪುನಃ ಒಂಟಿಯಾಗಿ ವಾಸಮಾಡಬೇಕಾಯಿತು.

ಹಿಂದಿನ ಶಾಂತವೀರ ಸ್ವಾಮಿಗಳು ತಮ್ಮ ಕೊನೆ ಕಾಲದಲ್ಲಿ ವ್ಯಾವಹಾರಿಕವಾಗಿ ಬಬಲೇಶ್ವರದ ಗುರುಪಾದ ಮರಿದೇವರನ್ನು ಮಠಕ್ಕೆ ತೆಗೆದುಕೊಂಡರು; ಆದರೂ ಮಠದ ಅಧಿಕಾರವನ್ನು ತರ್ಲ ಗಟ್ಟದ 'ರುದ್ರ' ಮರಿದೇವರಿಗೆ ಮಾಡಬೇಕೆಂದು ಭಕ್ತಾದಿಗಳಿಗೆ ಹೇಳಿ ಶಿವಾಧೀನರಾದರು. ಅದರಂತೆ ಅವರನ್ನು ಕರೆತಂದು ೧೯೦೫ರಲ್ಲಿ ಮಠದ ಪಟ್ಟಾಧಿಕಾರಿಗಳೆಂದು ನೇಮಕ ಮಾಡಿ ಅವರಿಗೆ 'ಶಾಂತವೀರ ಸ್ವಾಮಿ'ಗಳೆಂಬ ನಾಮಕರಣ ಮಾಡಲಾಯಿತು.

ಅಸಮಾಧಾನಗೊಂಡ ಬಬಲೇಶ್ವರದ ಗುರುಪಾದ ಮರಿದೇವರು ಸುಮ್ಮನೆ ಕೂಡಲಿಲ್ಲ. ಅವರು ಕೋರ್ಟಿನ ಕಟ್ಟೆ ಹತ್ತಿದರು. ಈ ವಿಷಯವಾಗಿ ೧೯೨೭ರಲ್ಲಿ ಕೋರ್ಟ ವ್ಯವಹಾರ ನಡೆಯಿತು. ಮಠದ ವ್ಯಾಜ್ಯವು ೧೯೩೧ರಲ್ಲಿ ಮುಕ್ತಾಯವಾಗಿ ಶ್ರೀ ಶಾಂತವೀರ ಸ್ವಾಮಿಗಳೇ ಆದರ ಅಧಿಪತಿಗಳೆಂದು ನಿರ್ಣಯವಾಯಿತು. ಆದರೂ ಕೋರ್ಟಿಗೆ ಹೋಗಿ ನಿರಾಶೆ ಹೊಂದಿದವರ ಕಿರುಕುಳ ಕೆಲ ವರುಷ ತಪ್ಪಲಿಲ್ಲ. ಹೇಗಾದರೂಮಾಡಿ ಅವರನ್ನು ಸ್ಥಾನಾಂತರಗೊಳಿಸಬೇಕೆಂದು ನಾನಾ ರೀತಿ ಪ್ರಯತ್ನಗಳು ನಡೆದವು. ಶ್ರೀ ಶಾಂತವೀರ ಸ್ವಾಮಿಗಳು ಕೆಲವು ಕಾಲ ಶಾಂತ ರೀತಿಯಿಂದಲೇ ಸಹಿಸುತ್ತ ಬಂದರು. ಆದರೂ ದುಷ್ಟಶಕ್ತಿಗಳು ಬಿಡಲಿಲ್ಲ.

ಬಬಲೇಶ್ವರದಲ್ಲಿಯ ಬೇಗೆಯಲ್ಲಿ ತಾವು ಬೇಯುವದು ಬೇಡ, ದೂರ ಎಲ್ಲಿಗಾದರೂ ಹೋಗಿ
ಶಾಂತ ರೀತಿ ತಮ್ಮ ಆಧ್ಯಾತ್ಮ ಜೀವನ ಸಾಗಿಸಬೇಕೆಂದು ಸ್ವಾಮಿಗಳು ನಿರ್ಧರಿಸಿದರು. ಗಂಭೀರ
ಸುಮಾರಿಗೆ ಅವರು ಒಂದು ದಿವಸ ತಮಗೆ ಬೇಕಾದ ಶಿವಪೂಜೆ ಸಾಮಾನು, ಹಾಸಿಗೆ ಹೊದಿಕೆ ತೆಗೆದು
ಕೊಂಡು ಧರಿಸಿದ ಬಟ್ಟೆಯೊಂದಿಗೆ ಒಬ್ಬೊಂಟಿಗರಾಗಿ ವಿಜಾಪುರಕ್ಕೆ ತೆರಳಿ ಶ್ರೀ ಲಾಳಿವೀರಪ್ಪನವರಲ್ಲಿ
ರಾತ್ರಿ ವಾಸ್ತವ್ಯಮಾಡಿ, ತಾವು ಬೆಳಿಗ್ಗೆ ಬೇರೆಕಡೆಗೆ ಪ್ರಯಾಣ ಮಾಡುವದಾಗಿ ತಿಳಿಸಿದರು.

ವೀರಪ್ಪನವರು ಯಾವ ಸೇವಕರಿಲ್ಲದೆ ಶ್ರೀಮಹಾಸ್ವಾಮಿಗಳು ಆಗಮಿಸಿದ್ದು, ಮತ್ತೆ ಮರುದಿನ
ಮುಂದೆ ಪ್ರಯಾಣ ಮಾಡುವ ವಿಚಾರ ಕೇಳಿ ಅವರಿಗೆ ದಿಕ್ಕೇ ತೋಚದಾಯಿತು. ಆದರೆ ಶ್ರೀ ಮಹಾ
ಸ್ವಾಮಿಗಳು ತಾವು ಬಂದ ಉದ್ದೇಶವನ್ನು ಎಷ್ಟು ವಿಚಾರಿಸಿದರೂ ತಿಳಿಸಲೇ ಇಲ್ಲ. ತೀರ ಉದ್ವಿಗ್ನಾ
ವಸ್ಥೆಯಲ್ಲಿಯೇ ಇದ್ದರು.

ವಿಜಾಪುರಕ್ಕೆ ಶ್ರೀ ಮಹಾಸ್ವಾಮಿಗಳು ಬಂದ ಸುದ್ದಿ ಅಲ್ಲಿಗೆ ಆಗಮಿಸಿದ ಅವರ ಅತ್ಯಂತ ನಿಷ್ಠಾವಂತ
ರಾದ ಬಸವಲಿಂಗ ಶಾಸ್ತ್ರಿಗಳು ದ್ಯಾವಾಪುರ, ಎಡಹಳ್ಳಿ ದೇಸಾಯರ ಕಾರಭಾರಿ ಗಳಾದ ಬುದ್ಧಯ್ಯನವರು
ಪುರಾಣಿಕ ಅವರಿಗೆ ತಿಳಿಯಿತು. ಕೂಡಲೆ ಅವರು ಸ್ವಾಮಿಗಳ ಕಡೆಗೆ ಬಂದು ವಿಚಾರಿಸಿದರೂ ಯಾವ
ವಿಷಯವನ್ನು ಸ್ವಾಮಿಗಳು ತಿಳಿಸಲಿಲ್ಲ. ಅವರೂ ಚಿಂತಾಕ್ರಾಂತವಾಗಿ ಬಿಟ್ಟರು. ಅಷ್ಟರಲ್ಲಿ
ವಿಜಾಪುರದ ಸಹಾಯಕ ಕಲೆಕ್ಟರಾದ ಅದರಗುಂಚಿ ಹಿರೇಮಠ ಸಾಹೇಬರಿಗೆ ಮಹಾಸ್ವಾಮಿಗಳ
ಆಗಮನದ ಸುದ್ದಿ ತಿಳಿದು ಆದಿನ ಪ್ರಸಾದಕ್ಕೆ ತಮ್ಮ ಮನೆಗೆ ಬರಬೇಕೆಂದು ತಮ್ಮ ಸೇವಕನ ಮುಖಾಂತರ
ಹೇಳಿಕಳುಹಿಸಿದರು. ಶ್ರೀ ಮಹಾಸ್ವಾಮಿಗಳು ಅವರ ಮನೆಗೆ ಪ್ರಸಾದಕ್ಕಾಗಿ ಹೋಗಲು ಸಮ್ಮತಿಸದೆ,
ತಾವು ಮುಂದೆ ಪ್ರಯಾಣ ಮಾಡುವ ವಿಚಾರವನ್ನೇ ವ್ಯಕ್ತಪಡಿಸಿದರು. ಆದರೆ ಬಸವಲಿಂಗ
ಶಾಸ್ತ್ರಿಗಳು ಬುದ್ಧಯ್ಯಪುರಾಣಿಕ ಅವರ ಒತ್ತಾಯದಿಂದ ಶ್ರೀ ಹಿರೇಮಠ ಸಾಹೇಬರ ಮನೆಗೆ ಹೋಗಲು
ಮಾತ್ರ ಒಪ್ಪಿದರು.

ಹಿರೇಮಠ ಸಾಹೇಬರ ಮನೆಯಲ್ಲಿ ಮೇಲ್ಕಂಡ ಮೂವರು ಮಹನೀಯರು ಪರಿ ಪರಿಯಿಂದ
ವಿಚಾರಿಸಿದರೂ ಅವರು ತಮ್ಮ ಮನದಿಂಗಿತವನ್ನು ತಿಳಿಸಲೇ ಇಲ್ಲ. ಅಷ್ಟೇ ಅಲ್ಲ; "ತಾವು
ಪ್ರಸಾದ ಕೂಡ ಸ್ವೀಕರಿಸುವುದಿಲ್ಲ; ನನಗೆ ಹೋಗಲು ತಡೆಯಬೇಡಿರಿ" ಎಂದು ಸ್ಪಷ್ಟವಾಗಿ ಸಂತಾಪ
ದಿಂದ ಹೇಳಿಯೇ ಬಿಟ್ಟರು.

ಈ ಮಾತನ್ನು ಕೇಳಿ ಎಲ್ಲರೂ ದಿಙ್ಮೂಢರಾದರು. ಮಹಾಸ್ವಾಮಿಗಳನ್ನು ಕೈ ಬಿಡಲು
ಅವರು ಯಾರೂ ಸಿದ್ಧರಿರಲಿಲ್ಲ. ತಮ್ಮಲ್ಲಿ ಬಂದು ನಿಶ್ಚಿಂತೆಯಿಂದಿರಲು ಎಲ್ಲರೂ ಬಿನ್ನವಿಸಿ
ಕೊಂಡರು, ಆದರೂ ಉಪಯೋಗವಾಗಲಿಲ್ಲ.

ಆಗ ಅದರಗುಂಚಿ ಹಿರೇಮಠ ಸಾಹೇಬರು "ತಾವು ಯಾರ ಕಡೆಗೆ ಹೋಗುವದು ಬೇಡ;
ವಿಜಾಪುರದಲ್ಲಿಯ ಮುಳ್ಳಗಿಸಿ ಹೊರಗಿನ ಮಠದಲ್ಲಿ ನಿಶ್ಚಿಂತೆಯಾಗಿರಬೇಕು; ತಮ್ಮ ನೆಮ್ಮದಿಗೆ ಧಕ್ಕೆ
ಆಗದಂತೆ ನೋಡಿಕೊಳ್ಳುತ್ತೇವೆ" ಎಂದು ಸ್ವಾಮಿಗಳಲ್ಲಿ ಅರಿಕೆ ಮಾಡಿಕೊಂಡು ಒಪ್ಪಿಸಿ ಆ ಮಠ
ದಲ್ಲಿರಲು ಎಲ್ಲ ವ್ಯವಸ್ಥೆ ಮಾಡಿದರು.

ಆ ಮಠದಲ್ಲಿ ಶ್ರೀ ಮಹಾಸ್ವಾಮಿಗಳು ೫–೬ ತಿಂಗಳು ಶಾಂತವಾಗಿ ಕಾಲಕಳೆದರು. ಮನಸ್ಸಿನ
ಉದ್ವಿಗ್ನತೆ ಕಡಿಮೆ ಆಯಿತು. ಇತ್ತ ಬಬಲೇಶ್ವರ ವಾತಾವರಣ ಕೂಡ ತಿಳಿಯಾದುದು ತಿಳಿದು
ಮಹಾಸ್ವಾಮಿಗಳು ಬಬಲೇಶ್ವರಕ್ಕೆ ಮರಳಿ ಆಗಮಿಸಿದರು.

ಶ್ರೀ ಮಹಾಸ್ವಾಮಿಗಳು ೧೯೫೦ರಲ್ಲಿ ಒಂದು ರಾತ್ರಿ ಬಬಲೇಶ್ವರ ಮಠದ ಕಟ್ಟೆಯಮೇಲಿಂದ ಬಿದ್ದು ಬಲದೊಡೆ ಮುರಿದಿತ್ತು. ಮರುದಿನ ವಿಜಾಪುರಕ್ಕೆ ಕರೆತಂದು ಉಪಚರಿಸಲಾಯಿತು. ಆಗ ಅದರಿಂದ ಗುಣಮುಖರಾಗಿ ಮರಳಿ ಮಠಕ್ಕೆ ಆಗಮಿಸಿದರು.

ಶ್ರೀ ಮಹಾಸ್ವಾಮಿಗಳು ೧೯೬೩ರಲ್ಲಿ ಹರಳೇಶ್ವರ ಕ್ಷೇತ್ರದಿಂದ ಒಂದು ಕಾರ್ಯಕ್ರಮದ ನಿಮಿತ್ತ ಬಬಲೇಶ್ವರ ಮಠಕ್ಕೆ ಬಂದಾಗ ರಾತ್ರಿ ಪಡಸಾಲೆಯಿಂದ ಬಿದ್ದು ಅವರಿಗೆ ಭಾರಿ ಪೆಟ್ಟು ತಗಲಿತು. ವಿಜಾಪುರ, ಸೊಲ್ಲಾಪುರಗಳಲ್ಲಿ ಉಪಚಾರ ಹೊಂದಿದರೂ ನಡೆದಾಡಲು ಅಸಮರ್ಥರಾಗಿಯೇ ಬಿಟ್ಟರು. ಮಠದ ಮುಂದಿನ ಅಧಿಕಾರಿಗಳನ್ನು ಅವಸರದಿಂದ ಮಾಡಬೇಕಾಯಿತು. ಆಗ ವಿಜಾಪುರ ಡಾ. ಹಿರೇಮಠರವರ ಮಗನಾದ ಗುರುಕುಮಾರ ಎಂಬವನಿಗೆ ಮಠದ ಅಧಿಕಾರ ೧೯೬೩ರಲ್ಲಿ ವಹಿಸಿಕೊಟ್ಟು ತಾವು ಪುನಃ ಹರಳೇಶ್ವರ ಕ್ಷೇತ್ರಕ್ಕೆ ಹೋಗಿಬಿಟ್ಟರು.

ಮುಂದೆ ಕೆಲಕಾಲದನಂತರ ಡಾ. ಹಿರೇಮಠರು ತೀರಿಕೊಂಡ ಬಳಿಕ ಅವರ ಪತ್ನಿ, ಮಠದ ಅಧಿಕಾರ ಹೊಂದಿದ ಪುತ್ರರು ಶ್ರೀ ಶಾಂತವೀರ ಸ್ವಾಮಿಗಳತ್ತ ೧೯೭೪ರಲ್ಲಿ ಬಂದು ಮಠದ ಅಧಿಕಾರ ಸ್ಥಾನದಿಂದ ನಮ್ಮನ್ನು ಮುಕ್ತಮಾಡಬೇಕೆಂದು ತಮ್ಮ ಅನಿವಾರ್ಯ ಪರಿಸ್ಥಿತಿ ಮೂಲಕ ಬಹಳ ಬಿನ್ನವಿಸಿಕೊಂಡರು. ಅವರ ದೀನ ಕೋರಿಕೆಯನ್ನು ಅರಿತು ಶ್ರೀಗಳು ಅದಕ್ಕೆ ಅವಕಾಶ ಕಲ್ಪಿಸಿ ಕೊಟ್ಟರು.

ಮುಂದೆ ಕೆಲ ದಿನಗಳಲ್ಲಿ ಊರ ಹಿರಿಯರ ಸಮ್ಮತಿಯಿಂದ ಬಬಲೇಶ್ವರದವರಾದ ಶ್ರೀಮುತ್ತಪ್ಪ ಶಿವಲಿಂಗಪ್ಪ ಸಂಕಣ್ಣನವರ ಇವರ ಚಿರಂಜೀವರಾದ 'ಅರವಿಂದ'ನಂಬ ೨೮ ವಯಸ್ಸಿನ ವಿದ್ಯಾವಂತ ತರುಣರನ್ನು ತಮ್ಮ ಉತ್ತರಾಧಿಕಾರಿಗಳೆಂದು ಅಧಿಕಾರ ವಹಿಸಿಕೊಟ್ಟು ಅವರಿಗೆ ೧೯೭೪ರಲ್ಲಿ ಮಹಾದೇವ ಸ್ವಾಮಿಗಳೆಂಬ ನಾಮಕರಣ ಮಾಡಲಾಯಿತು. ಇವರು ಬಬಲೇಶ್ವರ ಹಿರೇಮಠದ ಏಳನೆಯ ಸ್ವಾಮಿಗಳಾಗಿರುವರು. ಮಾಹೇಶ್ವರ ದೀಕ್ಷೆ, ಪಟ್ಟಾಧಿಕಾರ ಮೊದಲಾದ ಧಾರ್ಮಿಕ ಕಾರ್ಯಕ್ರಮಗಳೆಲ್ಲ ಜಂಬಗಿಯ ಶ್ರೀ ಪಟ್ಟಾಧ್ಯಕ್ಷರಿಂದ ವಿಧಾನ ಪೂರ್ವಕವಾಗಿ ನೆರವೇರಲ್ಪಟ್ಟವು. ಆ ಸಮಾರಂಭವು ಬಬಲೇಶ್ವರ ಇತಿಹಾಸದಲ್ಲಿಯೇ ಅಭೂತಪೂರ್ವವಾದುದೆಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಮಹಾಪುರುಷರ ಬದುಕನ್ನು ನೋಡಿದರೆ ಅವರ ಜೀವನಗಳಲ್ಲಿ ಅನೇಕ ಸಿಹಿ, ಕಹಿ ಘಟನೆಗಳು ನಡೆದಿರುವುದು ಕಂಡುಬರುತ್ತವೆ. ಅದರಂತೆ ಶ್ರೀ ಶಾಂತವೀರ ಮಹಾಸ್ವಾಮಿಗಳ ದೀರ್ಘ ಜೀವನ ದಲ್ಲೂ ಅನೇಕ ಸಿಹಿ, ಕಹಿ ಘಟನೆಗಳು ಒದಗಿದವು. ಆದರೂ ಅವರು ಅವನ್ನು ಅವರದೇ ಆದ ರೀತಿಯಲ್ಲಿ ಮೆಟ್ಟಿ ಮುಂದೆ ಸಾಗಿದರೆಂದು ಹೇಳಬಹುದು.

ಮಹಾಸ್ವಾಮಿಗಳು ೧೯೫೫ರಲ್ಲಿ ಪುನಃ ಎರಡನೆಯ ಸಲ ಹರಳೇಶ್ವರ ಕ್ಷೇತ್ರಕ್ಕೆ ಹೋದರು. ಆಗ ಶೇಗುಣಶಿಯ ರಾಮನಗೌಡ ಪಾಟೀಲರು ಶ್ರೀಗಳಿಗಾಗಿ ಒಂದು ಚಿಕ್ಕದಾದ ನಿವಾಂತ ಆಶ್ರಮ ಕಟ್ಟಿಸಿ ಆಶ್ರಯದಾತರಾದರು. ಆ ನಂತರ ಬಬಲೇಶ್ವರದ ಶ್ರೀಮತಿ ನೀಲಮ್ಮ ತಾಯಿ ಕಡಿಮನೆ ಇವರು ಒಂದು ಕಾಂಕ್ರೀಟ್ ಕಟ್ಟಡ ಅದರ ಹೊಂದಿಗೆ ಕಟ್ಟಿಸಿದರು. ಹಾಗೆಯೇ ಇರುತ್ತಿರಲು ಮುಂದೆ ಕೆಲವು ವರ್ಷಗಳನಂತರ ಅತ್ತಾಲಟ್ಟಿಯ ಸಿದ್ಧನಗೌಡರು ಶ್ರೀಗಳ ಶಿವಯೋಗ ಸಮಾಧಿ ಯನ್ನು ಸುಭದ್ರವಾಗಿ ಸುಂದರವಾಗಿ ಕಟ್ಟಿಸಿದರು. ಹೀಗೆ ಅವರು ಆ ಕಟ್ಟಡವಿಯಲ್ಲಿ ಹನ್ನೊಂದು ವರುಷ ಏಕಾಂತವಾಗಿ ಕಾಲಕಳೆದರು. ಪಡೆಯ ಬೇಕಾದುದನ್ನು ಪಡೆದರು. ನೀಡಬೇಕಾದುದನ್ನು ನೀಡಿದರು. ಆ ಪುಣ್ಯ ಪುರುಷರು. ಆನಂತರ ಮರಳಿ ಬಬಲೇಶ್ವರಕ್ಕೆ ಆಗಮಿಸಿದರು.

ಮಠದಲ್ಲಿ ೧೯೬೮ರಲ್ಲಿ ಉಗ್ರಾಣ ಕಟ್ಟಿಸಿ ಅಲ್ಲಿಯೇ ಅವರು ಈಗ ವಾಸಮಾಡುತ್ತಿರುವರು. ಸಮ್ಮುಖದಲ್ಲಿ ಗುರುಪಾದ ಶಿವಯೋಗಿಗಳ ಗದ್ದುಗೆ, ಗಣಾರಾಧನೆ ಕಾಲದಲ್ಲಿ ಪ್ರಸಾದ ಸಂಗ್ರಹಿಸಿಡುವ ದೊಡ್ಡ ಹೌದಿನಮೇಲೆ ಹಲಗೆಗಳನ್ನು ಹಾಕಿಸಿ ಅದರಮೇಲೆ ಅವರ ವಾಸ.

ಸ್ನಾನ, ಶಿವಾರ್ಚನ ಬೇರೆಕಡೆಗಾದರೂ ಭಕ್ತಾದಿಗಳಿಗೆ ದರ್ಶನ ಕೊಡುವದು ಅದೇ ಸ್ಥಾನದಲ್ಲಿ. ಸುಸಜ್ಜಿತವಾದ ಮಠವು ಅದರ ಹತ್ತಿರವೇ ಇದೆ; ಆದರೆ ಅತ್ತ ಕಡೆಗೆ ಅವರು ಹೋಗುವದು ತೀರ ವಿರಳ. ಅವರ ದೀರ್ಘ ಜೀವನದಲ್ಲಿ ಸುಮಾರು ಬಹುಭಾಗ ಮಠದ ಅಧಿಪತಿಗಳಾಗಿದ್ದರೂ ಅದರಿಂದ ದೂರಿದ್ದು ಸಾಗಿರುವದು, ಅವರ ತ್ಯಾಗ ಜೀವನದ ಸಂಕೇತ. ಆದರೂ ಮಠದ ಸ್ಥಾನಮಾನ ಕಾಯು ವದರಲ್ಲಿ ಅವರು ಅಲಕ್ಷ ಮಾಡಿಲ್ಲವೆಂಬುದಕ್ಕೆ ಎರಡುನೂರು ವರ್ಷಗಳ ಹಿಂದಿನ ಮಠ ತನ್ನ ಹೊಸತನ ದಲ್ಲಿಯೇ ಹೊಳೆಯುತ್ತ ಉಳಿದುದೇ ಸಾಕ್ಷಿ. ಅದೇ ಅವರ ವಿಶಾಲ ದೂರ ದೃಷ್ಟಿ.

ಅವರ ಕಣ್ಣು ಕಾಣದಂತಾದುದು ೧೯೫೮ರಲ್ಲಿ; ಇಪ್ಪತ್ತುನಾಲ್ಕು ವರ್ಷದ ದೀರ್ಘಕಾಲ. ಕಾಲು ನಡೆಯದಂತಾದುದು ೧೯೬೯ರಲ್ಲಿ. ಈಗ ಹದಿಮೂರು ವರ್ಷಗಳು ಗತಿಸಿವೆ. ಆದರೂ ಅವರು ಎಲ್ಲ ಚಟುವಟಿಕೆಗಳ ಮತ್ತು ಬಂದ ಭಕ್ತರಿಗೆ ಮಾರ್ಗದರ್ಶನ ಮಾಡುವ ಮೂಲಕೇಂದ್ರ ವಾಗಿದ್ದಾರೆ. ಎಲ್ಲ ಕೆಲಸಗಳ ನಿಯಮಿತವಾಗಿ ಸಕಾಲಕ್ಕೆ ಸಾಗುತ್ತವೆ. ಅದೇ ಅವರಲ್ಲಿ ಅಡಗಿದ ಆತ್ಮ ಜ್ಯೋತಿಯ ಪ್ರಭೆ.

ಹೊರಗಿನ ಮಠ ಅದರ ವಿಸ್ತೀರ್ಣವಾದ ಭೂಮಿ, ಬಾವಿಸಹಿತವಾಗಿ ಕಾಲೇಜಕ್ಕೆ ೧೯೬೧ರಲ್ಲಿ ಕಾಣಿಕೆಯಾಗಿ ಕೊಟ್ಟು, ಜನರಿಂದ ಬಂದುದನ್ನು, ಜನರಿಗೆ ನೀಡಿ ತಾವು ಮುಕ್ತರಾಗಿರುವರು.

ಮಠದ ಆವರಣದಲ್ಲಿರುವ ಗುರುಪಾದೇಶ್ವರ ಮಹಾಗದ್ದುಗೆಯನ್ನು ೧೯೫೪ರಲ್ಲಿ ಅಂದವಾಗಿ, ಭದ್ರವಾಗಿ ಪುನರುಜ್ಜೀವನಗೊಳಿಸಿದ್ದಾರೆ. ಅದಕ್ಕೆ ಆ ಕಾಲದಲ್ಲಿ ತಗಲಿದ ವೆಚ್ಚ ೨೨,೦೦೦ ರೂಪಾಯಿ ಗಳು. ಅದರ ಮುಂಭಾಗದಲ್ಲಿ ೧೯೭೩ರಲ್ಲಿ ಶ್ರೀ ಸ.ಜ. ಮಿರ್ಜಿಯವರು ತಮ್ಮ ತಾಯಿಯವರಾದ "ಶ್ರೀಮತಿ ದಾನಮ್ಮ ತಾಯಿ ಚನ್ನಪ್ರಭು ಮಿರ್ಜಿ ಇವರ ಸ್ಮರಣಾರ್ಥ ಸ್ಮಾರಕ ಮಂಟಪ"ವನ್ನು ೬,೦೦೦ ರೂಪಾಯಿ ವೆಚ್ಚದಲ್ಲಿ ರಚಿಸಿರುವರು. ಅದಕ್ಕೆ ಕೂಡ ಮಹಾಸ್ವಾಮಿಗಳ ಆಶೀರ್ವಾದವೇ ಕಾರಣ.

ಈ ಸ್ಮಾರಕ ಮಂಟಪದ ಮುಂಭಾಗದಲ್ಲಿ ೧೯೭೪ರಲ್ಲಿ ರಚಿತವಾಗಿರುವ ಭವ್ಯವಾದ "ಗುರು ಪಾದೇಶ್ವರ ಶಿವಾನುಭವ ಮಂಟಪ"ವು ಹಳ್ಳಿಯ ಮಟ್ಟದಲ್ಲಿ ಅತ್ಯಂತ ಮಹಾಸಾಧನೆ. ಅದಕ್ಕೆ ಈಗಾಗಲೇ ಸುಮಾರು ೬೦,೦೦೦ ರೂಪಾಯಿ ವೆಚ್ಚವಾಗಿದ್ದು ಅದು ಪೂರ್ತಿಗೊಳ್ಳಲು ಇನ್ನೂ ಮಾಡಬೇಕಾದ ಕೆಲಸಗಳು ಮುಂದುವರಿದಿವೆ. ಈ ಮಹಾ ಕೆಲಸಕ್ಕೆ ಮಹಾಸ್ವಾಮಿಗಳ ಮಾರ್ಗ ದರ್ಶನವೇ ಮೂಲ ಕಾರಣವಾಗಿದೆ.

ಯಾರಿಗೂ ಅರ್ಥವಾಗದ ಅವರ ಅಪಾರ ಆತ್ಮಶಕ್ತಿಯ ಪ್ರಭಾವ, ಅವರ ಕಾರ್ಯಗಳ ಮೂಲಕ ವ್ಯಕ್ತವಾದರೂ ಒಂದಕ್ಕೂ ತಮ್ಮ ಸಂಬಂಧವಿಲ್ಲದಂತೆ ಅಲಿಪ್ತರಾಗಿ ನಿರೀಕ್ಷರಂತೆ ಸಾಕ್ಷಿ ಪುರುಷ ರಂತೆ ಇದ್ದಾರೆ. ಶ್ರೀ ಶಾಂತವೀರ ಶಿವಯೋಗಿಗಳು.

## ಜೀವಂತ ವಿಶ್ವಕೋಶ!

ಬಬಲೇಶ್ವರ ಶ್ರೀ ಶಾಂತವೀರ ಸ್ವಾಮಿಗಳಿಗೆ ಈಗ ತೊಂಬತ್ತು ವಯಸ್ಸು. ಬಡಕಲ ದೇಹ. ಅವರ ನೇತ್ರೇಂದ್ರಿಯದ ಕೆಲಸ ನಿಂತು ಇಪ್ಪತ್ನಾಲ್ಕು ವರುಷವಾಗಿದೆ. ಸಂಚಾರ ಸ್ತಬ್ಧಗೊಂಡು ಹನ್ನೆರಡು ವರುಷವಾಗಿದೆ. ಆದರೂ ಮುಖದ ಆತ್ಮತೇಜ ಮಾಯವಾಗಿಲ್ಲ; ಅದು ಎಂದಿನಂತೆ ಪ್ರಫುಲ್ಲಿತವಾಗಿ ಸೂರ್ಯನಂತೆ ಬೆಳಗುತ್ತಲಿದೆ.

ಮುಖದಮೇಲೆ ಮುಡಿಗಟ್ಟಿದ ಜಟ, ಇಳಿಬಿದ್ದ ಗಡ್ಡ; ಹಣೆಗೆ ಧರಿಸಿದ ವಿಭೂತಿ, ಅಂತರ ದೃಷ್ಟಿಯ ಕಣ್ಣುಗಳನ್ನು ನೋಡಿದೊಡನೆ ನಮಗೆ ಒಂದು ಅಲೌಕಿಕ ಅನುಭವ ನೀಡುತ್ತವೆ.

ಮೈಮೇಲೆ ಸಾದಾಕಾವಿ ಬಟ್ಟೆ, ಕೊರಳೊಳಗೆ ಲಿಂಗ, ರುದ್ರಾಕ್ಷಿಗಳು, ಸದಾ ಪಲ್ಲಂಗದಮೇಲೆ ಮಲಗಿದರೂ ಜಗತ್ತಿನ ಯಾವುದೇ ವಿಷಯದಲ್ಲಿ ವ್ಯಾಪಕವಾದ ಜ್ಞಾನ. ಮಿದುವಾದ ಮಾತು, ಆಳವಾದ ವಿಚಾರ, ಅವರೆಡೆಗೆ ಯಾರೇ ಬರಲಿ, ಅವರ ಅಂತಸ್ತು ಅರಿತು ಮಾರ್ಗದರ್ಶನ ಮಾಡಿ ಮೋದದಿಂದ ಮರಳಿ ಹೋಗುವಂತೆ ಮಾಡುವದೇ ಅವರ ದೈನಂದಿನ ಕಾಯಕ.

ದಿನಕ್ಕೆ ಒಂದುಹೊತ್ತು ಊಟ; ಭಕ್ತರಿಂದ ಬಂದ ಎಡೆಯಿಂದ. ರೊಟ್ಟಿ, ಒಂದೆರಡು ಕಾಯಿಪಲ್ಲೆ, ಹಾಲು ಇವರ ಸಾಮಾನ್ಯ ಆಹಾರ. ಗೋಧಿ, ಸೀ ಬಳಸುವದು ಅಪರೂಪ. ಅನ್ನ ವನ್ನು ಅವರು ಮುಟ್ಟುವುದಿಲ್ಲ. ಇದು ಐವತ್ನಾಲ್ಕು ವರುಷಗಳಿಂದ ನಡೆದು ಬಂದ ರೂಢಿ.

ಅವರ ದರ್ಶನಕ್ಕೆ ಕಾಲಿನಿಂದ ನಡೆದು ಬರುವವರುಂಟು, ಕಾರಿನಲ್ಲಿ ಕೂತು ಬರುವವರುಂಟು, ಅವರಿಗೆ ಎಲ್ಲರೂ ಸರಿಸಮಾನರು.

ಪಾಮರರು ಬರಲಿ, ಪಂಡಿತರು ಬರಲಿ, ಪುರುಷರು ಬರಲಿ, ಸ್ತ್ರೀಯರು ಬರಲಿ, ಮಕ್ಕಳು ಬರಲಿ, ದಿಕ್ಕಿಲ್ಲದವರು ಬರಲಿ ಅವರೆಲ್ಲರನ್ನು ಆದರದಿಂದ ಬರಮಾಡಿಕೊಂಡು ಆತ್ಮೀಯತೆಯಿಂದ ಮಾತ ನಾಡುವದು ಅವರ ರೀತಿ. ತಮ್ಮ ದರ್ಶನಕ್ಕೆ ಯಾರಾದರೂ ಬರಲೆಂದು ಅವರು ಎಂದೂ ಬಯ ಸುವದಿಲ್ಲ; ಆದರೆ ಬರುವವರಿಗೆ ಲೆಕ್ಕವಿಲ್ಲ. ಬಂದವರಿಗೆ ಬೇಡೆನ್ನುವುದಿಲ್ಲ. ಎಲ್ಲರಿಗೂ ಮುಕ್ತ ದ್ವಾರ. ಅದಕ್ಕೆ ಕಾಲಮಿತಿಯ ಕಟ್ಟು ಕೂಡ ಇಲ್ಲ.

ಮಹಾಸ್ವಾಮಿಗಳು ಮಠದ ಗುರುಗಳೆಂದು ಯಾರಿಗೂ ಏನನ್ನೂ ಉಪದೇಶ ಮಾಡುವದಿಲ್ಲ; ಬಂದವರ ಕ್ಷೇಮ ಸಮಾಚಾರ ತಾವೇ ಆತ್ಮೀಯತೆಯಿಂದ ಕೇಳಲು ಪ್ರಾರಂಭ ಮಾಡುತ್ತಾರೆ. ಬಂದವರು ಹೃದಯ ಬಿಚ್ಚಿ ತಮ್ಮ ತಾಪ, ತೊಂದರೆಗಳೇನಿವೆ ಅವನ್ನು ಸ್ವಲ್ಪವೂ ಸಂಕೋಚವಿಲ್ಲದೆ ತೋಡಿಕೊಂಡು ತಮ್ಮ ತಲೆಭಾರ ಹಗುರಮಾಡಿಕೊಳ್ಳುವರು. ಶಾಂತ ಚಿತ್ತದಿಂದ ಎಲ್ಲ ಕೇಳಿಕೊಂಡು, ಅವರಿಗೆ ಸರಿಯಾದ ರೀತಿಯಲ್ಲಿ ತಿಳಿ ಹೇಳಿ ಮಾರ್ಗದರ್ಶನ ಮಾಡಿ ತೃಪ್ತಿ ಪಡಿಸುತ್ತಾರೆ ಸ್ವಾಮಿಗಳು.

ಜಗತ್ತಿನಲ್ಲಿ ಆಧ್ಯಾತ್ಮ ವಿಚಾರದವರು ತೀರ ಅಲ್ಪ; ಬಹು ಜನರು ಬಳಲುವದು ಸಂಸಾರ ತಾಪತ್ರಯದಿಂದ. ಅಂಥವರಿಗೆ ಆಧ್ಯಾತ್ಮ ಹೇಳ ಹೊರಟರೆ ರೋಗ ಒಂದು, ಕೊಡುವ ಔಷಧ ಇನ್ನೊಂದು ಎಂಬಂತಾಗುವದೆಂದು ಅವರ ವಿಚಾರ.

ಉಪದೇಶ ಮೇಲೆ ಕುಳಿತು ಹೇಳುವದಲ್ಲ; ಕೇಳಲು ಬಂದವರ ಮಟ್ಟ ತಿಳಿದುಕೊಂಡು ತಾವೇ ಕೆಳಗಿಳಿದು ಹತ್ತಿರ ಕೂಡಿಸಿಕೊಂಡು, ಮೈದಡವಿ ಮಾತನಾಡಿ ಮೋದದಿಂದ ಮನೆಗೆ ಮರಳುವಂತೆ ಮಾಡುವ ಮಹತ್ಸಾಧನೆ ಅವರದು.

ತಮಗಾಗಿ ಯಾರಿಂದ ಏನೂ ಯಾಚಿಸುವದಿಲ್ಲ. ತಮ್ಮ ತೊಂದರೆ ತೋಡಿಕೊಳ್ಳುವದಿಲ್ಲ. ಸ್ವಾಮಿಗಳಿರುವದು ಭಕ್ತರ ಸಲುವಾಗಿ, ಭಕ್ತರು ಸ್ವಾಮಿಗಳಿಗಾಗಿ ಇಲ್ಲೆಂಬುದೇ ಅವರ ಸಿದ್ಧಾಂತ.

ಸಾಮಾನ್ಯವಾಗಿ ಸ್ವಾಮಿಗಳಾದವರು ಸರ್ವಾಧಿಕಾರಿಗಳಂತೆ ಸಾಗುವವರು ಬಹಳ. ಭಕ್ತರ ಮಾರ್ಗದರ್ಶಕರೆಂಬ ಭಾವನೆಯಿಂದ ಸಾಗುವವರು ಅಪರೂಪ. ಅಂಥ ಅಪರೂಪ ಸ್ವಾಮಿಗಳಲ್ಲಿ ಬಬಲೇಶ್ವರ ಶಾಂತವೀರ ಸ್ವಾಮಿಗಳೊಬ್ಬರು.

ಅವರು ತರ್ಲಗಟ್ಟ ಎಂಬ ಚಿಕ್ಕ ಹಳ್ಳಿಯಲ್ಲಿ ಕಲಿತದ್ದು ಕನ್ನಡ. ಮೇಲಿನ ತರಗತಿಗಳು ಕೂಡ ಅಲ್ಲಿರಲಿಲ್ಲ: ಬಬಲೇಶ್ವರಕ್ಕೆ ಬಂದ ಬಳಿಕ ಓದಿದ್ದು ಮಠದ ಪಾಠಶಾಲೆಯಲ್ಲಿ ಸಂಸ್ಕೃತ ಕೆಲವು ವರುಷ ಮಾತ್ರ. ಹೆಚ್ಚಿನ ವ್ಯಾಸಂಗಕ್ಕೆ ಕಾಶಿಗೆ ಹೋಗಲು ಹೊರಟರೂ ಅನಿವಾರ್ಯ ಕಾರಣಗಳಿಂದ ಅದು ಸಾಧ್ಯವಾಗಲಿಲ್ಲ.

ಸ್ವಂತ ಪರಿಶ್ರಮದಿಂದ ವೇದ, ಆಗಮ, ಉಪನಿಷತ್ತು, ಪುರಾಣಗಳ ಸಾರ ತಿಳಿದುಕೊಂಡಿರುವರು. ಸಿದ್ಧಾಂತ ಶಿಖಾಮಣಿ, ಗೀತೆ, ಶರಣರ ವಚನಗಳಲ್ಲಿ ಹುದುಗಿದ್ದ ಸತ್ವಗಳನ್ನು ಹೃದ್ಗತ ಮಾಡಿ ಕೊಂಡಿರುವರು.

ವೀರಶೈವ ಸಿದ್ಧಾಂತ ಮತ್ತು ಉಳಿದ ಧರ್ಮಗಳ ತಿರುಳನ್ನು ತುಲನಾತ್ಮವಾಗಿ ತಿಳಿದುಕೊಂಡು ಅಳವಡಿಸಿಕೊಂಡು ಅದರಂತೆ ಆಚರಿಸಿರುವರು.

ಅವರು ಅಪ್ರತಿಮ ಮೇಧಾವಿಗಳು. ಯಾವ ಪಂಡಿತ ಪದವಿ ಪಡೆಯದಿದ್ದರೂ ಪ್ರತಿಯೊಂದು ವಿಷಯದಲ್ಲಿ ಅವರು ಪಾರಂಗತರು; ಅತ್ಯಂತ ಅನುಭವಿಕರು. ಸ್ಪಷ್ಟ ಪ್ರತಿಪಾದಕರು.

ಧಾರ್ಮಿಕ, ಆಧ್ಯಾತ್ಮಿಕ ಕ್ಷೇತ್ರದಲ್ಲಿ ಹಿಂದಿನಿಂದ ಇಂದಿನವರೆಗೆ ಆದ ಬೆಳವಣಿಗೆಯ ಸಾರಸವಿ ದಿದ್ದು; ಯಾವುದೆ ಪ್ರಶ್ನೆಗೆ ಸಮಾಧಾನಕರವಾಗಿ ಉತ್ತರ ನೀಡುವ ಶಕ್ತಿ ಅವರಲ್ಲಿದೆ. ಜ್ಞಾನ ಮಾರ್ಗದಲ್ಲಿಯೂ, ಕ್ರಿಯಾ ಮಾರ್ಗದಲ್ಲಿಯೂ ಅಷ್ಟೇ.

ಇನ್ನು ಭೌಗೋಲಿಕ, ಐತಿಹಾಸಿಕ, ಖಗೋಲ, ಪ್ರಾಣಿಶಾಸ್ತ್ರ, ಸಸ್ಯಶಾಸ್ತ್ರ, ಮಾನಸಶಾಸ್ತ್ರ, ಜೀವನಶಾಸ್ತ್ರ, ಶಾರೀರಕಶಾಸ್ತ್ರ, ಅರ್ಥಶಾಸ್ತ್ರ, ಆರೋಗ್ಯಶಾಸ್ತ್ರ, ಸಮಾಜಶಾಸ್ತ್ರ, ಸಾಹಿತ್ಯ, ಕಾವ್ಯ, ಕಲೆ ಇವುಗಳು ಯಾವುದೇ ಇರಲಿ, ಅವರು ಅಧಿಕೃತವಾಗಿ ಮಾತನಾಡಬಲ್ಲವರು.

ಭೌತಿಕವಿಜ್ಞಾನ, ರಾಜಕಾರಣದಲ್ಲಿ ಅವರ ಆಳವಾದ ವಿಚಾರಗಳು, ವಿಜ್ಞಾನಿಗಳನ್ನು, ರಾಜ ಕಾರಣಿಗಳನ್ನು ಬೆರಗುಗೊಳಿಸುವಂಥವಾಗಿವೆ.

ಮಾನವ ಜನಾಂಗದ ಬೆಳವಣಿಗೆ ಹೇಗಾಗುತ್ತ ಬಂದಿದೆಂಬುದನ್ನು ಅವರು ಅರಿತವರು. ಇಂದಿನ ನಾಗರಿಕತೆ ಎತ್ತ ಸಾಗಿದೆಂಬದನ್ನು ಅವರು ಅವಗತ ಮಾಡಿಕೊಂಡವರು.

ಅಂಧ ವಿಶ್ವಾಸ, ಪವಾಡ ಮೊದಲಾದವುಗಳ ಮೇಲೆ ಅವರ ನಂಬಿಗೆ ಇಲ್ಲವೇ ಇಲ್ಲ. ಹಿಂದಿನ ದೆಲ್ಲ ಒಳ್ಳೆಯದು, ಇಂದಿನದೆಲ್ಲ ಕೆಟ್ಟದು ಎಂದು ಅವರು ಎಂದೂ ಹೇಳಿಲ್ಲ. ಎರಡರಲ್ಲಿಯ ಒಳ್ಳೆಯದಾವುದೋ ಅದನ್ನು ಮಾತ್ರ ಅವರು ಪುರಸ್ಕರಿಸುವರು; ಪ್ರಭಾವಯುತವಾಗಿ ಪ್ರತಿ ಪಾದಿಸುವರು.

ಈಗಿನ ಕಾಲದಲ್ಲಿ ಸ್ವಾಮಿಗಳೆಂದರೆ ಸಾಮಾನ್ಯವಾಗಿ ಜನರಲ್ಲಿ ಶ್ರದ್ಧೆ ಉಳಿದಿಲ್ಲ. ಆದರೆ ಬಬಲೇಶ್ವರ ಸ್ವಾಮಿಗಳ ಕಡೆಗೆ ಬಂದವರು ಮಾತ್ರ ತಮ್ಮ ಹೃದಯದಲ್ಲಿ ಶ್ರದ್ಧಾ, ಭಕ್ತಿ, ಬೆಳಕು ಕಂಡು ಹೋಗುವರೆಂಬುದಕ್ಕೆ ಸಂಶಯವಿಲ್ಲ.

ಇನ್ನು ಪ್ರಾಪಂಚಿಕರ ಸಮಸ್ಯೆಗಳೆಲ್ಲ ಅವರಿಗೆ ಗೊತ್ತು. ತೊಂದರೆಗೀಡಾದ ಯಾವನೂ ಅವರೆಡೆಗೆ ಬಂದು ನಿರಾಶನಾಗಿ ಹೋಗಿಲ್ಲ; ಪರಿಹಾರದ ಹಾದಿ ಪಡೆದುಕೊಂಡು, ಪೂರ್ಣ ತೃಪ್ತರಾಗೇ ಹೋಗುವರು.

ಭಕ್ತರಿಗೆ ಮಾರ್ಗದರ್ಶನ ಮಾಡುವದೇ ಗುರುಗಳ ಕೆಲಸವೆಂದು ಅವರು ಅರಿತು, ಅದರಂತೆ ಆಚರಿಸುತ್ತಿರುವರು. ಅದೇ ಅವರ ಪೂಜೆ, ಪ್ರಾರ್ಥನೆ ಕಾಯಕವೆಂದು ಕಂಡುಕೊಂಡಿದ್ದಾರೆ.

ಅವರು ಪತ್ರಿಕಾ ಪ್ರಚಾರದ ಪ್ರಸಿದ್ಧ ಪುರುಷರಲ್ಲ. ಗುಪ್ತ ಗಂಗೆಯಂತೆ ಬಬಲೇಶ್ವರ ಭಾಗದ ಭಕ್ತರಿಗೆ ಶಾಂತಿ, ಸುಖದ ದಾರಿ ತೋರುವ ಸತ್ಪುರುಷರು.

ಬಿಡುವಿದ್ದಾಗ ರೇಡಿಯೋ ಮೂಲಕ, ಪತ್ರಿಕೆ ಓದಿಸುವ ಮೂಲಕ ಜಗತ್ತಿನ ಆಗುಹೋಗು ಗಳನ್ನು ಅರಿತುಕೊಳ್ಳುವ ಪದ್ಧತಿ ಅವರದು.

ಒಟ್ಟಿನಲ್ಲಿ ಅವರೊಂದು "ಜೀವಂತ ವಿಶ್ವಕೋಶ" ಬಬಲೇಶ್ವರಕ್ಕೆ ಬಂದವರೆಲ್ಲ ಅದನ್ನು ದೃಢಪಡಿಸಿಕೊಂಡಿದ್ದಾರೆ.

ವಯೋಧರ್ಮದಿಂದ ಕೃಶವಾಗಿರುವ ಮಹಾಸ್ವಾಮಿಗಳ ಈಗಿನ ದೇಹದಲ್ಲಿ ಬೆಳಗುತ್ತಿರುವ ಆತ್ಮ ಜ್ಯೋತಿಯನ್ನು ಅರ್ಥಮಾಡಿಕೊಂಡಿರುವವರು ವಿರಳ.

ಜನರು ಅರಿಯಲಿ, ಬಿಡಲಿ; ಆತ್ಮಶಕ್ತಿ ಸ್ವಯಂ ಪರಿಪೂರ್ಣ; ಸ್ವಯಂ ಪ್ರಕಾಶಮಾನ. ಅದಕ್ಕಾವ ಚ್ಯುತಿ ಬರದು; ಚ್ಯುತಿ ಆಗದಿರುವದೆ "ಸತ್ಯಂ ಶಿವಂ, ಶಾಶ್ವತಂ."

## ಕತ್ತಲೆಯಲ್ಲಿ ಕುತ್ತು

ಶ್ರೀಗಳು ಊರ ಹೊರಗಿನ ಮಠದಲ್ಲಿ ಇರುತ್ತಿದ್ದರು. ಪ್ರತಿನಿತ್ಯ ಮೂರು ಹೊತ್ತು ಶಿವಾರ್ಚನೆ ಮಾಡುತ್ತಿದ್ದರು. ಮುಂಜಾನೆ ಹೊರಗೆ ಹೊರಡುವ ಮುನ್ನ ತಮ್ಮ ಪ್ರಾತಃಕಾಲದ ಶಿವಪೂಜೆ ಮುಗಿಸಿ ಬಿಡುತ್ತಿದ್ದರು.

ಒಂದುದಿನ ಥಟ್ಟನೆ ನಿದ್ದೆಯಿಂದ ಎಚ್ಚೆತ್ತು, ಸ್ನಾನದ ವೇಳೆ ಆಗಿರಬಹುದೆಂದು ಕೈಯಲ್ಲಿ ಸ್ನಾನದ ಬಟ್ಟೆ ಹಾಗೂ ಪೂಜೆಯ ತಂಬಿಗೆ ಹಿಡಿದುಕೊಂಡು ಸಮೀಪದ ಬಾವಿಗೆ ಹೋದರು. ಅವರು ನಿತ್ಯವೂ ಅದೇ ಬಾವಿಯಲ್ಲಿ ಸ್ನಾನ ಮಾಡುತ್ತಿದ್ದರು.

ಅಮವಾಸ್ಯೆ ಹತ್ತರವಿದ್ದ ದಿನ; ಬೆಳದಿಂಗಳಿರಲಿಲ್ಲ. ಎಲ್ಲೆಡೆಗೂ ಕಾಳಕತ್ತಲೆ. ಆಕಾಶದಲ್ಲಿ ಮುಸುಕಿದ ಮೋಡಬೇರೆ. ಭರಭರನೆ ನಡೆದು ಬಾವಿ ತಲುಪಿದ ಬಳಿಕ ನಿತ್ಯದಂತೆ ಬಹಿರ್ದೆಶೆಗೆ ಹೋಗಿ ಬಂದು ಯಥೇಚ್ಛವಾಗಿ ಬಾವಿಯಲ್ಲಿ ಈಜಾಡಿದರು. ಬಾವಿಯ ಒಳಬಾಜು ಸ್ವಲ್ಪ ನಿಲ್ಲಲು ಸ್ಥಳವಿತ್ತು. ಗೋಡೆಯ ಬದಿಗೆ ತಮ್ಮ ಎಲ್ಲ ಬಟ್ಟೆಯನ್ನಿಟ್ಟಿದ್ದರು. ಅಷ್ಟರಲ್ಲಿ ಜಿಟಿ, ಜಿಟಿ ಮಳೆ ಬರಲು ಆರಂಭವಾಯಿತು.

ಶ್ರೀಗಳು ಬಿಂದಿಗೆಯಂತಹ ತಂಬಿಗೆಯನ್ನು ಹೆಗಲಮೇಲೆ ಹೊತ್ತುಕೊಂಡು ಕೌಪಿನಧಾರಿ ಯಾಗಿಯೇ ಬಾವಿಯಮೇಲೆ ಇಟ್ಟು ಬರಲು ಕಡಿದಾದ ಕಟ್ಟೆ ಏರುತ್ತಿರಲು ಮಳೆಯಿಂದ ಕಾಲು ಜಾರಹತ್ತಿದವು. ಕತ್ತಲಲ್ಲಿ ಏನೂ ಕಾಣುತ್ತಿರಲಿಲ್ಲ. ಮೇಲೆ ಹತ್ತುವುದು ಕಷ್ಟವಾಯಿತು. ಮತ್ತೆ ಕೆಳಕ್ಕೆ ಇಳಿದು ತಂಬಿಗೆಯನ್ನು ತಮ್ಮ ಬಟ್ಟೆಗಳ ಹತ್ತಿರ ಇಟ್ಟು ತಾವೂ ಬಳಿಯಲ್ಲಿಯೇ ಕುಳಿತುಕೊಂಡರು.

ಬೆಳಕು ಈಗ ಬಂದೀತು, ಆಗ ಬಂದೀತು ಎಂದು ಸಮಯ ಕಾಯುತ್ತ ಹಾಗೆಯೇ ಕುಳಿತು ಬಿಟ್ಟರು. ಗಂಟೆಗಟ್ಟಲೇ ಕಾದರೂ ಬೆಳಗಾದಂತೆ ಕಾಣಲಿಲ್ಲ. ಹಾಗೆಯೇ ಕುಳಿತಿದ್ದಾಗ ಪಟ, ಪಟನೆ ಮೈಮೇಲೆ ಮಣ್ಣಿನ ಚಿಕ್ಕ ಹೆಂಟೆಗಳು ಬಾವಿಗೋಡೆಯ ಅಂಚಿನಿಂದ ಉದುರತೊಡಗಿದವು. ಸ್ವಾಮಿಗಳು ಮೇಲಕ್ಕೆದ್ದು ಬಾವಿಯ ಸ್ವಲ್ಪ ಬದಿಗೆ ಸರಿದು ಬಾವಿಯ ಮೇಲಕ್ಕೆ ಹತ್ತುವ ಸ್ಥಳದ ಹತ್ತರ ಬಂದು ನಿಂತರು.

ಹೀಗೆ ಬಂದು ನಿಲ್ಲುವದೇ ತಡ ಧಬಧಬನೆ ಬಾವಿಯ ಗೋಡೆ ಕಡಿದುಕೊಂಡು ಬಿದ್ದಿತು. ಬಿದ್ದ ಮಣ್ಣಿನ ಕೆಳಗೆ ಅವರ ತಂಬಿಗೆ, ವಸ್ತ್ರಗಳು ಮುಚ್ಚಿಹೋದವು. ಶ್ರೀಗಳು ಹಾಗೆಯೇ ಉಡಲು ಬಟ್ಟೆಗಳಿಲ್ಲದೆ ಧರಿಸಿದ ಕೌಪಿನದಲ್ಲೇ ಮಠಕ್ಕೆ ಮರಳಿ ಬರಬೇಕಾಯಿತು. ಮಠಕ್ಕೆ ಹೋಗಿ ಸ್ವಾಮಿಗಳು ವೇಳೆ ನೋಡಿದಾಗ ಮಧ್ಯರಾತ್ರಿಯ ಎರಡು ಗಂಟೆ ಸಹ ಆಗಿರಲಿಲ್ಲ. ಅಂತೂ ಶ್ರೀಗಳ ಜೀವನದಲ್ಲಿಯ ಮಹಾ ಕುತ್ತೊಂದು ದೇವರ ದಯದಿಂದ ಪರಿಹಾರವಾಗಿತ್ತು.

## ಬಂದಂತೆ ಬಯಲಾಯಿತು

ಜೀವನದಲ್ಲಿ ಯಾರಿಗಾದರೂ ಒಮ್ಮೊಮ್ಮೆ ಅನಿರೀಕ್ಷಿತ ದುರ್ಧರ ಪ್ರಸಂಗಗಳು ಬಂದೇ ಬರುತ್ತವೆ; ಆಗ ಬುದ್ಧಿಗೆ ಕತ್ತಲು ಕವಿದಂತಾಗಿ, ಹತಾಶನಾಗಿ ದೇವರನ್ನೋ, ಗುರುವನ್ನೋ ಮೊರೆಹೋಗುವ ಪ್ರಸಂಗ ಪ್ರಾಪ್ತವಾಗುತ್ತದೆ; ಅದು ಅನಿವಾರ್ಯ.

ಒಂದು ದಿವಸ ಶ್ರೀ ಶಾಂತವೀರ ಮಹಾಸ್ವಾಮಿಗಳ ಮಧ್ಯಾಹ್ನ ಸ್ನಾನ, ಶಿವಾರ್ಚನೆ, ಅರ್ಪಿತ ಪೂರೈಸಿತ್ತು. ಸಹಜವಾಗಿ ಅವರು ಮಠದ ಅಡಿಗೆಯ ಮನೆಯ ಬಾಗಿಲಲ್ಲಿ ಹಾದು ಬರುತ್ತಿದ್ದರು. ಆಗ ಒಂದು ಬೆಕ್ಕು ಹಾಲಿನ ಪಾತ್ರೆಯಲ್ಲಿ ಬಾಯಿ ಹಾಕಿದ್ದುದನ್ನು ಸ್ವಾಮಿಗಳು ಕಂಡರು. ಆ ಬೆಕ್ಕು ಬೆದರಿ ಅವರು ನಿಂತುಕೊಂಡ ಬಾಗಿಲದತ್ತ ನುಗ್ಗುವ ಭರದಲ್ಲಿ ಸ್ವಾಮಿಗಳ ಪಾದಗಳಿಗೆ ತಾಕಿತು.

ಸ್ವಾಮಿಗಳು ಕೂಡಲೆ ತಮ್ಮ ಪಾದದಿಂದಲೇ ಅದನ್ನು ಹಿಂದಕ್ಕೆ ಚಿಮ್ಮಿದರು. ಆಕಸ್ಮಿಕವಾಗಿ ಆ ಬೆಕ್ಕು ತುಸು ದೂರದಲ್ಲಿ ಮಲಗಿದ್ದ ಪರಸ್ಥಳದ ಓರ್ವ ಹೆಣ್ಣುಮಗಳ ಮೈಮೇಲೆ ಬಿದ್ದಿತು; ಅದರಿಂದ ಎಚ್ಚರಾದ ಆ ಹೆಣ್ಣು ಮಗಳು ಚಿಟ್ಟನೇ ಚೀರಿದಳು. ತನ್ನಮೇಲೆ ಬೆಕ್ಕು ಬಿದ್ದುದನ್ನು ಆ ಹೆಣ್ಣು ಮಗಳು ನೋಡಲಿಲ್ಲ; ಅಷ್ಟರಲ್ಲಿ ಬೆಕ್ಕು ಓಡಿಹೋಗಿತ್ತು.

ಅಡಿಗೆಯ ಮನೆಯಲ್ಲಿ ಆಕೆಯಾಗಲೀ, ಪಡಶಾಲೆಯಲ್ಲಿ ಆಕೆಯ ಪತಿ ಮತ್ತು ಅಣ್ಣನಾಗಲೀ ಮಲಗಿದ್ದುದನ್ನು ಸ್ವಾಮಿಗಳು ನೋಡಿರಲಿಲ್ಲ.

ಆ ಚೀರಿದ ಧ್ವನಿ ಕೇಳಿ, ಆಕೆಯ ಪತಿ ಮತ್ತು ಅಣ್ಣ ಎಚ್ಚರವಾಗಿ ಸ್ವಾಮಿಗಳು ನಿಂತ ಅಡಿಗೆಯ ಮನೆಯ ಬಾಗಿಲತ್ತ ಧಾವಿಸಿ ಬಂದರು. ಆಕೆಯ ಅಣ್ಣ ಅಲ್ಲಿದ್ದ ಸ್ವಾಮಿಗಳನ್ನು ಕಂಡು ದಿಗ್ಭ್ರಮೆಯೊಂದಿಗೆ ಕೋಪಾವಿಷ್ಟನಾದ. ಅದನ್ನು ಸ್ವಾಮಿಗಳು ಕಂಡು, ಸ್ವಲ್ಪವೇಳೆ ಅಚಲವಾಗಿ ಹಾಗೇ ನಿಂತರು. ಮನಸ್ಸಿನಲ್ಲಿ "ಗುರುಪಾದೇಶ" ಎಂದುಕೊಂಡರು.

ಬಳಿಕ ಸ್ವಾಮಿಗಳು ಸಾವಧಾನದಿಂದ— "ನಿನ್ನ ತಂಗಿಯ ಮೈಮೇಲೆ ಏನಾದರೂ ಗಾಯವಾಗಿವೆಯೇನೋ ನೋಡು" ಎಂದು ಆಕೆಯ ಅಣ್ಣನಿಗೆ ಸೂಚಿಸಿದರು.

ಆದರಂತೆ ಅವನು ಅಡಿಗೆಯ ಮನೆಯಲ್ಲಿ ಹೋಗಿ ನೋಡಲಾಗಿ ಆತನ ತಂಗಿಯ ತೋಳಿನ ಮೇಲೆ ಸಣ್ಣ ಮೂರು ಉಗುರಿನ ಗಾಯ, ಒಂದು ಗಾಯದಿಂದ ಸ್ವಲ್ಪ ರಕ್ತ ಕಂಡುಬಂದಿತು.

ಬಳಿಕ ಸ್ವಾಮಿಗಳು ನಡೆದ ಘಟನೆಗಳನ್ನೆಲ್ಲ ವಿವರಿಸಿ ಹೇಳಿದರು. ಅದನ್ನು ಕೇಳಿ ಆ ಹೆಣ್ಣು ಮಗಳು ಮತ್ತು ಆಕೆಯ ಪತಿ ಹಾಗೂ ಅಣ್ಣ ನಿಟ್ಟುಸಿರು ಬಿಟ್ಟು ಸಾಷ್ಟಾಂಗ ನಮಸ್ಕಾರ ಮಾಡಿದರು.

ಅವರು ಸ್ವಾಮಿಗಳ ತೀರ ಪರಿಚಿತರು ; ದರ್ಶನಕ್ಕಾಗಿ ಬಂದವರು. ಊಟಮಾಡಿ ಮಲಗಿದ್ದರು.

ಈ ಅನಿರೀಕ್ಷಿತ ಘಟನೆಯಿಂದ ಭಕ್ತರ ಭಾವನೆಯೇ ಬದಲಾಗುವ ಪ್ರಸಂಗ ಒದಗಿ ಬಂದಿತು. ಆದರೆ ಅದು ಬಂದಂತೆ ಬಯಲಾಯಿತು.

ಗುರು ಗುರುಪಾದೇಶನೇ ಈ ಸಂಕಟದಿಂದ ಪಾರುಮಾಡಿದನೆಂದು, ಮಹಾಸ್ವಾಮಿಗಳು ಮನದಲ್ಲಿ ನೆನೆದುಕೊಂಡರು.

## ಭಕ್ತರ ಮನೆಗೆ ಬಂದ ಭಸ್ಮ

ಬಿದರಿಯ ಲಿಂ. ಕುಮಾರ ಮಹಾಸ್ವಾಮಿಗಳು ಮಹಾ ತಪಸ್ವಿಗಳು, ಸಿದ್ಧ ಪುರುಷರು. ಅವರು ಪ್ರತಿವರುಷ ಕೆಲತಿಂಗಳ ಕೃಷ್ಣಾನದಿ ತೀರದಲ್ಲಿ ಐದು ಆಕಳ ಕಟ್ಟಿಕೊಂಡು ಅನುಷ್ಠಾನ ಮಾಡುವ ಪದ್ಧತಿಯಾಗಿತ್ತು.

ಒಂದುಸಾರಿ ಮಹಾಸ್ವಾಮಿಗಳು ಆಕಳ ಸಗಣಿಯನ್ನು ಸಂಗ್ರಹಿಸಿ ಒಣಗಿಸಿ, ಸುಟ್ಟು ಅವುಗಳಿಂದ ಐದು ದೊಡ್ಡ ದೊಡ್ಡ ಭಸ್ಮದ ಗಟ್ಟಿಗಳನ್ನು ಸಿದ್ಧಪಡಿಸಿದರು.

ಆ ಗಟ್ಟಿಗಳಲ್ಲಿ ಮೂರನ್ನು ಮಾತ್ರ ತಮ್ಮಿಂದ ಅನುಗ್ರಹ ಪಡೆದ ಹುಬ್ಬಳ್ಳಿಯ ಹಿಂದಿನ ಮೂರುಸಾವಿರ ಮಠದ ಗಂಗಾಧರ ಸ್ವಾಮಿಗಳು, ಹಾನಗಲ್ಲ ಕುಮಾರ ಸ್ವಾಮಿಗಳು, ಹಾಗೂ ಈಗಿನ ಬಬಲೇಶ್ವರದ ಶ್ರೀ ಶಾಂತವೀರ ಸ್ವಾಮಿಗಳಿಗೆ ಆಶೀರ್ವದಿಸಿ ಅವುಗಳ ಪಾವಿತ್ರ್ಯಕ್ಕೆ ಚ್ಯುತಿ ಬರದಂತೆ ಉಪಯೋಗಿಸಬೇಕೆಂದು ಅರ್ಪಿಸಿದರು.

ಬಬಲೇಶ್ವರ ಶ್ರೀ ಶಾಂತವೀರ ಸ್ವಾಮಿಗಳು ಆ ಭಸ್ಮವನ್ನು ಅವರ ಅಪ್ಪಣೆಯಂತೆ ಉಪಯೋಗಿಸಿದರು. ಮುಂದೆ ಅವರ ಶರೀರ ವಯೋಗುಣಕ್ಕನುಗುಣವಾಗಿ ದುರ್ಬಲವಾದುದರಿಂದ ಆ ಭಸ್ಮದ ಪಾವಿತ್ರ್ಯ ರಕ್ಷಿಸುವದು ಅವರಿಗೆ ಒಂದು ಸಮಸ್ಯೆಯಾಯಿತು. ಆಗ ಸ್ವಾಮಿಗಳು ಆ ಭಸ್ಮ ಗಟ್ಟಿಯನ್ನು ಒಂದು ಕಡೆಗೆ ನೆಲದಲ್ಲಿಟ್ಟು ಅದರಮೇಲೆ ಒಂದು ಗದ್ದಿಗೆ ಕಟ್ಟಬೇಕೆಂದು ವಿಚಾರಮಾಡಿದರು.

ಈ ಮಾತು ಹೇಗೋ ಎಡಹಳ್ಳಿಯ ಶ್ರೀ ಆರ್. ಎಂ. ದೇಸಾಯರ ತಾಯಿಯವರಾದ ಶ್ರೀಮತಿ ಲಕ್ಷ್ಮಿಬಾಯಿ ದೇಸಾಯಿ ಅವರಿಗೆ ತಿಳಿಯಿತು. ಅವರು ಮಹಾಸ್ವಾಮಿಗಳ ಕಡೆಗೆ ಬಂದು "ಆ ಭಸ್ಮದ ಗಟ್ಟಿಯನ್ನು ನಮಗೆ ಆಶೀರ್ವದಿಸಿರಿ; ನಾವು ಅದರ ಪಾವಿತ್ರ್ಯಕ್ಕೆ ಚ್ಯುತಿ ಆಗದಂತೆ ನೋಡಿಕೊಳ್ಳುತ್ತೇವೆ" ಎಂದು ಭಕ್ತಿಭಾವದಿಂದ ಬಿನ್ನವಿಸಿಕೊಂಡರು. ಆಗ ಮಹಾಸ್ವಾಮಿಗಳವರು ಅವರ ಭಕ್ತಿಭಾವಗಳಿಗೆ ಮೆಚ್ಚಿ ಆ ಪವಿತ್ರ ವಿಭೂತಿ ಗಟ್ಟಿಯನ್ನು ಅವರಿಗೆ ಅರ್ಪಿಸಿ ಆಶೀರ್ವದಿಸಿದರು. ಅದು ಈಗಲೂ ಎಡಹಳ್ಳಿಯ ದೇಸಾಯರ ವಾಡೆದಲ್ಲಿದೆ.

ಲಿಂ. ಮಲ್ಲಪ್ಪ ದೇಸಾಯರ ಕಾಲದಿಂದ ಅವರ ಕುಟುಂಬದವರೆಲ್ಲ ಇಂದಿಗೂ ಗುರುಪಾದ ಸ್ವಾಮಿಗಳ ಗದ್ದುಗೆ ಹಾಗೂ ಮಹಾಸ್ವಾಮಿಗಳ ಬಗ್ಗೆ ಅಪಾರ ಶ್ರದ್ಧೆಯನ್ನಿಟ್ಟು ಭಕ್ತಿಭಾವದಿಂದ ನಡೆದುಕೊಳ್ಳುತ್ತಾ ಬಂದಿದ್ದಾರೆ.

# ಜಪ ಲೇಖನ ಮದ್ದು

ಸಾಮಾನ್ಯವಾಗಿ ಮಾನವನಿಗೆ ಪ್ರಪಂಚದಲ್ಲಾಗಲಿ, ಪಾರಮಾರ್ಥದಲ್ಲಾಗಲಿ ಅಡಿತಡೆಗಳು ಬರುವದು ಅನಿವಾರ್ಯ; ಇದು ಸರ್ವರ ಸ್ವಾನುಭವ.

ಸೊಲ್ಲಾಪುರ ಜಿಲ್ಲೆಗೆ ಸೇರಿದ ಸಿಂಧಖೇಡ ಎಂಬದೊಂದು ಗ್ರಾಮ. ಬಾಳಾಸಾಹೇಬ ಎಂಬವರು ಆ ಊರ ಪಾಟೀಲರು; ಸ್ಥಿತಿವಂತರು. ಮನೆಯಲ್ಲಿ ಚಿಕ್ಕವಯಸ್ಸಿನ ಪತ್ನಿ ಕಮಲಮ್ಮ. ಆಕೆಯು ಇರುವ ಒಂದು ಗಂಡು ಮಗು ಕೆಲವರುಷಗಳ ಮೊದಲು ತೀರಿಕೊಂಡಿತ್ತು; ಆ ದುಃಖ ಮರೆಯು ವಷ್ಟರಲ್ಲೇ ಆಕೆಯ ಪ್ರಕೃತಿ ಕೂಡ ಕೆಟ್ಟಿತು. ತೀವ್ರ ಕಾಯಿಲೆಯಿಂದ ಹಾಸಿಗೆ ಹಿಡಿದಳು. ಈ ಸುದ್ದಿ ಬಬಲೇಶ್ವರದಲ್ಲಿದ್ದ ಆಕೆಯ ಅಕ್ಕನಿಗೆ ತಲುಪಿತು; ನಾಲ್ಕು ದಿನ ತಂಗಿ ಬಂದು ಹೋಗಲೆಂದು ಬಬಲೇಶ್ವರಕ್ಕೆ ಬರಮಾಡಿಕೊಂಡಳು.

ಅದೇ ಸಮಯದಲ್ಲಿ ಹರಳೇಶ್ವರ ಕ್ಷೇತ್ರದಲ್ಲಿ ಶ್ರೀ ಶಾಂತವೀರ ಸ್ವಾಮಿಗಳ ನೇತೃತ್ವದಲ್ಲಿ ಭಕ್ತರು ಅಷ್ಟಗ್ರಹ ಶಾಂತಿ ಕಾರ್ಯಕ್ರಮ ಇಟ್ಟುಕೊಂಡಿದ್ದರು. ಈ ಕಾರ್ಯಕ್ರಮಕ್ಕೆ ಸುತ್ತ ಮುತ್ತಲಿನ ಹಳ್ಳಿಗಳಿಂದ ಹಲವಾರು ಜನ ಸೇರಿದರು; ಈ ಅಕ್ಕ ತಂಗಿಯರು ಕೂಡ ತೆರಳಿದರು. ಆ ಸಮಯದಲ್ಲಿ ಕಮಲಮ್ಮನ ಅಕ್ಕ ತನ್ನ ತಂಗಿಯ ಕರುಣಾಜನಕ ಪರಿಸ್ಥಿತಿಯನ್ನು ಮಹಾಸ್ವಾಮಿ ಗಳಿಗೆ ಸವಿಸ್ತಾರವಾಗಿ ಸೂಚಿಸಿದಳು. ಮಹಾಸ್ವಾಮಿಗಳು ಮರುಮಾತನಾಡದೆ, ಕರುಣೆಯಿಂದ— "ನಾನೊಂದು ಪರಿಹಾರದ ದಾರಿ ತೋರಿಸುವೆನು; ಕಮಲಮ್ಮ ಮಾಡಲು ಸಿದ್ಧಳಿರುವಳೆ?" ಎಂದು ನುಡಿದರು.

ಕಮಲಮ್ಮನಿಗೆ ಈ ಮಾತು ಹೃದಯಕ್ಕೆ ಹಿಡಿಸಿತು. "ತಾವು ಹೇಳಿದಂತೆ ನಾನು ನಡೆದು ಕೊಳ್ಳಲು ಸಿದ್ಧಳಿರುವೆನು; ಅದಕ್ಕೆ ತಪ್ಪಲಾರೆನು" ಎಂದು ಹೇಳಿಬಿಟ್ಟಳು.

ಪ್ರತಿನಿತ್ಯ ಒಂದೇ ಸ್ಥಾನದಲ್ಲಿ ಕುಳಿತು ಹನ್ನೊಂದು ನೂರು ಶಿವನಾಮ ಜಪವನ್ನು ಬರೆದಿಡಬೇಕು; ಒಟ್ಟಿಗೆ ಏಳು ಲಕ್ಷ ಜಪ ಮುಗಿಸಬೇಕು, ಜಪ ಮುಗಿಯುವವರೆಗೆ ಊರಬಿಟ್ಟು ಹೊರಗೆ ಹೋಗ ಬಾರದು" ಎಂದು ಸ್ವಾಮಿಗಳು ಸೂಚಿಸಿದರು.

ಆಕೆ ಆ ಸೂಚನೆಯನ್ನು ಸಿರಸಾವಹಿಸಿ, ಮರಳಿ ತನ್ನ ಊರಿಗೆ ಹೋಗಿ ಅದನ್ನು ಭಕ್ತಿ ಭಾವ ದಿಂದ ವ್ರತ ಪ್ರಾರಂಭಿಸಿದಳು. ವ್ರತವು ಚಾಚೂ ತಪ್ಪದೆ ಕೆಲದಿನ ನಡೆಯಿತು. ವ್ರತ ನಡೆದಿರು ವಾಗಲೆ ಆಕೆಗೆ ಒಂದು ದಿವಸ ಹಾವು ಕಚ್ಚಿತು. ಮನೆಯವರೆಲ್ಲ ಗಾಬರಿಯಾಗಿ ಆಕೆಯನ್ನು ಚಿಕಿತ್ಸೆ ಗಾಗಿ ಸೊಲ್ಲಾಪುರಕ್ಕೆ ಕರೆದುಕೊಂಡು ಹೋಗಲು ಪ್ರಯತ್ನಿಸಿದರು. ವ್ರತನಿಷ್ಠೆಯಾದ ಕಮಲಮ್ಮ— "ನಾನು ಸತ್ತರೂ ಚಿಂತೆಯಿಲ್ಲ, ಹಿಡಿದ ವ್ರತ ಬಿಡಲಾರೆ. ಊರಬಿಟ್ಟು ಹೊರಗೆ ಕದಲಲಾರೆ" ಎಂದು ಸ್ಪಷ್ಟವಾಗಿ ತಿಳಿಸಿ ಎಂದಿನಂತೆ ತನ್ನ ವ್ರತ ಮುಂದುವರಿಸಿದಳು. ಕಾಲು ಬಾತಿತು, ಹಾವು ಕಚ್ಚಿದ ವಿಷ ತೊಡೆಯವರೆಗೆ ಏರಿ, ಅಲ್ಲಿ ಕಂದುಗಟ್ಟಿ ಕಲೆಯಾಗಿ ನಂತಿತು. ಕೈಗೊಂಡ ವ್ರತ ಒಂದು ವರುಷ ಒಂಭತ್ತು ತಿಂಗಳು, ಒಂಭತ್ತು ದಿನ ಅವ್ಯಾಹತವಾಗಿ ನಡೆದು ಮುಕ್ತಾಯವಾಯಿತು.

ಮಹಾಸ್ವಾಮಿಗಳ ಆದೇಶದ ಮೇರೆಗೆ ಮುಂದೆ ಜಪಲೇಖನದ ಹೆಪ್ಪೊತ್ತಿಗೆಯನ್ನು ಒಂದು ಕಬ್ಬಿಣದ ಪೆಟ್ಟಿಗೆಯಲ್ಲಿಟ್ಟು ಅವರ ಹೊಲದಲ್ಲಿ ಒಂದು ಗಿಡದ ಕೆಳಗೆ ಹುಗಿದು ಅದರಮೇಲೆ ಒಂದು ಗದ್ದಿಗೆಯನ್ನು ಕಟ್ಟಿಸಿದರು. ವ್ರತ ಸಮಾಪ್ತಿಯ ಸಂಕೇತವಾಗಿ ಅನ್ನಸಂತರ್ಪಣೆ ಮಾಡಿ ಗುರು ಕರುಣೆಯಿಂದ ತನ್ನ ಇಷ್ಟಾರ್ಥ ಸಿದ್ಧಿಯಾಯಿತೆಂದು ಆಕೆಗೆ ತೃಪ್ತಿ ಆಯಿತು.

ಕಮಲಮ್ಮನ ಕಂಟಕ ದೂರಾಗಿ ನೆಮ್ಮದಿಯಿಂದ ಸುಖದ ಸಂಸಾರ ಸಾಗಿಸುವಂತಾಯಿತು. ಆಕೆ ಮತ್ತು ಆಕೆಯ ಪತಿ ಮಹಾಸ್ವಾಮಿಗಳ ಮೇಲೆ ಅಪಾರ ವಿಶ್ವಾಸ ಇಟ್ಟುಕೊಂಡಿದ್ದಾರೆ.

ಜಪ ಲೇಖನದ ಈ ಗದ್ದಿಗೆ ಈಗ ಒಂದು ಜಾಗೃತ ಸ್ಥಾನವಾಗಿ ಪರಿಣಮಿಸಿದೆ. ನಿತ್ಯ ಪೂಜೆ ನಡೆಯುತ್ತಿದೆ. ಮಕ್ಕಳಿಗೆ, ಹೆಣ್ಣು ಮಕ್ಕಳಿಗೆ ಏನಾದರೂ ಚಿಕ್ಕಪುಟ್ಟ ತೊಂದರೆ ಆದರೆ ಹತ್ತರದ ನದಿಯಿಂದ ನೀರು ತಂದು ಗದ್ದಿಗೆ ಪೂಜಿಸಿ, ಪ್ರದಕ್ಷಿಣೆ ಹಾಕಿದರೆ ಅವು ನಿವಾರಣೆ ಆಗುತ್ತವೆಂಬ ಭಾವನೆ ಅಲ್ಲಿ ಮೂಡಿದೆ.

## ಕಟ್ಟಾಚರಣೆ

ಮನದ ಶುದ್ಧಿಗಾಗಿ ಪೂಜೆ, ಪ್ರಾರ್ಥನೆಗಳು ಅವಶ್ಯ. ಅದರಂತೆ ತನುಶುದ್ಧಿಗಾಗಿ ಕೆಲ ಕಟ್ಟಾಚರಣೆ ಅನಿವಾರ್ಯ. ಇದರಿಂದ ಒಳ, ಹೊರಗಿನ ಶುದ್ಧೀಕರಣಕ್ಕೆ ಸಹಾಯವಾಗುತ್ತದೆ.

ಒಮ್ಮೆ ಶ್ರೀಗಳವರು ಯಾವುದೋ ಪ್ರಸಂಗದ ನಿಮಿತ್ತ ವಿಜಾಪುರಕ್ಕೆ ತೆರಳಿದ್ದರು. ಮರಳಿ ಬಬಲೇಶ್ವರಕ್ಕೆ ಬರುವಾಗ ಕತ್ತಲು ಕವಿದಿತ್ತು. ಅವರು ಕೂತ ಕಾರು, ಖತಿಜಾಪುರದ ಸ್ವಲ್ಪ ಅಂತರದಲ್ಲಿ ಕೆಟ್ಟು ನಿಂತಿತು; ಸ್ವಲ್ಪ ವೇಳೆ ಕಾದರೂ ಅದು ಸರಿ ಆಗಲಿಲ್ಲ. ಮುಂದೆ ಪ್ರಯಾಣ ಮಾಡಲು ಯಾವ ಸಾಧನವೂ ಇರಲಿಲ್ಲ; ಖತಿಜಾಪುರದಲ್ಲಿಯೇ ರಾತ್ರಿ ಕಳೆಯಲು ನಿರ್ಧರಿಸಿದರು.

ಖತಿಜಾಪುರ ಒಂದು ತೀರ ಚಿಕ್ಕ ಹಳ್ಳಿ. ಹಾದಿಯಮೇಲೆ ಹರಕು ಮುರುಕಾದ ಒಂದು ಚಹಾದ ಅಂಗಡಿ. ಅಲ್ಲಿಗೆ ಬಂದು ಒಂದು ಬಾಕಿನಮೇಲೆ ಕುಳಿತರು.

ಈ ವಿಷಯ ಆ ಊರ ಗೌಡರಿಗೆ ಗೊತ್ತಾಗಲು ಕಾಲವಿಲಂಬವಾಗಲಿಲ್ಲ; ಅವರು ಅವಸರದಿಂದ ಸ್ವಾಮಿಗಳತ್ತ ಬಂದು ವಂದಿಸಿ — "ನನ್ನ ಮನೆಗೆ ದಯಮಾಡಿಸಿರಿ, ನಾನು ತಮಗೆ ಎಲ್ಲ ಅನುಕೂಲತೆ ಮಾಡಿಕೊಡುವೆನು" ಎಂದು ಬಿನ್ನವಿಸಿಕೊಂಡರು.

ಆಗ ಸ್ವಾಮಿಗಳು "ಈಗಂತು ರಾತ್ರಿ ಆಗಿದೆ, ಕೆಲಸಮಯ ವಿಶ್ರಾಂತಿ ಪಡೆಯಬೇಕಾಗಿದೆ; ಆ ಕಾಲದಲ್ಲಿ ಇನ್ನೊಬ್ಬರಿಗೆ ತೊಂದರೆ ಕೊಡಲಾರೆ. ಅನ್ಯಥಾ ಭಾವಿಸಬೇಡಿರಿ; ನನ್ನಷ್ಟಕ್ಕೆ ನನ್ನನ್ನು ಬಿಡಿರಿ" ಎಂದು ತಿಳಿಸಿದರು. ಆ ನಂತರ ಮಹಾಸ್ವಾಮಿಗಳು ಒಂದು ಬಾಕಿನಮೇಲೆ ತಿಳುವಾದ ಪಂಜೆಯನ್ನು ಹಾಸಿ, ಯಾವ ಹೊದಿಕೆಗಳಿಲ್ಲದೆ ಉಟ್ಟ ಬಟ್ಟೆಗಳಮೇಲೆ ರಾತ್ರಿ ಕಳೆದರು. ಮರುದಿನ ಹೇಗೋ ಬಬಲೇಶ್ವರಕ್ಕೆ ಬಂದುಬಿಟ್ಟರು.

ಇದರ ಇನ್ನೊಂದು ಘಟನೆ. ಮಹಾಸ್ವಾಮಿಗಳು ಮರಳಿ ಬೇಗ ಬರಬೇಕೆಂದು ಯಾವ ಹೆಚ್ಚಿನ ಸಾಮಾನುಗಳನ್ನು ತೆಗೆದುಕೊಳ್ಳದೆ ವಿಜಾಪುರಕ್ಕೆ ಹೋಗಿದ್ದರು.

ಮರಳಿ ಬರುವದಾಗಲಿಲ್ಲ. ಆ ದಿನ ಅವರು ಶ್ರೀ ಸ. ಚ. ಮಿರ್ಜಿ ಅವರ ಮನೆಯಲ್ಲಿ ವಸ್ತಿ ಉಳಿಯಬೇಕಾಯಿತು. ಸಂಜೆಯ ಸ್ನಾನ, ಶಿವಾರ್ಚನೆ, ಅರ್ಪಿತ ತೀರಿಸುವದು ಬಿಡುವಂತಿಲ್ಲ. ಆಗ ಅವರು ತಮ್ಮ ಸಲಗೆಯ ಹೆಸರಿನಿಂದ — "ಸಂಗಣ್ಣಾ ಚಿಕ್ಕದಾದ ಹೊಸ ತಾಟ ಒಂದು, ಚಿಕ್ಕದಾದ ಹೊಸ ಧೋತರ ಒಂದು ತರಿಸು, ನಾನು ಇಲ್ಲೇ ಸ್ನಾನ, ಶಿವಾರ್ಚನೆ, ಪ್ರಸಾದ ಮುಂತಾದುದನ್ನು ಪೂರೈಸುವೆನು." ಎಂದು ಹೇಳಿದರು. ಅದರಂತೆ ವ್ಯವಸ್ಥೆ ಮಾಡಲಾಯಿತು.

ಅವರು ಇನ್ನೊಬ್ಬರು ಬಳಸಿದ ಸಾಮಾನು ಬಳಸಬಾರದೆಂಬ ಆಚರಣೆಯನ್ನು ಬಹು ದಿನ ಗಳಿಂದ ಪರಿಪಾಲಿಸುತ್ತ ಬಂದಿರುವರು. ಈಗಲು ಕೂಡ ಅದನ್ನು ಅನುಸರಿಸಲು ತಪ್ಪುವದಿಲ್ಲ; ಹೊತ್ತು ಬಂದಂತೆ ಅವರು ಎಂದೂ ಹೋಗುವದಿಲ್ಲ.

## ಭಕ್ತಿಯ ಪ್ರಸಾದ

ರೈತನು ಎತ್ತು ಕಟ್ಟುವದು, ಬಿತ್ತುವದು, ಬೆಳೆ ಬತ್ತದಂತೆ ನೋಡಿಕೊಳ್ಳುವದು, ಅದರ ಫಲ ಸಿಗುವದೆಂಬ ನಂಬಿಗೆ, ನಿಷ್ಠೆಯಿಂದ. ಈ ಮಾತನ್ನು ಅರಿಯದವರು ವಿರಳ. ದೇವ ಧರ್ಮ

ಗಳಲ್ಲಿ ಕೂಡ ಭಕ್ತರು ನಂಬಿಗೆ ನಿಷ್ಠೆಯನ್ನಿಟ್ಟು, ಪುರುಷಾರ್ಥ ಪಡೆಯಬಲ್ಲರೆಂಬುದು ಶಾಸ್ತ್ರಗಳು ಹೇಳುತ್ತವೆ; ಅದರ ಅನುಭವವನ್ನು ಪಡೆದವರೂ ಪ್ರತಿಪಾದಿಸುತ್ತಾರೆ. ಬಬಲೇಶ್ವರದ ಬಸನ ಗೌಡ ಕಡೆಮನೆಯವರ ಮನೆತನ ಇದಕ್ಕೊಂದು ಜೀವಂತ ಉದಾಹರಣೆ.

ಬಸನಗೌಡ ಕಡೆಮನೆಯವರು, ಅವರ ಧರ್ಮಪತ್ನಿಯರಾದ ಶ್ರೀಮತಿ ನೀಲಮ್ಮತಾಯಿ ಇವರದು ಶ್ರೀ ಮಹಾಸ್ವಾಮಿಗಳಮೇಲೆ ಅಪಾರ ನಂಬಿಗೆ; ಅಚಲ ನಿಷ್ಠೆ. ಆ ಮನೆತನದವರು ಸುಮಾರು ಐವತ್ತು ವರುಷಗಳಿಂದ ಸ್ವಾಮಿಗಳಿಗೆ ನಿತ್ಯ ಮಧ್ಯಾಹ್ನ ಪ್ರಸಾದ ತಮ್ಮ ಮನೆಯಿಂದ ಕಳಿಸುತ್ತಿದ್ದಾ ರೆಂದರೆ ಅವರ ನಿಷ್ಠೆಯ ಅರಿವಾದೀತು. ಮಳೆ ಬರಲಿ, ಛಳಿ ಬರಲಿ ಈ ಕಾರ್ಯ ಅವಿಚ್ಛಿನ್ನವಾಗಿ ನಡೆದಿದೆ.

೧೯೫೨ರಲ್ಲಿ ಬಸನಗೌಡರಿಗೆ ಪಾರ್ಶ್ವವಾಯು ತಗಲಿತು. ಆಗ ಮಹಾಸ್ವಾಮಿಗಳು ಸ್ವತಃ ಅವರ ಮನೆಗೆ ಹೋಗಿ—"ನಿಮಗೆ ತೊಂದರೆ ಆಗುತ್ತಿದೆ; ಪ್ರಸಾದ ಕಳಿಸುವದನ್ನು ನಿಲ್ಲಿಸುವುದು ನೆಟ್ಟಗೆ" ಎಂದು ಸಹಜವಾಗಿ ಸೂಚಿಸಿದರು.

ಆಗ ಬಸನಗೌಡರು—"ಈ ಮಾತನ್ನು ತಾವು ಹೇಳಬಾರದು; ನಮ್ಮಿಂದ ಆಗದಿದ್ದರೆ ನಾವೇ ನಿಲ್ಲಿಸಿ ಬಿಡುತ್ತೇವೆ" ಎಂದು ಹೇಳಿಬಿಟ್ಟರು. ಸ್ವಾಮಿಗಳು ನಿರುತ್ತರವಾಗಿ ಮರಳಿ ಮಠಕ್ಕೆ ಆಗಮಿಸಿದರು.

"ನನಗೆ ಅವರು ಕಳಿಸುವ ಪ್ರಸಾದದ ರುಚಿಗಿಂತ; ಅವರ ಭಕ್ತಿವಿಶ್ವಾಸಗಳ ರುಚಿಯೇ ಹೆಚ್ಚಿನದು" ಎಂದು ಸ್ವಾಮಿಗಳು ಎಷ್ಟೋ ಸಾರಿ ಹೇಳಿದ್ದಾರೆ.

ಮಹಾಸ್ವಾಮಿಗಳು ಪ್ರಸಾದ ತೆಗೆದುಕೊಳ್ಳುವದು, ದಿನಕ್ಕೆ ಒಂದು ಸಾರಿ ಮಾತ್ರ; ಅದು ಮಧ್ಯಾಹ್ನ ಸಮಯದಲ್ಲಿ.

ನಿತ್ಯ ಗೌಡರ ಮನೆಯಿಂದ ಎಡೆತರುವ ಕೆಲಸವನ್ನು ವೀರಪ್ಪನೆಂಬ ಸೇವಕ ಮಾಡುತ್ತಿದ್ದ. ಅವನಿಗೆ ಅಡಚಣೆ ಆದಾಗ ಸ್ವತಃ ಬಸನಗೌಡರೇ ಈ ಕೆಲಸ ಮಾಡುತ್ತಿದ್ದರು. ಅವರ ಮನೆಗೂ. ಹೊರಗಿನ ಮಠಕ್ಕೂ ಅಂತರ ಸುಮಾರು ಅರ್ಧ ಮೈಲು.

ಬಸನಗೌಡರು ೧೯೫೫ರಲ್ಲಿ ಶಿವಾಧೀನರಾಗಿದ್ದು ಅವರ ಸಮಾಧಿಯನ್ನು ಹೊರಗಿನ ಮಠದ ಆವರಣದಲ್ಲಿ ಮಾಡಿ ಚಿಕ್ಕದೊಂದು ಗುಡಿಕಟ್ಟಿ ಬಸವಣ್ಣನ ಮೂರ್ತಿ ಸ್ಥಾಪನೆ ಮಾಡಲಾಗಿದೆ.

ಶ್ರೀಮತಿ ನೀಲಮ್ಮತಾಯಿ ಅವರು ಈಗ ವಯೋವೃದ್ಧರಾಗಿದ್ದರೂ ಕೂಡ ಶ್ರೀ ಮಠಕ್ಕೆ ಕೈಲಾದ ಮಟ್ಟಿಗೆ ತಮ್ಮ ಸೇವೆ ಸಲ್ಲಿಸುತ್ತಿದ್ದಾರೆ.

ಶ್ರೀಮತಿ ನೀಲಮ್ಮತಾಯಿಗೆ ಮಕ್ಕಳಿಲ್ಲ; ತಮ್ಮ ಬಂಧುಗಳಲ್ಲಿ ಒಬ್ಬನನ್ನು ದತ್ತಕ ತೆಗೆದುಕೊಂಡಿರು ವರು; ಅದಕ್ಕೆ ಮಹಾಸ್ವಾಮಿಗಳ ಪ್ರೇರಣೆಯೇ ಕಾರಣ.

## ಹಣದ ಚೀಲ

ಮಹಾಸ್ವಾಮಿಗಳು ಹೊರಗಿನ ಮಠದಲ್ಲಿದ್ದರು. ಅವರ ಹೆಚ್ಚು ಪರಿಚಯದ ಗ್ರಾಮಾಂತರ ವ್ಯಾಪಾರಿ ಒಬ್ಬನು ಮಧ್ಯಾಹ್ನ ಕುದುರೆಯ ಮೇಲೆ ಬಾಗಲಕೋಟೆಯಿಂದ ಬಂದು ಇಳಿದನು. ಸ್ವಾಮಿಗಳು ಪ್ರಸಾದ ತೀರಿಸಿಕೊಂಡು ಮಂಚದಮೇಲೆ ಕುಳಿತಿದ್ದರು. ಬಂದ ವ್ಯಾಪಾರಿಗೆ ಊಟ ಮಾಡಿಸಲು ಸೇವಕರಿಗೆ ಅಪ್ಪಣೆಮಾಡಿದರು. ವ್ಯಾಪಾರಿ ಟೊಂಕದಲ್ಲಿಯ ಹಣದ ಚೀಲವನ್ನು ಸ್ವಾಮಿಗಳ ಹತ್ತಿರ ಇಟ್ಟು ಸ್ನಾನಕ್ಕೆ ಹೋದನು. ಊಟಮಾಡಿ ಬಂದಮೇಲೆ ಶ್ರೀಗಳು ಅವನಿಗೆ ಚೀಲ ಒಪ್ಪಿಸಿದರು. ಆತನು ಕೂತು ಕ್ಷಣಹೊತ್ತು ತನ್ನ ಡೈರಿ ತೆಗೆದು ಸಂತೆಯಲೆಕ್ಕ ಮಾಡಿಕೊಂಡನು. ಚೀಲ ಬಿಚ್ಚಿ ಹಣ ಎಣಿಸಿದನು. ಅವನ ಮುಖ ಪೆಚ್ಚಾಯಿತು. ಮತ್ತೆ ಲೆಕ್ಕ ನೋಡಿದನು; ಮತ್ತೆ ಎಣಿಸಿದನು. ಮುಖದಲ್ಲಿ ಮ್ಲಾನತೆ ಕಾಣಿಸಿತು. ಶ್ರೀಗಳು ಅತ್ತ ದೃಷ್ಟಿ ಹರಿಸಿದರು.

"ಯಾಕೆ ಹಣ ಕಡಿಮೆ ಆಗಿದೆಯೇ" ಎಂದು ಸ್ವಾಮಿಗಳು ಪ್ರಶ್ನಿಸಿದರು. "ಹೌದರಿ ಅಪ್ಪಾ ಅವರ ?" ಎಂದು ವ್ಯಾಪಾರಿ ಉತ್ತರಿಸಿದ.

"ಎಷ್ಟು ಕಡಿಮೆಯಾಗಿದೆ" ಎಂದು ಕೇಳಲು "ಹದಿನೈದು ರೂಪಾಯಿ ಅಪ್ಪಾ ಅವರೆ!" ಎಂದು ಹೇಳಿದನು.

ಆಗ ಶ್ರೀಗಳು "ಹೌದು ನಮ್ಮ ಕಮತಿಗ ಹದಿನೈದು ರೂಪಾಯಿ ಕೇಳಿದ, ನಿನ್ನ ಚೀಲ ಬಿಚ್ಚಿ ಕೊಟ್ಟಿದ್ದೇನೆ, ನಿನ್ನ ಚೀಲ ಬಿಟ್ಟು ನನಗೆ ಒಳಗೆ ಹೋಗಲು ಬರುವಂತಿರಲಿಲ್ಲ, ಈಗ ತಂದುಕೊಡುತ್ತೇನೆ" ಎಂದು ಹೇಳಿ ಹದಿನೈದು ರೂಪಾಯಿ ತಂದುಕೊಟ್ಟರು.

ವ್ಯಾಪಾರಿ ಲೆಕ್ಕ ಮೇಳಮಾಡಿಕೊಂಡು ಊರಿಗೆ ಹೋದನು. ಬಾಗಲಕೋಟ ಬಿಡುವಾಗ ಅವನು ಕೊನೆಗೆ ಕೊಟ್ಟ ಹದಿನೈದು ರೂಪಾಯಿ ಲೆಕ್ಕವನ್ನು ಡೈರಿಯಲ್ಲಿ ಬರೆದಿರಲಿಲ್ಲ. ಸಂಜೆ ಸಾಮಾನು ಹೊಂದಿಸುವಾಗ ಈ ತಪ್ಪು ಗೊತ್ತಾಯಿತು. ವ್ಯಾಪಾರಿ ಗಾಬರಿಯಾದನು. ವ್ಯರ್ಥವಾಗಿ ಸ್ವಾಮಿಗಳ ಹದಿನೈದು ರೂಪಾಯಿ ತಂದದ್ದಕ್ಕಾಗಿ ದುಃಖವಾಯಿತು. ಹಳಹಳಿಸಿ ನಸುಕಿನಲ್ಲೇ ಪುನಃ ಬಬಲೇಶ್ವರಕ್ಕೆ ಬಂದು ಶ್ರೀಸ್ವಾಮಿಗಳ ಪಾದದಮೇಲೆ ಹೊರಳಿದನು. ತಪ್ಪಾಯಿತೆಂದು ಗೋಳಿಟ್ಟನು.

ಆಗ ಸ್ವಾಮಿಗಳು ನಕ್ಕರು. ಅವನನ್ನು ಸಮಾಧಾನಗೊಳಿಸಿದರು.—"ಮರೆವು ಸಹಜ, ಅದೂ ಒಂದು ಶಿವನ ವರ. ಆದರೂ ಆದಷ್ಟು ಮರೆಯದಿರುವದು ಮೇಲು" ಎಂದು ಹೇಳಿದರು. ವ್ಯಾಪಾರಿ ಇಪ್ಪತ್ತೈದು ರೂಪಾಯಿ ಕಾಣಿಕೆ ಇಟ್ಟು ವಂದಿಸಿ ಹೊರಟುಹೋದನು.

## ದೇವರಿರುವುದು ಕಾಯುವುದಕ್ಕಾಗಿ

ಒಮ್ಮೆ ಬಬಲೇಶ್ವರದಲ್ಲಿದ್ದ ಗ್ರಾಮಸೇವಕರ ತಾಯಿ, ಸೊಸೆ ಮತ್ತು ಮೊಮ್ಮಕ್ಕಳು ಮಹಾಸ್ವಾಮಿಗಳ ದರ್ಶನಕ್ಕೆ ಬಂದು ವಂದಿಸಿ ನಿಂತರು. ಮಹಾಸ್ವಾಮಿಗಳು ಎಂದಿನಂತೆ ಆಶೀರ್ವದಿಸಿ ನಿರೋಪ ನೀಡಿದರು.

ಆಗ ಗ್ರಾಮಸೇವಕರ ತಾಯಿ ಹೊರಡುವ ಮುನ್ನ "ನಾವು ಒಂದು ಬಾಡಿಗೆ ಮನೆ ಹಿಡಿದಿದ್ದೇವೆ; ಆದರೆ ಆ ಮನೆಯಲ್ಲಿ ದೆವ್ವಿನಕಾಟ ಇದೆ ಎಂದು ಜನರು ಅನ್ನುತ್ತಿರುವರು, ಕಾರಣ ಆ ಮನೆಗೆ ನಾವು ಹೋಗೋಣವೆ, ಬೇಡವೇ ?" ಎಂದು ಗುರುಗಳನ್ನು ಭಕ್ತಿಭಾವದಿಂದ ಕೇಳಿದಳು.

ಸ್ವಾಮಿಗಳು ಪ್ರಸನ್ನ ವದನರಾಗಿ—"ದೇವರಿರುವದು ಕಾಯುವುದಕ್ಕಾಗಿ; ಕಾಡುವದಕ್ಕಾಗಿ ಅಲ್ಲ." ಎಂದು ಹೇಳಿದರು.

ಈ ಮಾತು ಕೇಳಿ ಆಕೆಗೆ ತೀರ ತೃಪ್ತಿ ಆಗಿ—"ಸಾಕ್ರಿ ಅಪ್ಪಾ ! ನನಗೆ ತಾವು ಹೇಳಿದ ಮಾತಿನಿಂದ ಸಮಾಧಾನವಾಗಿದೆ; ಆ ಮನೆಗೆ ನಾವು ಹೋಗುತ್ತೇವೆ." ಎಂದು ಸಂತೃಪ್ತಿಯಿಂದ ನುಡಿದು ಹೊರಟುಹೋದಳು.

ದಿನ ಬೆಳಗಾದರೂ ಪ್ರಾಪಂಚಿಕ ಸಮಸ್ಯೆಗಳನ್ನು ಸ್ವಾಮಿಗಳ ಮುಂದಿಟ್ಟು, ಅದರ ಪರಿಹಾರದ ಮಾರ್ಗದರ್ಶನ ಪಡೆದು ಹೋಗುವವರು ಹೆಚ್ಚು; ಅಂಥವರಿಗೆ ಸ್ವಾಮಿಗಳ ಮಾರ್ಗದರ್ಶನ ಒಂದು ದಾರೀ ದೀಪ !

ಶ್ರೀ ಮಹಾಸ್ವಾಮಿಗಳ ಕಡೆಗೆ ಯಾರೇ ಬರಲಿ ಅವರ ಯಾವುದೇ ಸಮಸ್ಯೆಗೆ ಸೂಕ್ತವಾಗಿ ಸಲಹೆ, ಸೂಚನೆ ನೀಡಿ ಮಾರ್ಗದರ್ಶನ ಮಾಡಿ ಸಂತೃಪ್ತಿ ಪಡಿಸುವರು. ಸದಾಕಾಲ ನಡೆಯುವ ಇದೊಂದು ಸತ್‌ಸಾಂಪ್ರದಾಯ.

## ಹರಿಜನರಿಗೆ ಹೂಮಾಲೆ

ಬಬಲೇಶ್ವರದಲ್ಲಿ ಬಹಳ ದಿನಗಳ ಹಿಂದೆ ಒಂದು ಸಾರ್ವಜನಿಕ ಸಮಾರಂಭದ ಏರ್ಪಾಡಾಗಿತ್ತು; ಅದರ ಅಧ್ಯಕ್ಷಪದವನ್ನು ಶ್ರೀ ಶಾಂತವೀರ ಮಹಾಸ್ವಾಮಿಗಳೇ ವಹಿಸಿದ್ದರು. ಸಮಾರಂಭದ ಎಲ್ಲ

ಕಾರ್ಯಕ್ರಮಗಳು ಗೊತ್ತುಪಡಿಸಿದಂತೆ ಸುಗಮವಾಗಿ ಸಾಗಿದವು; ಸಮಾರಂಭಕ್ಕೆ ಆಗಮಿಸಿದ ಜನರಿಗೆಲ್ಲ ಸಂತೃಪ್ತಿ ಉಂಟಾಗಿತ್ತು.

ಸಮಾರಂಭದ ನಂತರ ಜನರು ಶ್ರೀ ಮಹಾಸ್ವಾಮಿಗಳಿಗೆ ನಮಸ್ಕರಿಸಿ ಆಶೀರ್ವಾದ ತೆಗೆದುಕೊಳ್ಳ ಹತ್ತಿದರು; ಆಗ ಸಮಾರಂಭಕ್ಕೆ ವಿಜಾಪುರದಿಂದ ಆಗಮಿಸಿದ ಹರಿಜನ ಅಧಿಕಾರಿಯೂ ಆದರದಿಂದ ಬಂದು ಸ್ವಾಮಿಗಳಿಗೆ ವಂದಿಸಿದನು.

ಮಹಾಸ್ವಾಮಿಗಳು ಆ ಸಮಯದಲ್ಲಿ ತಮ್ಮ ಕೊರಳಿಗೆ ಹಾಕಿದ ಮಾಲೆಯನ್ನು ತೆಗೆದು ಸಹಜವಾಗಿ ಅವನ ಕೊರಳಿಗೆ ಹಾಕಿ ಆಶೀರ್ವದಿಸಿದರು.

ಈ ಘಟನೆಯು ಅಲ್ಲಿದ್ದ ಸಾಮಾನ್ಯ ಜನರಮೇಲೆ ಪರಿಣಾಮ ಬೀರಿತು; "ಮಹಾಸ್ವಾಮಿಗಳು ಹರಿಜನ ಅಧಿಕಾರಿಯನ್ನು ಮುಟ್ಟಿ ಮಾಲೆ ಹಾಕಿದರಲ್ಲಾ" ಎಂದು ಕೆಲವರು ತಮ್ಮ ತಮ್ಮಲ್ಲಿ ಮಾತನಾಡ ಹತ್ತಿದರು.

ಈ ವಿಷಯ ಮಹಾಸ್ವಾಮಿಗಳ ಲಕ್ಷಕ್ಕೆ ಬಂದಿತು. ಆಗ ಅವರು—"ನಾನು ಈ ಹರಿಜನ ಅಧಿಕಾರಿಗಳಿಗೆ ಮುಟ್ಟಿ ಮಾಲೆ ಹಾಕಿದ್ದರಿಂದ ನಾನು ಮೈಲಿಗೆ ಆದೆನೆಂಬ ಭಾವನೆ ನಿಮ್ಮಲ್ಲಿದ್ದರೆ ನನ್ನನ್ನೇ ಮುಟ್ಟುವದನ್ನು ಬಿಟ್ಟು ಬಿಡಿರಿ." ಎಂದು ಸ್ಪಷ್ಟವಾಗಿ ಸಾರಿ ಹೇಳಿದರು.

ಈ ಮಾತು ಕೂಡಿದ ಜನರಲ್ಲಿ ವಿಚಾರ ಗೊಂದಲಕ್ಕೆ ಈಡುಮಾಡಿತು. "ಮಹಾಸ್ವಾಮಿಗಳು ಮೈಲಿಗೆ ಆಗುವದು, ಅವರನ್ನು ಮುಟ್ಟದಿರುವದು ಸಾಧ್ಯವೆ?" ಎಂಬ ವಿಚಾರ ಜನರಲ್ಲಿ ಅರಿವಾಗಲು ತಡವಾಗಲಿಲ್ಲ.

## ಸಿಡಿದೆದ್ದ ವೀರತನ

ಶ್ರೀ ಶಾಂತವೀರ ಮಹಾಸ್ವಾಮಿಗಳ ಹೃದಯ ತಾಯಿ ಹೃದಯ. ಒಂದು ದಿವಸ ಊರ ಹೊರಗಿನ ಮಠದಲ್ಲಿ ಶಾಂತವಾಗಿ ಒಬ್ಬರೇ ಸ್ವಸ್ಥವಾಗಿ ಕುಳಿತಿದ್ದರು. ಆ ಸಮಯವನ್ನು ಸಾಧಿಸಿ ಇಬ್ಬರು, ಮೂವರು ಪುಂಡರು ಅಲ್ಲಿಗೆ ಬಂದು ಯಾವ ಸಮಯ ಸಂದರ್ಭ ಎಣಿಸದೆ ಒಂದೇ ಸಮನೆ ಅನುಚಿತ ನುಡಿಗಳನ್ನಾಡ ಹತ್ತಿದರು.

ಮೊದಮೊದಲು ಸ್ವಾಮಿಗಳು ಸಂಯಮದಿಂದಲೇ ಇದ್ದರು. ಆದರೆ ಆ ಪುಂಡರು ಸ್ವಾಮಿಗಳ ಸಹನೆಯನ್ನು ದುರುಪಯೋಗಪಡಿಸಿಕೊಂಡು ಮತ್ತೆ ಮನಸ್ಸಿಗೆ ಬಂದಂತೆ ಕೂಗಾಡತೊಡಗಿದರು.

ಆ ಅಸಭ್ಯ ವ್ಯಕ್ತಿಗಳಿಗೆ ಸರಿಯಾದ ಪಾಠ ಕಲಿಸಬೇಕೆಂದು ತಾವು ಕುಳಿತ ಸ್ಥಳದಿಂದ ಸಟೆದು ಎದ್ದು ನಿಂತು, ತಾವು ಧರಿಸಿದ್ದ ಕಾವಿವಸ್ತ್ರ ಹರಿದು ಹಾಕಿ "ಈಗ ಬನ್ನಿ. ನೀವು, ನಾನು ಒಂದೇ. ನಿಮ್ಮಂತೆ ನಾನೂ ಲೌಕಿಕನೇ ಎಂದು ಭಾವಿಸಿರಿ. ನೀವು ಬಂದ ಉದ್ದೇಶವೇನು ವಿಶದೀಕರಿಸಿರಿ" ಎಂದು ಕೇಳಿದರು. ಶಾಂತವೀರರು ಭದ್ರವೀರರಾದರು.

ಸ್ವಾಮಿಗಳು ಒಮ್ಮಿಂದೊಮ್ಮೆ ತಮ್ಮ ಸ್ವರೂಪವನ್ನೇ ಬದಲಿಸಿ ಸಿಡಿದೆದ್ದುದನ್ನು ಕಂಡು ಆ ಪುಂಡರು ಬಾಯಿ ಬತ್ತಿಹೋಯಿತು. ಒಂದೂ ಮಾತ ಆಡಲಾರದೆ ಇದ್ದಕ್ಕಿದ್ದಂತೆ ಕಾಲಿಗೆ ಬುದ್ಧಿ ಹೇಳಿ ಹೊರಟು ಹೋದರು.

ಹೀಗೆ ಅಸುರಿಶಕ್ತಿಗಳನ್ನು ವೀರತನದಿಂದ ಎದುರಿಸದಿದ್ದರೆ ಅವು ದೂರಾಗಲಾರವೆಂಬುದನ್ನು ಸ್ವಾಮಿಗಳು ತೋರಿಸಿದರು. ಪುಂಡರು ಹೋದನಂತರ ಸ್ವಾಮಿಗಳು ಎಂದಿನಂತೆ ಶಾಂತವಾಗಿ ಮಠದಲ್ಲಿ ತಮ್ಮ ಆಸನದಮೇಲೆ ಕುಳಿತು, ಬಂದು ಹೋಗುವವರ ಕ್ಷೇಮ ಸಮಾಚಾರ ವಿಚಾರಿಸ ಹತ್ತಿದ್ದರು.

# ಪ್ರೀತಿಯ ವಸ್ತು ಯಾವುದು ?

**ಹೊಲ ಮನೆಗಳೇ ?**—ಮನುಷ್ಯ ಯೌವನಸ್ಥನಾಗಲು ಮದುವೆಯಾಗಿ ಸಂಸಾರ ಹೂಡಿ ಗೃಹಸ್ಥನಾಗುತ್ತಾನೆ. ಮಕ್ಕಳು ಮರಿ ಪಡೆಯುತ್ತಾನೆ. ತನ್ನ ಪ್ರಪಂಚಕ್ಕಾಗಿ ತನ್ನ ಹಾಗೂ ಹೆಂಡತಿ, ಮಕ್ಕಳ ಉದರ ನಿರ್ವಹಣೆಗಾಗಿ ಅವಲಂಬಿಸಿದ ಹೊಲ, ಮನೆಗಳನ್ನು ಅತಿಯಾಗಿ ಪ್ರೀತಿಸುತ್ತಾನೆ. ಅವುಗಳ ಭದ್ರತೆಗಾಗಿ ಸದಾ ದುಡಿಯುತ್ತಾನೆ. ಬಹಳ ಹಣ, ಬುದ್ಧಿ, ದೈಹಿಕ ಶಕ್ತಿ ಎಲ್ಲವನ್ನೂ ಅವುಗಳಿಗಾಗಿ ವ್ಯಯ ಮಾಡುತ್ತಾನೆ.

ಪೈರಿನಿಂದ ತುಂಬಿ ನಿಂತ ಬೆಳೆಯ ಸೊಬಗನ್ನು ನಿಂತು ನೋಡಿ ಆನಂದಿಸುತ್ತಾನೆ. ಮನೆಯ ಕಟ್ಟಡಕ್ಕೆ ಸುಣ್ಣ, ಬಣ್ಣ ಹಚ್ಚಿಸಿ ದೂರದಿಂದ ನೋಡಿ, ಹರ್ಷಪಡುತ್ತಾನೆ. ಆದರೇನು ಮಾಡುವದು? ಕಾಲಗತಿ ಒಂದೇ ತೆರನಾಗಿರುವದಿಲ್ಲ, ಈತನಿಗೆ ಪ್ರಾಪಂಚಿಕ ಅಡಚಣೆ ಉಂಟಾಗುತ್ತದೆ.

ಸಾಲ ಮಾಡಬೇಕಾಗುತ್ತದೆ. ಸಾಲ ಬೆಳೆಯುತ್ತದೆ. ಸಾಲಿಗರು ಹಣಕ್ಕಾಗಿ ಎಡತಾಕುತ್ತಾರೆ. ಕೊನೆಗೆ ಆತನು ಪರಿಸ್ಥಿತಿಯ ಓಘದಲ್ಲಿ ಸಿಕ್ಕು, ಯಾವದನ್ನು ಕಂಡು ಹೆಮ್ಮೆ ಪಡುತ್ತಿದ್ದನೋ, ಯಾವದರಲ್ಲಿ ಅಪಾರ ಅನುರಾಗ ಬೆಳೆಸಿಕೊಂಡಿದ್ದನೋ ಅಂಥ ಹೊಲವನ್ನೇ ಒತ್ತೆ ಇಡುತ್ತಾನೆ, ಅಡವು ಹಾಕುತ್ತಾನೆ. ಮನೆಯ ಕಮತವನ್ನೇ ಮುರಿಯುತ್ತಾನೆ.

ಬರಬರುತ್ತ ಹೊಲದಂತೆ ಮನೆಯನ್ನೂ ಅನ್ಯರಿಗೆ ಬಿಟ್ಟುಕೊಡುತ್ತಾನೆ. ಪರಿಸ್ಥಿತಿ ಹೀಗೆ ಮಾಡಿತು. ಆತನ ಪ್ರೀತಿಯ ವಸ್ತುಗಳಿಂದ ಅವನನ್ನು ಅಗಲಿಸಿತು. ಆದರೂ ಈಗ ಆತ ನೆಮ್ಮದಿಯಿಂದ ಇದ್ದಾನೆ. ಆತನಿಗೆ ನೆಮ್ಮದಿ ಕೊಡುವ ಪ್ರೀತಿಯ ವಸ್ತುಗಳು ಇನ್ನೂ ಬೇರೆ ಇವೆ. ಅಂತಲೇ ಅವುಗಳಿಗಾಗಿ ಅವನ್ನು ಬಿಟ್ಟುಕೊಡಲು ಸಿದ್ಧನಾದ. ಆ ವಸ್ತುಗಳು ಯಾವವು ಇರಬೇಕು ? ಹೀಗೆಯೇ ಮುಂದೆ ನೋಡುತ್ತ ಹೋಗುವಾ.

**ಹೆಂಡತಿಯೇ ?**—ಪುರುಷನಿಗೆ ಆತನ ಜೀವನದ ಸಂಗಾತಿಯಾಗಿ ಹೆಂಡತಿ ಸಂಗಸೌಖ್ಯ ನೀಡುತ್ತಿರುತ್ತಾಳೆ. ಆತನಿಗೆ ಪ್ರೀತಿಯ ವಸ್ತು ಆಗಿರುತ್ತಾಳೆ. ಈ ಪ್ರೀತಿ ಎಲ್ಲಿಯವರೆಗೆ? ಆಕೆಯು ಇವನ ಇಚ್ಛೆಯಂತೆ ಅವನಿಗೆ ಅಧೀನವಾಗಿ ನಡೆಯುತ್ತಿರುವವರೆಗೆ ಮಾತ್ರ.

ಎಂದು ಆಕೆಯ ಒಂದು ದೋಷ ದರ್ಶನವಾಯಿತೋ, ತನ್ನ ಮೇಲಿನ ಶ್ರದ್ಧೆಯನ್ನು ಕಡಿಮೆ ಮಾಡಿದಳೋ, ಅವನ ಇಚ್ಛೆಯ ವಿರುದ್ಧ ನಡೆಯ ಹತ್ತಿದಳೋ ಅಂದೇ ಈತ ಪ್ರೀತಿಯಿಂದ ದೂರಾಗುತ್ತಾನೆ.

ಅನೇಕ ವರ್ಷ ತನ್ನ ಅತಿ ಪ್ರೀತಿಯ ವಸ್ತುವಾದ, ತನ್ನ ಅಂಗದ ಅರ್ಧ ಭಾಗವಾಗಿ ನಡೆದುಕೊಂಡು ಬಂದ ಹೆಂಡತಿಯನ್ನು ಆಕ್ಷಣ ಬಿಟ್ಟುಕೊಡಲಿಕ್ಕೆ ಆತ ಸಿದ್ಧನಾಗುತ್ತಾನೆ.

ಯಾವುದರ ಸಲುವಾಗಿ? ಹೆಂಡತಿಗಿಂತಲೂ ಹೆಚ್ಚು ಪ್ರೀತಿಯ ವಸ್ತು ಇನ್ನೊಂದು ಅವನಲ್ಲಿ ಇದೆ. ಅದರ ಹಿತಕ್ಕಾಗಿಯೇ ಹೆಂಡತಿಯನ್ನು ತೊರೆದ.

**ಧನವೇ?**—ಬಹು ದೈಹಿಕ ಪರಿಶ್ರಮದಿಂದ, ತನ್ನ ಬುದ್ಧಿಬಲದಿಂದ ಬಹಳ ಹಣ ಗಳಿಸಿ, ಮಿತವ್ಯಯದಿಂದ ಉಳಿಸಿ ಧನದ ದೊಡ್ಡ ಮೊತ್ತವನ್ನು ಕೂಡಿಹಾಕುತ್ತಾನೆ. ಅದನ್ನು ನಿತ್ಯ ಎಣಿಸಿ ಆನಂದಪಡುತ್ತಾನೆ. ತಿಜೋರಿಯಲ್ಲಿ ಭದ್ರವಾಗಿಟ್ಟು ಅದರ ಕೀಲಿ ಕೈಯನ್ನು ಬಹಳ ಜಾಗರೂಕತೆಯಿಂದ ತನ್ನ ನಡುವಿನಲ್ಲಿ ಕಟ್ಟಿಕೊಂಡಿರುತ್ತಾನೆ.

ಒಂದು ರಾತ್ರಿ ಈ ಶ್ರೀಮಂತನ ಮನೆಗೆ ಧರೋಡೆಕೋರರು ಬರುತ್ತಾರೆ. ಕೈಯಲ್ಲಿ ಚೂರಿ ಹಿಡಿದು ಇದರಿಂದ ನಿನ್ನನ್ನು ಇರಿದು ಬಿಡೋಣವೆ ? ಅಥವಾ ಸುಮ್ಮನೆ ತಿಜೋರಿ ಕೀಲಿ ಕೈ ಕೊಡುತ್ತಿಯೋ? ಎಂದು ಕೇಳಿದಾಗ ಈತ ಆಕ್ಷಣ ತಡಮಾಡದೆ ಕೀಲಿ ಕೈ ಅವರಿಗೆ ಒಪ್ಪಿಸಿ ಬಿಡುತ್ತಾನೆ.

ಯಾವ ಹಣಕ್ಕಾಗಿ ಈತ ದಿನವಿಡೀ ಅವಿಶ್ರಾಂತ ದುಡಿದು ಗಳಿಸಿದ್ದನೋ. ಅದನ್ನು ನಿತ್ಯನೋಡಿ ಮುಟ್ಟಿಎಣಿಸಿ ಸಂತೋಷಪಡುತ್ತಿದ್ದನೋ ಅಂಥ ಹಣವನ್ನು ಒಮ್ಮೆಲೆ ಬಿಟ್ಟುಬಿಡುತ್ತಾನೆ. ಏತಕ್ಕಾಗಿ?

ಧನಕ್ಕಿಂತಲೂ ಹೆಚ್ಚು ಪ್ರೀತಿಯದಾದ ಇನ್ನೊಂದು ವಸ್ತು ತನ್ನಲ್ಲಿ ಇರಲೇಬೇಕು. ಅದರ ಸಲುವಾಗಿಯೇ ಇಷ್ಟು ದಿನ ಪ್ರೀತಿಯ ವಸ್ತುವಾಗಿದ್ದ ಆ ಧನವನ್ನು ಬಿಟ್ಟುಕೊಟ್ಟ.

**ಅವಯುವಗಳೇ ?**— ಗ್ರಾಮವಾಸಿಯಾದ ಆತನು ಹೊಲಕ್ಕೆ ಹೋಗುವಾಗ ದಾರಿಯಲ್ಲಿ ಒಂದು ವಿಷಕಾರಿ ಮುಳ್ಳನ್ನು ತುಳಿಯುತ್ತಾನೆ. ಅದು ಬಹಳ ಆಳಕ್ಕೆ ನೆಟ್ಟಿರುತ್ತದೆ. ಬೇಗನೆ ಹೊರಕ್ಕೆ ಬರುವದಿಲ್ಲ. ಆತ ಅಲಕ್ಷಮಾಡುತ್ತಾನೆ. ಕಾಲು ಊದಿಕೊಳ್ಳುತ್ತದೆ.

ಬೆಲ್ಲ ಹಚ್ಚಿ ಕಾಯಿಸುವದು ಇತ್ಯಾದಿ ಮೇಲು ಉಪಚಾರ ಮಾಡುತ್ತ ಕಾಲ ಹರಣ ಮಾಡುತ್ತಾನೆ. ಅದರಿಂದೇನೂ ಆಗುವದಿಲ್ಲ. ತಿಂಗಳಾವಧಿ ಕಾಲಗತಿಸಿರಲು ಆತನ ಕಾಲಿನಲ್ಲಿ ಅತೀವ ವೇದನೆಯಾಗಿ ಆತನಿಗೆ ಬಹಳ ಕಷ್ಟವಾಗುತ್ತದೆ.

ಆಗ ಅನಿವಾರ್ಯವಾಗಿ ಸಮೀಪದ ನಗರದ ದೊಡ್ಡ ದವಾಖಾನೆಯಲ್ಲಿ ತೋರಿಸುತ್ತಾನೆ. ಅವಧಿ ಮೀರಿದ ಈ ಹಣ್ಣಾಗಿದ್ದ ಕಾಲನ್ನು ಡಾಕ್ಟರರು ಪರೀಕ್ಷಿಸಿ "ಇದಕ್ಕೆ ಯಾವ ಉಪಾಯ ನಾಟಲಾರದು. ಒಳಭಾಗದಲ್ಲಿ ಕಾಲು ಕೊಳೆತಿದೆ. ಇನ್ನು ಕೆಲವು ದಿನ ಬಿಟ್ಟರೆ ನಿನ್ನ ಜೀವಕ್ಕೇ ಗಂಡಾಂತರವಿದೆ. ಕಾಲನ್ನು ಕತ್ತರಿಸಿದರೆ ಮಾತ್ರ ನೀನು ಉಳಿಯುವೆ" ಎಂದು ಹೇಳಿಬಿಡುತ್ತಾರೆ.

ಆಗ ಆ ವ್ಯಕ್ತಿ ಏನು ಹೇಳುತ್ತಾನೆ? "ನಾನು ಕುಂಟನಾದರೂ ಚಿಂತೆಯಿಲ್ಲ ನಾಲ್ಕೊಪ್ಪತ್ತು ನಿಶ್ಚಿಂತವಾಗಿ ಬದುಕಿದರಾಯಿತು, ಕಾಲು ಕಡಿದಾದರೂ ನನ್ನನ್ನು ಉಳಿಸಿ." ಎಂದು ವೈದ್ಯರಲ್ಲಿ ಅಂಗಲಾಚುತ್ತಾನೆ.

ನೋಡಿರಿ! ಆತನು ತನ್ನ ಶರೀರಕ್ಕೆ ಹೊಂದಿಕೊಂಡ ಅವಯವವನ್ನು ಬಿಟ್ಟುಕೊಡಲಿಕ್ಕೆ ಸಿದ್ಧನಾದ. ಈ ಅವಯವಕ್ಕಿಂತಲೂ ಹೆಚ್ಚಿನ ಪ್ರೀತಿಯ ವಸ್ತು ಮತ್ತಾವುದೋ ಇರಲೇ ಬೇಕಲ್ಲವೆ? ಅದರ ಕ್ಷೇಮಕ್ಕಾಗಿ ಇದನ್ನು ಬಿಟ್ಟುಕೊಡಲಿಕ್ಕೆ ಸಿದ್ಧನಾದ.

**ದೇಹವೇ ?**— ಜೀವನದಲ್ಲಿ ಯಾವುದೋ ಒಂದು ವಿಷಮಕಾರೀ ಘಟನೆ ಘಟಿಸಿ ಈತನಿಗೆ ಸಮಾಜದಲ್ಲಿ ಮುಖ ಮೇಲೆತ್ತಿ ತಿರುಗಾಡದಂತಾಗುತ್ತದೆ. ಇಲ್ಲವೆ ಯಾವುದೋ ಕಾರಣದಿಂದ ಭೂಮಿಯಮೇಲೆ ಜೀವದಿಂದ ಇರುವುದೇ ಬೇಡವಾಗಿ ಬಿಡುತ್ತದೆ.

ಆಗ ಈತ ಏನು ಮಾಡುತ್ತಾನೆ? ಉರುಲು, ವಿಷಪ್ರಾಶನ ಮುಂತಾದ ಯಾವದೇ ವಿಧಾನದಿಂದ ತನ್ನ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಅಂದರೆ ತನ್ನ ಇಡೀ ದೇಹವನ್ನೇ ಬಿಟ್ಟುಕೊಡಲು ಸಿದ್ಧನಾದನಲ್ಲ! ಅಂದಮೇಲೆ ಈತನಿಗೆ ಜಗತ್ತಿನಲ್ಲಿ ಪ್ರೀತಿಯ ವಸ್ತು ಯಾವದಿರಬೇಕು?

ತನ್ನ ದೇಹದಿಂದ ಭಿನ್ನವಾದ ಹೊಲ-ಮನೆ, ಮಡದಿ-ಮಕ್ಕಳಲ್ಲ, ಗಳಿಸಿದ ಧನವೂ ಅಲ್ಲ, ಇನ್ನು ದೇಹಕ್ಕೆ ಹೊಂದಿಕೊಂಡ ಅವಯುವಗಳೂ ಅಲ್ಲ, ಅದಕ್ಕೂ ಮುಂದುವರೆದು ಇಡೀ ದೇಹವೂ ಅಲ್ಲ. ಇವೆಲ್ಲಕ್ಕೂ ಹೊರತಾಗಿ ಉಳಿದಿರುವ ಪ್ರಿಯ ವಸ್ತುವಾದರೂ ಯಾವುದು?

ಮನುಷ್ಯನ ಆತ್ಯಂತಿಕ ಪ್ರಿಯ ವಸ್ತು ಹೊಲ-ಮನೆಯಲ್ಲ; ಹೆಂಡತಿ-ಮಕ್ಕಳಲ್ಲ; ಗಳಿಸಿದ ಧನಕನಕವಲ್ಲ; ದೇಹದ ಅಂಗಾಂಗಗಳಲ್ಲ; ಕೊನೆಗೆ ತನ್ನ ಇಡೀ ಶರೀರವೂ ಅಲ್ಲ; ಇವನ್ನೆಲ್ಲ ಮೀರಿದ ಆತ್ಯಂತಿಕ ವಸ್ತು ಒಂದಿದೆ. ಅದಾವುದೆಂದರೆ— ಯಾವದಕ್ಕಾಗಿಯೇ ಇವೆಲ್ಲವುಗಳು ಇರುವವೋ ಆ ಅಪ್ರತಿಮವಾದ, ಅಪರೂಪವಾದ ಅಮರ ವಸ್ತುವೇ "ಆತ್ಮಾ."

ನಮ್ಮ ಶರೀರದ ಅಂತರ್ಯದಲ್ಲಿ ಹುದುಗಿದ ಆತ್ಮವೇ ನಮಗೆ ಎಲ್ಲಕ್ಕಿಂತ ಮಿಗಿಲಾದ ಪ್ರಿಯಕರವಾದ ವಸ್ತುವೆಂದು ಇದರಿಂದ ಸತ್ಯವಾಯಿತಲ್ಲವೆ?



## ಶ್ರೀ ಶಾಂತವೀರ ಸ್ವಾಮಿಗಳು ವಿರಚಿಸಿದ ಅಷ್ಟಕಗಳು

### ೧. ಪರಶಿವಾಷ್ಟಕಂ

(ಶಾರ್ದೂಲವಿಕ್ರೀಡಿತಂ)

ಶ್ರೀಮನ್ಮಂಗಲ ರೂಪಮಪ್ಯವಿರತಂ ರಕ್ಷೋಽಸ್ಥಿ ಮಾಲಾವೃತಂ ।
ನಿತ್ಯಂ ಶಾಂತ ಗುಣಾನ್ವಿತಂ ನಿರುಪಮಂ ರುದ್ರಂ ಸ್ವಭಾವಾತ್ಪರಂ ॥
ಸ್ವರ್ಣಾಕ್ಷ್ಯಾಧರ ಹಸ್ತಮಪ್ಯನುದಿನಂ ವ್ಯಾಲಸ್ರಜಂ ಶಂಕರಂ ।
ಕಾರುಣ್ಯಾಮೃತ ಸಾಗರಂ ಗುರುವರಂ ವಂದೇ ಸದಾಪಾತುಮಾಂ ॥ ೧ ॥

ದುಗ್ಧಾಬ್ಧ್ಯುದ್ಗತ ಕಾಲಕೂಟ ಭಯ ದಿಗ್ಭ್ರಾಂತಾನ್ ಧೃತಾನ್‌ವಿಹ್ವಲಾನ್ ।
ಬ್ರಹ್ಮೋಪೇಂದ್ರಮುಖಾಮರಾನ್ ಕರುಣಯಾ ಸಂವೀಕ್ಷ್ಯಹಾಲಾಹಲಂ ॥
ನಿಶ್ಯಂಕಂಸಹಸೈವ ಕಂಠಕುಹರೇ ಸಂಸ್ಥಾಪ್ಯಲೋಕತ್ರಯಂ ।
ರಕ್ಷಂತಂ ನಿಜಲೀಲಯಾ ಪಶುಪತಿಂ ಭಕ್ತ್ಯಾಭಜೇಪಾವನಂ ॥ ೨ ॥

ಬ್ರಹ್ಮೇಂದ್ರಾಮರ ಮುಖ್ಯ ದೇವನಿವಹೈಃ ಸಂಪ್ರಾರ್ಥಿತಸ್ಸನ್‌ಪುರಾ ।
ಕ್ಷೋಣೀಂಸ್ಯಂದನಮರ್ಕತಃ ಶೃತಿತತಿಂ ಪದ್ಮಾಸನಿಂಸಾರಥಿಂ ॥
ಮೇರುಂಕಾರ್ಮುಖಮಚ್ಯುತಂ ಗುರುಶರಂ ಬರ್ಹಿರ್ಮುಖಾನ್ ಸೈನಿಕಾನ್ ।
ಕೃತ್ವಾಯಸ್ತ್ರಿಪುರಂ ಕ್ಷಣಾದಜಯದೀಶಾನಂ ತಮೀಡೇಮುದಾ ॥ ೩ ॥

ಭಕ್ತಶ್ರೇಷ್ಠ ಭಗೀರಥೇನ ನಿತರಾಂ ಸಂಯಾಚಿತಾ ಸ್ವರ್ಣದೀ ।
ಆಯಾಂತೀ ತ್ರಿದಿವಾದ್ಧರೇಣ ಝಟಿತಿ ವ್ಯಾಪ್ತಾಂಬರಾ ಸರ್ವತಃ ॥
ಪ್ರೀತ್ಯಾಯೇನ ತೃಣಾಗ್ರಲಗ್ನತುಹಿನಶ್ಲಕ್ಷ್ಣೋಪಮಾಸಂಭೃತಾ ।
ತಂ ಭಕ್ತ್ಯಾಪ್ರಣಮಾಮಿ ಸಂತತ ಮಹೋ ವಾಙ್ಮಾನಸಾಗೋಚರಂ ॥ ೪ ॥

ವೈಕುಂಠಸ್ತುಪುರಾ ಸಹಸ್ರಕಮಲೈಸ್ತ್ವಾಂಪೂಜಯನ್ ಪ್ರತ್ಯಹ ।
ಮೇಕಸ್ಮಿನ್ ಕಮಲೇ ಕದಾಚಿದಸತಿಸ್ವಾನೇಥ ತಸ್ಯಪ್ರಭೋ ॥
ದತ್ವೈಕಂ ಭವತೇ ಸ್ವನೇತ್ರಕಮಲಂ ಚಕ್ರಾಯುಧಂಪ್ರಾಪ್ಯ ಚ ।
ತ್ರೈಲೋಕ್ಯಾಧಿಪತಿತ್ವಮಾಪ ಭಗವನ್ ದೇಹೀಷ್ಟಸಿದ್ಧಿಂ ಸದಾ ॥ ೫ ॥

ಕಂದರ್ಪಃ ಶಲಭಾಯತೇ ದ್ರುತತರಂ ಯಸ್ಯೋಗ್ರನೇತ್ರಾನಲೇ ।
ನಾಭೀಪದ್ಮಸಮುದ್ಭವೋನ್ನತಶಿರಶ್ಚಿನ್ನಂಚ ಯೇನಾಚಿರಂ ॥
ಯಸ್ಯಾಭಾತಿ ಕಿಶೋರ ಶೀತಲಕರಃ ಸಾರೋತ್ತಮಾಂಗೇಭೃಶಂ ।
ತಸ್ಮಿನ್ ಮೇಹೃದಯಂ ಸುಖೇನರಮತಾಂ ತ್ರೈಲೋಕ್ಯನಾಥೇಸದಾ ॥ ೬ ॥

ಪ್ರಾಪ್ತೇಷೋಡಶವತ್ಸರೇ ನಿಜಸಮಭ್ಯರ್ಚೈಕಲೀನಂಪರಂ ।
ಮಾರ್ಕಂಡೇಯಮುನಿಂ ಪಕರ್ಷತಿ ಮಹಾಪಾಶೇನ ವೈವಸ್ವತೇ ॥
ಶೂಲೇನೋರಸಿ ತಾಡಯನ್ ದೃಢತರಂ ಲಿಂಗಾದ್ವಿನಿರ್ಗತ್ಯಯಃ ।
ಸಂತ್ರಸ್ತಂತಮಪಾಲಯದ್ವಸತು ಮೇಸ್ವಾಂತೇ ಸಮೃತ್ಯುಂಜಯಃ ॥ ೭ ॥

ನೀಹಾರಾಚಲನಂದಿನೀ ಮುಖಪಯೋಜಾತದ್ವಿರೇಫಂ ಶಿವಂ ।
ಗಂಗಾಲಿಂಗಿತತುಂಗಪಿಂಗಲಜಟಾಸಾಂಗಂ ಕುರಂಗಾಂದರಂ ॥
ಭಾಸ್ವಚ್ಛೀತಲರುಗ್‌ಹುತಾಶನಯನಂ ವ್ಯಾಲತ್ವಗಾಚ್ಛಾದನಂ ।
ಶ್ರೀನಾಥಾದಿ ಸಮಗ್ರ ದೇವನಿಕರೈಃ ಸಂಪೂಜ್ಯಪಾದಂ ಭಜೇ ॥ ೮ ॥

ಅಷ್ಟಕಂ ರಚಿತಂ ಪುಣ್ಯಮಿದಂಪಟ್ಟಾಧಿಕಾರಿಣಾ ।
ಪ್ರಾತಃಪಠಂತಿಯೇ ನಿತ್ಯಂ ತೇಯಾಂತಿಪರಮಾಂಗತಿಂ ॥



# ಅಥಣಿ ಮುರುಘೇಶಾಷ್ಟಕಂ

ಶ್ರೀಮನ್ನಿತ್ಯನಿರಂಜನಂ ಪ್ರಭುಗುರೂತ್ತಂಸಾನ್ವಯಾಬ್ಧೇರ್ವಿಧುಂ ।
ಮುಕ್ತ್ಯನ್ಮತ್ತನಿತಂಬಿನೀರತಮಪಿ ತ್ಯಕ್ತಾಂಗನಾ ಸಂಸ್ಮೃತಿಂ ॥
ರುದ್ರಾಕ್ಷಾಭರಣಪ್ರಿಯಂ ಹರಿವಿರಿಂಚ್ಯಾದ್ಯೈಸ್ಸದಾವಂದಿತಂ ।
ಗೇಹಂ ಸದ್ಗುಣಸಂಹತೇರ್ಗುರುವರಂ ವಂದೇಸುಭಕ್ತ್ಯಾನಿಶಂ ॥ ೧ ॥

ಶಕ್ರ ಶ್ರೀಧವ ಮುಖ್ಯ ದೇವಪದವೀಂ ನ್ಯಕ್ಕಾರ ಕಾರಿನ್‌ಗುರೋ ।
ಮಲ್ಲೀನಾಂಸ್ತಬಕಾವದಾತ ಭಸಿತೇನಾಭಾಸಿ ಭಾಲಸ್ಥಲ ॥
ಹಾರ್ದಸ್ವಾಂತನಿಧಾಪಿತಾದ್ರಿ ತನುಜಾಜಾನೆ ದಯಾಸಾಗರ ।
ಸ್ವಾಮಿನ್ ಶ್ರೀಮುರುಘೇಂದ್ರ ನಿರ್ಮಲತರಂ ಬುದ್ಧಿಂಸದಾ
ದೇಹಿಮೇ ॥ ೨ ॥

ಮಿತ್ರೋಽಸ್ತಂತ್ರಪಯಾಪ್ರಯಾತಿ ಭವತಸ್ತೇಜಸ್ತಮೋಹಾರಕಂ ।
ಗತ್ವಾಕಾಶಪದಂ ನಿರೀಕ್ಷ್ಯ ವಿಧುನಾ ಶಾಂತಿಃ ಪುರಾಶಿಕ್ಷ್ಯತ ॥
ಲಬ್ಧಸ್ತಬ್ಧವದಗ್ನಿಗರ್ಭತರುವದ್ದೇದೀಪ್ಯಮಾನಃಸ್ವಯಂ ।
ಸರ್ವಾತ್ಮನ್ನತಕಲ್ಪಭೂಜ ನಿಜಬೋಧೇನೈವ ಮಾಮುದ್ಧರ ॥ ೩ ॥

ಕಲ್ಯಾಣೋರ ನಿಶಾಂತಶೇವ ಏಪಿ ಸದಾ ಧ್ಯಾನಾಭಿಲಾಷೋಽಸ್ತಿಚೇತ್ ।
ಲಭ್ಯಶ್ರೀಮುರುಘೇಂದ್ರಯೋಗಿ ಚರಣಾಬ್ಜಂ ಧ್ಯಾಯತಾಂ ನಿತ್ಯಶಃ ॥
ಭದ್ರಸ್ವಾಂತ ತವಾಪಿನಿರ್ವೃತಿಪದೇ ವಸ್ತುಂ ದೃಢೇಚ್ಛಾಸ್ತಿ ಶ ।
ಕ್ತಂತ್ವಂ ಭಕ್ತಿಪುರಸ್ಸರೇಣ ಭಜ ತತ್ಪೂಜ್ಯಾಂಘ್ರಿ ಪಾಥೋರುಹಂ ॥ ೪ ॥

ಸಂಪದ್ಗ್ರೇಂದ್ರಿಯ ದುರ್ವಿಕಾರರಹಿತಂ ವೈರಾಗ್ಯಭಾಗ್ಯಾನ್ವಿತಂ ।
ಮೂಲಚ್ಛೇದಕರಂ ಭವೋಪಲತತೇಃ ಶ್ರೀಕಾಂತಯೋಗಾದರಂ ॥
ಹಂಸಂವಿಷ್ಟಪಮಾನಸಾಖ್ಯ ಸರಸೊ ಭಕ್ತ್ಯಾ ಸುಸಾಧ್ಯಂಮನಸಾ ।
ಕ್ಕೇಲಿಂಪ್ರಾಣಭೃತಾಂ ಪ್ರವೀಕ್ಷ್ಯ ಸಹಸಾಪ್ರೀತ್ಯಾಹಸಂ ತಂಭಜೇ ॥ ೫ ॥

ಇಂದ್ರೋಪೇಂದ್ರ ಮಹೀಪತಿಪ್ರಭೃತಯಃ ಪಾದದ್ವಯಂಯಸ್ಯಬರ್ ।
ಹತ್ಪಿಡ್ಪಿರ್ಮುಕುಟಸ್ಥರತ್ನನಿವಹೈರ್ನೀರಾಜರ್ಯಂತಿಸ್ವಯಂ ॥
ಪರ್ಣಾಹಾರ ಪರಾಯಣೈರ್ವಮುನಿಜನೈ ಮೃಗ್ಯಂಸದಾಮಾನಸೇ ।
ರಮ್ಯಸ್ವಾಂತಮಹೋತ್ಸಲೇ ನಿಜನೃಣಾಮೀಡೇರಿರಂಸುಂಮುದಾ ॥ ೬ ॥

ಸುಪ್ರೇಮಾನ್ವಿತ ಭಕ್ತಿ ಸುಂದರವಧೂ ವಿಶ್ಲಿಷ್ಟಗಾತ್ರೋಽಪಿಚಿತ್ ।
ಖಿಡ್ಗೋಚ್ಛಿನ್ನ ಶರೀರ ಮೋಹಲತಿಕ ಶ್ರೀಯೋಗಿರಾಡಗ್ರಣೀಃ ॥
ವರ್ತೇಹಂ ಭಗವನ್ ಪರಾಭವಪದೇಽನಾರ್ಯಪ್ರಸಂಗಾನ್ಯದಾ ।
ನೀಯಂತಾಂ ಕರಣಾದಯಸ್ತವಪದೇ ದೇವಾರ್ತಸಾಧೋಮಮ ॥ ೭ ॥

ಯಃಸ್ತುತ್ಯೋವಿಬುಧೈರ್ಭವಾರ್ತಜನತಾಯಂಯಾತಿ ಸೌಖ್ಯಾಪ್ತಯೇ ।
ಲೀಲೋಲ್ಲಂಘಿತ ಆಶುಯೇನ ಭವಪಾಥೋಧಿಸ್ತಯಸ್ಮೈ ನಮಃ ॥
ಯಸ್ಮಾದ್ವಿಶ್ವಮಿದಂ ಸಮಸ್ತಮಮಲಂ ಯಸ್ಯೈಕ ಕೀರ್ತಿರ್ದಿಶಾ ।
ಮಂತೇಭಾತಿ ವಿನೋದ ಭೌತಿಕತನುರ್ಯಸ್ಮಿಂ ಸ್ತಮೇವಂಸ್ತುವೇ ॥ ೮ ॥

ಶ್ರೀ ಬಬ್ಬುಲೇಶ್ವರ ಪುರಸ್ಥ ಹಿರೇಮಠಸ್ಯ ।
ಪಟ್ಟಾಧಿಕಾರಿರಚಿತಾಷ್ಟ ಕಮಿಷ್ಟದಾಯೀ ॥
ಪ್ರಾತಃಪಠೇಯುರನಿಶಂ ಸ್ಥಿರಮಾನಸಾಸ್ತೇ ।
ಯಾಂತೀತಿ ತೇಶಿವಪುರಂ ಕಥಯಾಮಿ ಕಿಂನು ॥ ೯ ॥



ವಿ.ಸೂ.—ಈ ಅಷ್ಟಕದ ಆದ್ಯಕ್ಷರಗಳನ್ನು ಕೂಡಿಸಿ ಓದಿರಿ.

# ಬಿದರೀ ಕುಮಾರಸ್ವಾಮ್ಯಷ್ಟಕಂ



ಶ್ರೀಮತ್ಪ್ರಭೂಚ್ಚತರ ವಂಶಪಯೋಧಿಚಂದ್ರ ।
ದರ್ಪಾತಿವೇಗಭರಭೇದಿತ ಶೈಲಕುಕ್ಷ್ಯಾಃ ॥
ಅನ್ವರ್ಥನಾಮ ಪರಿಶಾಲಿ ಮಲಾಪಹಾರ್ಯಾಃ ।
ತೀರಸ್ಥಗಹ್ವರ ವಿಹಾರಿ ಕುಮಾರಯೋಗಿನ್ ॥ ೧ ॥

ಮಾಸಾಷ್ಟಕಾವಧಿಯಮಂ ಪರಿಗೃಹ್ಯ ದೇವ ।
ವ್ಯಾಘ್ರಾದಿ ಭೀಮಮೃಗವೇಷ್ಟಿತ ಕಂದರಾಯಾಂ ॥
ತತ್ರಾನ್ಯಮೃಗೈಃ ಪ್ರತಿದಿನಂ ಪರಿಸೇವಿತಾಂಘ್ರೇ ।
ವಾಚಾಮಗೋಚರಮಹತ್ವ ಕುವರಯೋಗಿನ್ ॥ ೨ ॥

ಏವಂಚತಾದೃಶಿ ಭಯಂಕರಕಂದರಾಯಾಂ ।
ಯೋಗೇನಸಾಧಿತ ಸುನಿರ್ಮಲ ಚಿತ್ತವೃತ್ತೇ ॥
ಪರ್ಣಾಂಬು ಮುಖ್ಯ ಪರಿಕಲ್ಪಿತವೃತ್ತಿಮಾತ್ರ ।
ಸಂತೋಷಸಾಗರ ನಿಮಗ್ನ ಕುಮಾರಯೋಗಿನ್ ॥ ೩ ॥

ನಿರ್ದಿಷ್ಟಕಾಲಮತಿಲಂಘ್ಯ ಪುರಾಭಿಗಾಮಿನ್ ।
ಸಂದರ್ಶನೋತ್ಸುಕ ಸಹಸ್ರ ಜನಾಪರೋಕ್ಷಂ ॥
ಸೇವಾಸಮಾಗತ ಭಯಾನ್ವಿತ ಭಕ್ತನಮ್ರ ।
ವ್ಯಾಘ್ರೋತ್ತಮಾಂಗಗತಹಸ್ತ ಕುಮಾರಯೋಗಿನ್ ॥ ೪ ॥

ವೈರಾಗ್ಯಶೀಲ ನಿತರಾಂವರ ಜಂಗಮಾನಾಂ ।
ಸೇವಾಚಿಕೀರ್ಷು ಹೃದಯೇನ ವಿರಾಜಮಾನ ॥
ಸ್ವಾಮಿಂಸ್ತವಾಂಘ್ರಿಸರಸೀರುಹಮಾದರೇಣ ।
ವಂದೇ ಸದಾ ತ್ರಿಕರಣೇನ ಕುಮಾರಯೋಗಿನ್ ॥ ೫ ॥

ಸದ್ಧರ್ಮರೂಪ ಬಸವೇಶ್ವರ ಸತ್ಕಥಾಯಾಃ ।
ಸಂಕೀರ್ತನೇ ಸಮುಪಗತ್ಯ ಸುಜಂಗಮೇಭ್ಯಃ ॥
ಪಕ್ವಾನ್ನಮನ್ಯದಪಿವಾಂಛಿತ ವಸ್ತುಜಾತಂ ।
ಯಚ್ಛನ್ಮುದಾ ಬಸವರಾಜ ಕುಮಾರಯೋಗಿನ್ ॥ ೬ ॥

ಶ್ರೋತುಂ ಚರಿತ್ರಮನಘಂ ಬಸವಸ್ಯ ಭಕ್ತ್ಯಾ ।
ಚಾಗತ್ಯ ಚಾಥಣಿ ಮಹಾಮುರುಘೇಶ್ವರೇಣ ॥
ಭೂರುದ್ರ ಭೋಜನಯುತೇ ಪ್ರವಿರಾಜಮಾನೇ ।
ಬಾಹ್ಯಾಂಗಣೇಸತಿ ಮಠಸ್ಯ ಕುಮಾರಯೋಗಿನ್ ॥ ೭ ॥

ಭಕ್ತೇಷು ನೀಲಗಿರಿವದ್ವಿತತಾಭ್ರವೃಂದಂ ।
ಸಂವೀಕ್ಷ್ಯವಿಹ್ವಲಮನಸ್ಸು ಚ ವರ್ಷಭೀತ್ಯಾ ॥
ತತ್ಸ್ಥಾನಮಾತ್ರ ವಿನಿವಾರಿತ ಭೂರಿವೃಷ್ಟೇ ।
ಯಾಚೇತವಾಂಘ್ರಿಭಜನಂ ತು ಕುಮಾರಯೋಗಿನ್ ॥ ೮ ॥

ಶ್ರೀಮತ್ಪಾವನ ಬಬ್ಬುಲೇಶ್ವರಪುರೀ ಪಟ್ಟಾಧಿಪೇನೋದಿತ ।
ಮಷ್ಟೈಶ್ವರ್ಯದಮಷ್ಟಕಂ ಪಠತಿಯಃಪ್ರತ್ಯೂಷಕಾಲೇऽನಿಶಂ ॥
ಸೋऽಜ್ಞಾನಾತ್ ಕೃತದೋಷ ಸಂಚಯ ಪರಿತ್ಯಕ್ತಃ ಸುಭಾಗ್ಯಾನ್ವಿತೋ ।
ಭೂತ್ವಾಂತೇ ಶಿವಲೋಕ ಮಾಪ್ನುವಾತೇ ಶ್ರೀಮುಕ್ತಿನಾರ್ಯಾಸಹ ॥ ೯ ॥

# ಬಿದರೀ ಕುಮಾರಸ್ವಾಮಿ ಪಂಚರತ್ನಂ

(ವಸಂತತಿಲಕ ವೃತ್ತ)

ಆಸೇತು ಹೇಮಗಿರಿ ವಿಸ್ಕೃತ ಪಾಂಡುಕೀರ್ತೇ ।
ಪ್ರೋತ್ಫುಲ್ಲ ನೀಲ ಸರಸೀರುಹ ಪತ್ರನೇತ್ರ ॥
ತೇಪಾದ ಪದ್ಮಭಜನಂ ಭಗವನ್ನಿಮೋಹ ।
ಸೇವಾರತಸ್ಯ ಮಮದೇಹಿ ಕುಮಾರಯೋಗಿನ್ ॥ ೧ ॥

ಹೃತ್ಪುಷ್ಪಲಿಷ್ವಸತು ಪಾದಸರೋಜಮಧ್ಯೇ ।
ಸವ್ಯಾಘ್ರಕಂದರ ವಿಹಾರಿ ಸುಮೇಷುಭಂಗ ॥
ಸಚ್ಛಿಷ್ಯ ಘೋರಭವರೋಗ ಭಿಷಗ್ವರೇಣ್ಯ ।
ಮೌನೀಂದ್ರಮಾನಸ ನಿವಾಸ ಕುಮಾರಯೋಗಿನ್ ॥ ೨ ॥

ಸಂಸಾರಘೋರವಿಪಿನೋದರಸಂಚದ್ಭಿಃ ।
ಕಾಮಾದಿಭೀಷಣಮೃಗೈಃಪರಿಪೀಡ್ಯಮಾನಂ ॥
ಮಾಂಪಾಹಿ ದೇವಕೃಪಯಾ ಕರಣಾಗ್ರಗಣ್ಯ ।
ಬ್ರಹ್ಮೈಕಮಾನಸಸದಾತು ಕುಮಾರಯೋಗಿನ್ ॥ ೩ ॥

ಮಂದಾರಕುಂದನವಚೂತವಿಲೋಲಭೃಂಗೇ ।
ಸೇವಂತಿಕಾಬಕುಲ ಚಂದನ ಬಿಲ್ವವೃಕ್ಷೇ ॥
ಕೃಷ್ಣಾತಟೇಮಮನತಿಃ ಪ್ರಚುರಾನು ತಿಷ್ಠನ್।
ಭೂಯಾತ್ತ್ವಾಂಘ್ರಿಯುಗಲೇತು ಕುಮಾರಯೋಗಿನ್ ॥ ೪ ॥

ಪಂಚಾಕ್ಷರೀಪ್ರಿಯ ಕರಸ್ಥನಿಜೇಷ್ಟಲಿಂಗ ।
ತ್ರ್ಯಪುಂಡ್ರಶಾಂಕಿತ ವಿಶಾಲಸುಫಾಲದೇಶ ॥
ಭಾಸ್ವತ್‌ಸುವೇಣುಪುರವಾಸ ಸದಾಮುದಾಮಾಂ ।
ಸಂರಕ್ಷ ದೀನಜನತೋಷ ಕುಮಾರಯೋಗಿನ್ ॥ ೫ ॥

ಶ್ರೀಮತ್ಪಾವನ ಬಬ್ಬುಲೇಶ್ವರಪುರೀಪಟ್ಟಾಧಿಪೇನೋದಿತ ।
ಪಂಚಸ್ತೋತ್ರಮಭೀಷ್ಟರು ಪಠತಿಯಃಪ್ರತ್ಯೂಷಕಾಲೇ ನರಃ ॥
ಚಂದ್ರಾರ್ಕಾನಲಲೋಚನಸ್ಯ ನಗರೀಂಕ್ಷಿಪ್ರಂಸ ಸಂಪ್ರಾಪ್ನುವನ್ ।
ತತ್ರಸ್ಥಪ್ರಮಥಾಧಿನಾಥನಿವಹೇ ಶ್ರೀಶಂಭುನಾಭಣ್ಯತೆ ॥ ೬ ॥



# ಹಾನಗಲ್ಲ ಕುಮಾರಸ್ವಾಮ್ಯಷ್ಟಕಂ

ಶ್ರೀಮನ್ನಿತ್ಯನಿರಂಜನಂ ಪ್ರಭುಗುರೋತ್ತಂಸಾನ್ವಯಾಬ್ಧೇರ್ವಿಧುಂ ।
ಯೋಗೇನೈವ ನಿರಂತರಂ ನಿಜವಪುಃ ಕಾರ್ಶ್ಯಂ ವಹಂತಂ ಸದಾ ॥
ಧರ್ಮಾಧರ್ಮ ವಿಚಾರಣೋತ್ಸುಕತಯಾ ಭೂಮ್ಯಾಮಟಂತಂ
ಮುದಾ ।
ವೈರಾಟಾಖ್ಯಪುರಿಸ್ಥಿತಂ ಗುರು ಕುಮಾರೇಶಂ ಭಜೇ ಸಾದರಂ॥ ೧ ॥

ದೇದೀಪ್ಯದ್ವರ ಜಂಗಮಾದಿಮಹತಾಮಾಚಾರಸಂಸಿದ್ಧಯೇ ।
ಮಾಂಡವ್ಯಾಖ್ಯಪುರೇ ಮಹೇಶ್ವರ ಮಹಾದೇವೇನ ಸಂಸ್ಥಾಪಿತಂ ।
ಸದ್ಭಕ್ತ್ಯಾ ಶಿವಯೋಗಮಂದಿರವರಂ ಸಂಸ್ಥಾಪಯಂತಂ ಭುವಿ ।
ವೈರಾಟಾಖ್ಯಪುರಿಸ್ಥಿತಂ ಗುರುಕುಮಾರೇಶಂ ಭಜೇಸಾದರಂ ॥ ೨ ॥

ನೈಸರ್ಗೇಣ ಜಿತಾನಿಮಿತ್ತಪರಿಪಂಥಿಸ್ಕಂಧಕಾರ್ಯಾವಹಂ ।
ಶ್ರೀಮದ್ಭಾಸುರ ವೀರಶೈವ ಮತಪಾಥೋಜಾತ ಬಾಲಾರುಣಂ ।
ಸರ್ವಂನಶ್ವರಮಿತ್ಯವೇತ್ಯ ಸತತಂ ಧ್ಯಾಯಂತಮೀಶಂಹೃದಿ ।
ವೈರಾಟಾಖ್ಯಪುರಿಸ್ಥಿತಂ ಗುರುಕುಮಾರೇಶಂ ಭಜೇಸಾದರಂ ॥ ೩ ॥

ಯೋಷಿತ್‌ಸಂಗವಿಹೀನಮಪ್ಯವಿರತಂ ಭಕ್ತ್ಯಂಗನಾಲಿಂಗಿತಂ ।
ಮುಕ್ತಿಶ್ರೀಪ್ರಮದಾವಿನೋದ ವಿವಶೀಭೂತಾಂತರಂಗಂಸದಾ ।
ಆತ್ಮಾನಾತ್ಮ ವಿಚಾರ ತತ್ಪರಧಿಯಂ ವಿದ್ವಜ್ಜನೈರಾವೃತಂ ।
ವೈರಾಟಾಖ್ಯಪುರಿಸ್ಥಿತಂ ಗುರುಕುಮಾರೇಶಂ ಭಜೇಸಾದರಂ ॥ ೪ ॥

ಶ್ರೀವೈರಾಟಪುರಸ್ಥಹೃದ್ಯನಿಖಿಲೈಶ್ವರ್ಯಾಭಿರಾಮಂಮತಂ ।
ಸಂಪ್ರತ್ಯೇವ ವಿಹಾಯಲೋಕಮನಘಂ ಕರ್ತುಂರ ಚರಂತಂ ಭಾವಿ ।
ಉದ್ಯದ್ಬ್ರಹ್ಮಮಹಃಸಮೀಕೃತ ಸಹಸ್ರಾದಿತ್ಯಗಾತ್ರಪ್ರಭಂ ।
ವೈರಾಟಾಖ್ಯಪುರಿಸ್ಥಿತಂ ಗುರುಕುಮಾರೇಶಂ ಭಜೇಸಾದರಂ ॥ ೫ ॥

ರೂಪಸ್ಪರ್ಶರಸಾದಿಹೇಯ ವಿಷಯಾರಣ್ಯೇಷುಸಂಚಾರಿಣಃ ।
ನೇತ್ರಾದೀಂದ್ರಿಯ ಮತ್ತಕುಂಜರವರಾನ್ ಮೋಕ್ಷಾಂಬುಜೋತ್ಪಾಟಕಾನ್ ।
ಯಃಪ್ರಜ್ಞಾನಘನಾಂಕುಶೇನವಿವಶೀಭೂತಾಂಸ್ತತಾನಾಂಜಸಾ ।
ವೈರಾಟಾಖ್ಯಪುರಿಸ್ಥಿತಂ ಗುರುಕುಮಾರೇಶಂ ಭಜೇಸಾದರಂ ॥ ೬ ॥

ಲೋಕೇಭಕ್ತಿಮತಾಂ ಪುರಾತನಸದಾಚಾರ ಪ್ರತಿಷ್ಠಾಂಪರಾಂ ।
ಪ್ರಾಪ್ತಾನಾಂ ಗುರುಲಿಂಗಜಂಗಮಕೃತೆ ಸರ್ವಸ್ವದಾನಾಂ ಮುದಾ ।
ತತ್ತದ್ವಾಂಛಿತಪೂರಣಾಯ ಸತತಂ ಸಂಚಾರಶೀಲಂಪರಂ ।
ವೈರಾಟಾಖ್ಯಪುರಿಸ್ಥಿತಂ ಗುರುಕುಮಾರೇಶಂ ಭಜೇಸಾದರಂ ॥ ೭ ॥

ಭಸ್ಮೋದ್ಧೂಲಿತಫಾಲದೇಶಮನಘಂ ರುದ್ರಾಕ್ಷಮಾಲಾವೃತಂ ।
ಸದ್ಭಿಃಸಾದರಪೂಜಿತಂ ಶಿವಕಥಾಲಾಪೇನಕಾಲಾಪಹಂ ।
ಪುಣ್ಯಶ್ಲೋಕವಿನಿರ್ಜಿತೌಷಧಿಪತಿಂ ಕಾರುಣ್ಯರತ್ನಾಕರಂ ।
ವೈರಾಟಾಖ್ಯಪುರಿಸ್ಥಿತಂ ಗುರುಕುಮಾರೇಶಂ ಭಜೇಸಾದರಂ ॥ ೮ ॥

ಸುಬಬಲೇಶ್ವರನಾಮಕಪತ್ತನೇವರಮಠಾಧಿಪಶಾಂತಬುಧೌವ್ರಜಃ ।
ರಚಿತಮಷ್ಟಕಮಿಷ್ಟದಮಾದರಾತ್‌ಪಠತಿಯೋಽನುದಿನಂ ರಮತೇಽಮೃತೇ ॥

# ಶ್ರೀ ಬಬಲೇಶ್ವರ ಗುರುಪಾದಸ್ವಾಮ್ಯಷ್ಟಕಂ



( ಉಪಜಾತಿವೃತ್ತ )

ಶ್ರೀಶುಭ್ರಭಸ್ಮಾಂಕಿತಫಾಲದೇಶಂ ।
ಶ್ರೀಪುತ್ರಮತ್ತೇಭ ಮಹಾಮೃಗೇಂದ್ರಂ ॥
ಶ್ರೀಕಾಂತನೇತ್ರಾರ್ಜಿತಪಾದರೂಪಂ ।
ಶ್ರೀದಂ ಭಜೇಽಹಂ ಗುರುಪಾದದೇವಂ ॥ ೧ ॥

ಸದ್ಭಕ್ತಹೃತ್ಪದ್ಮ ವಿಲೋಲಭೃಂಗಂ ।
ಸದ್ಭಕ್ತಿ ಕಾಂತಾ ಸುವಶಾಂತರಂಗಂ ॥
ಸನ್ಮುಕ್ತಿಯೋಷಿನ್ಮಣಿ ನಿತ್ಯ ಸಂಗಂ ।
ಶ್ರೀದಂ ಭಜೇಹಂ ಗುರುಪಾದದೇವಂ ॥ ೨ ॥

ರುದ್ರಾಕ್ಷಮಾಲಾ ಪರಿಭೂಷಿತಾಂಗಂ ।
ಛಿದ್ರೀಕೃತಾಘಾದ್ರಿಮುದಾರ ಚಿತ್ತಂ ॥
ಭದ್ರಾಕೃತಿಂ ಬಂಧನಮೋಕ್ಷಹೇತುಂ ।
ಶ್ರೀದಂಭಜೇಽಹಂ ಗುರುಪಾದದೇವಂ ॥ ೩ ॥

ಕಾಷಾಯಕಂಥಾಪರಿಶೋಭಿತಾಂಗಂ ।
ದಾಕ್ಷಾಯಣೀವಲ್ಲಭಹರ್ಷಪಾತ್ರಂ ॥
ಋಕ್ಷಾಧಿನಾಥಾರ್ಜುನ ಪೂರ್ಣಕೀರ್ತಿಂ ।
ಶ್ರೀದಂಭಜೇಹಂ ಗುರುಪಾದದೇವಂ ॥ ೪ ॥

ಪ್ರೇಮಾರ್ದ್ರ ಚಿತ್ತಂ ಕರುಣಾಸಮುದ್ರಂ ।
ವ್ಯೋಮಾಕೃತಿಂ ಯೋಗಿಮನೋನಿವಾಸಂ ॥
ಕಾಮಾದಿಷಡ್ವೈರಿಗಜೇಂದ್ರಸಿಂಹಂ ।
ಶ್ರೀದಂಭಜೇಽಹಂ ಗುರುಪಾದದೇವಂ ॥ ೫ ॥

ಭಕ್ತಿಪ್ರಿಯಂಯೋಗನಿರುದ್ಧ ಚಿತ್ತಂ ।
ಶುಕ್ತಿಪ್ರಭಾಪಾಂಡುರದಂತ ಪಂಕ್ತಿಂ ॥
ಶಕ್ತ್ಯನ್ವಿತಾದ್ವೈತಮತಾಬ್ಧಿ ಚಂದ್ರಂ ।
ಶ್ರೀದಂಭಜೇಽಹಂ ಗುರುಪಾದದೇವಂ ॥ ೬ ॥

ವೈಕುಂಠಮುಖ್ಯಾಮರ ವಂದ್ಯಪಾದಂ ।
ನೋತ್ಕಂಠಮಷ್ಟಾವರಣೇಽನಿಶಂಚ ॥
ಶ್ರೀಕಂಠವಕ್ತ್ರೋದ್ಭವ ರೇಣುಗೋತ್ರಂ ।
ಶ್ರೀದಂಭಜೇಽಹಂ ಗುರುಪಾದದೇವಂ ॥ ೭ ॥

ಜಾಮೀಕರಾದೀಪ್ಸಿತವಸ್ತು ಜಾತಂ ।
ಪ್ರೇಮಾಭಿರಾಮೇಣ ಹೃದಾಮತಸ್ಥಂ ॥
ಕಾಮಾರಿತೋಷಾಯ ದೌಪರಂಯಃ ।
ಶ್ರೀದಂಭಜೇಹಂ ಗುರುಪಾದದೇವಂ ॥ ೮ ॥

ಶ್ರೀಬಬ್ಬುಲೇಶ್ವರಪುರಸ್ಥಮಠಸ್ಥಿತೇನ ।
ಪಟ್ಟಾಧಿಪೇನ ರಚಿತಾಷ್ಟಕಮಿಷ್ಟದಂಯೇ ॥
ಪ್ರಾತಃಪಠಂತಿ ಮನಸಾಭುವಿನಿತ್ಯ ಸೌಖ್ಯ ।
ಮಂತೇಚಯಾಂತಿ ಶಿವಭಾಸುರಪಾದಪದ್ಮಂ ॥ ೯ ॥

# ಜನಪದ ಗೀತೆಗಳು

## ಬಬಲೇಶ್ವರ

ಹಲಗಣೀ ಹಣಮಪ್ಪ ಹಲಗಣೀಗೆ ಒಪ್ಯಾನ ಮಡ್ಡೀಗೊಪ್ಯಾನ ಬಸವಣ್ಣ
ಬಬಲೇಸುರದ ಬಾಜೇರ ಕೊಪ್ಯಾನ ಸಿದ್ದರಾಮ

## ಈರನಗೌಡ

ಹಾಸೂ ಹಾಸುಣಿಕಿ ಬಿಟ್ಟ ಬೀಸೂ ಚೌರನ ಬಿಟ್ಟ ಮಂಗಳಾರ ಮದ್ದಿಣಕ ಮನಿಬಿಟ್ಟ
ಈರನಗೌಡ ಸತಿಯ ಪಾರ್ವತಿಯ ಕೈಬಿಟ್ಟ

ಊರಾಗ ಗೌಡಿಲ್ಲ ಚೌಡ್ಯಾಗ ಸಿರಿನಿಲ್ಲ ಪೌಗಾದಾಗ ಕುದರಿ ತಡೀನಿಲ್ಲ
ಈರನಗೌಡ ಹೊರಟಾನ ಶಿವನ ಸದರೀಗಿ

## ಬಸವನಗೌಡ

ಕೂಡ್ರೂ ಖುರ್ಚಿನಬಿಟ್ಟು ಮಲಗೂ ಮಂಚನ ಬಿಟ್ಟು ಮಡದೀ ನೀಲಮ್ಮ ಕೈ ಬಿಟ್ಟ
ಬಸವನಗೌಡಾ ಬುಧವಾರ ಮಧ್ಯಾಣಕ ಮನಿಬಿಟ್ಟ

## ಹಿರೇಮಠ

ಅಣ ತಮ್ಮರು ಕೂಡಿ ನಿನ್ನೀ ಗುಡ್ಡಕೆ ಹೋಗಿ ಚನ್ನಂಗಿ ಬಿದರ ಸವರ್‍ಯಾರ
ಗುರುಪಾದೇಶ್ವರ ಸದರಿಗೊಪ್ಯಾವ ಆ ಬಿದರ

ನಮ್ಮೂರ ಮಠದಾಗ ನಾಕಕಾಲಿನ ಮಂಚ ನಾಗರ ದಾಂವ ತೆಲಿಗುಂಬ
ಗುರುಪಾದ ಮುತ್ಯಾ ಹ್ಯಾಂಗರೆ ಕಳೆದ್ಯೊ ಸೊಪನಿದ್ದಿ

ಎಲ್ಲೂರ ಮಠಗೋಳ ಕಲ್ಲಲಿ ಮುಗದಾವ ಮತ್ತನೀ ನಮ್ಮೂರ ಪರಮಠ
ಗುರುಪಾದೇಶ ಮಲ್ಲೀಗಿ ಹೂವಿಲಿ ಮುಗದಾವ

ಊರ ಹೊರಗಿನ ಮಠ ಯಾರ ಕಟ್ಟಿಸ್ಯಾರ ಕಡಮನೀಗೌಡ ಬಸಗೌಡ
ಕಟ್ಟಿಸಿದ ಮಠದಾಗ ಶಾಂತವೀರಸ್ವಾಮಿ ಇರತಾರ

## ಗುರುಪಾದ ಶಿವಯೋಗಿ

ಕ್ಯಾವಿಯ ಉಟ್ಟಾರ ಕ್ಯಾವಿಯ ಹೊತ್ತಾರ ಮಾವಿನ ಮರಕ ಮಲಗ್ಯಾರ
ಗುರುಪಾದೇಶ್ವರ ಮಾಯ ನಾಗ್ಯಾರ ಮಠದಾಗ

ಆಕಾಶದ ಅಡ್ಡಣಗಿ ಭೂಮಿ ತೂಕಿನ ಗಂಟಿ ತಂದಿ ಗುರುಪಾದೇಶನ ಶಿವಪೂಜಿ
ನಡೆವಾಗ ಕೈಲಾಸದ ಜಾಂಗಟಿ ಬಡಿದಾವ

ಬೆಳ್ಳನ್ನ ಕಾಲೀಗಿ ಬೆಳ್ಳೀಯ ಆಂವೀಗಿ ಮೆಲ್ಲಕ ಮಠವ ಇಳಿದಾರ
ಗುರುಪಾದಯೋಗಿ ಬೆಳ್ಳೀಯ ಜಂಗ ನುಡಿಸ್ಯಾರ

ಶ್ಯಾಂವಂತಿಗ್ಹೂವಿನ ಶಲ್ಲೆ ಮಲ್ಲಿಗ್ಹೂವಿನ ಹಾಸಿಗಿ ಜೋಡ ಜುಂಜುರಗಿ ತಲೆಗುಂಬ
ಇಟಗೊಂಡು ಶಾಂತ ನಾಗ್ಯಾರ ಗುರುಪಾದೇಶ್ವರ

ಹೊತ್ತು ಮುಳಗಿದರೇನ ಕತ್ತಲಾದರೇನ ತಂಗೀ ನಿನ್ನ ಮಠಕ ಬರುವೇನ
ಗುರುಪಾದೇಶ ಮುತ್ತಿನ ಬಾಗಲಾ ತರದೀಡ

ಬರತನಂತ ಹೇಳಿದ್ದ ಇರತಾರೋ ಇಲ್ಲಂದೆ ಕೊಡ ತಾರಿಲ್ಲಂದೆ ಗುರು ಬೋಧೆ
ಗುರುಪಾದ ಮುತ್ಯಾ ಇರ ತಾರಿಲ್ಲಂದೆ ಮಠದಾಗ

ನಿಂಗ ನಿಂಗವೆಂದ ತಿಂಗಳನಾ ಹುಡಿಕೀನ್ನಿ ನಿಂಗನನಗೆಲ್ಲಿ ಸಿಗಬೇಕ
ಗುರುಪಾದಯೋಗಿ ಬಂಗಾರ ಭರಣ್ಯಾಗ ಅಡಗ್ಯಾನ

ಎದುರಿಗೆ ಇರುವದು ಇದು ಯಾರ ಅಂಗೆವ್ವ ಹದಿನಾರ ಗುಂಡಿ ಕಸಿಗೋಳ
ಗುರುಪಾದ ಯೋಗಿ ಮಧ್ಯಾನ್ಹಕ ತೊಡುವ ಮಡಿ ಅಂಗೆ

ನಾನನ್ನ ಗುರುವಿಗೆ ಮಾಯದ ಮಗಳಾದೆ ಪಾದಕ ಪದ್ಮಾದ ಹವಳಾದೆ
ಗುರುಪಾದಯೋಗಿ ನಿಮ ಪೂಜೆದ ಹೊತ್ತಿಗೆ ಮಡಿವಾದೆ

ಕಟದ ಕಲ್ಲವ ಚೆಲುವ ಮಠದ ಬಾಗಿಲ ಚೆಲುವ ಮಠದಾಗ ನೀ ಇರುವ ಗುರು ಚೆಲುವ
ಗುರುಪಾದಯೋಗಿ ದುದ್ವಾರೊವಾಗದ ನೀಚೆಲುವ

ಅಚ್ಚಮಲ್ಲಿಗೆ ನಾತ ಬಿಚ್ಚ ಕ್ಯಾವಿಯ ನಾತ ಮತ್ತ್ಯಾತರನಾತ ಮಠದಾಗ
ಗುರುಪಾದಯೋಗಿ ಬಿಚ್ಚಿ ಮಡಿಗಾಳ ಉಡತಾರ

ಗರತಿಗೆ ಗಂಡನಾಶೆ ಮರು ತೆಕೆ ಮಳಿನಾಶೆ ಶೀಲನೀವಂತರಿಗೆ ಶಿವನಾಶೆ
ಗುರುಪಾದಯೋಗಿ ನಿಮ್ಮಾಶೆ ನಮಗೆ ಅನಗಾಲ

ವಿಭೂತಿ ಬಂಗಾರ ವಿಭೂತಿ ಶ್ರುಂಗಾರ ವಿಭೂತಿ ನೀನಮಗ ಘನ ವಸ್ತ
ಮಠದಾಗಿರುವ ಗುರುಪಾದಯೋಗಿ ನಮ್ಮ ಮನಿಗುರುವ

## ಶ್ರೀ ಶಾಂತವೀರ ಶಿವಯೋಗಿ

ಮಲ್ಲಿಗಿ ಹೂವಿನ ಹಾರ ಪಾವಡದಾಗ ಕಟಗೊಂಡು ಮೆಲ್ಲಕ ಮಠವ ಇಳಿದಾರ
ಶಾಂತವೀರಸ್ವಾಮಿ ಗದ್ದಿಗೆ ಹೋಗಿ ಬರತಾರ

ಕ್ಯಾಂವೀ ಧೋತರ ಉಟ್ಟು ಮೆಲ್ಕುಪನಿಯ ತೊಟ್ಟು ಮೆಲ್ಲಕ ಮೆಟ್ಟಲ ಇಳಿದಾರ
ಶಾಂತವೀರ ಯೋಗಿ ಹರಳಯ್ಯ ಗ್ಹೋಗಿ ಬರತಾರ

ಕೆಂಪನ್ನ ಪಾದೀಗಿ ತಂತಿ ಜೋಡಿನ ಆವಿಗಿ ತಂಪ್ಹೊತ್ತಿನ ಹಾದಿ ಹಿಡಿದಾರ
ಶಾಂತವೀರಸ್ವಾಮಿ ಹರಳಯ್ಯಗ ಹೋಗಿ ಬರತಾರ

ಸಿಟ್ಟಿನ ಶಾಂತವೀರಸ್ವಾಮಿ ಬಿಟ್ಟ್ಯಾರ ಬಬಲೇಸೂರ ಏನು ಮಾಡ್ಯಾರ ಹರಳಯ್ಯ
ಗುಂಡದಾಗ ಭಕ್ತರು ಕಟ್ಟೀಸಿ ಕೊಟ್ಟ್ಯಾರ ಕೈಲಾಸ

ನನ್ಹೂರ ಅಪಗೋಳ ದೀಪದ ಕುಡಿಗೋಳ ಕಂಟಿ ನೀಗೋಪವರ ಕೊರಳಾಗ
ಶಾಂತವೀರಯೋಗಿ ಪರಳಯ್ಯ ಗೋಗಿ ಬರತಾರ

ಹೋಗುವ ಶರಣರಿಗೆ ಸಾಷ್ಟಾಂಗ ಹಾಕೀನ ರುದ್ರಾಕ್ಷಿ ನೆರಳ ನನಮ್ಯಾಲ
ಶಾಂತವೀರಸ್ವಾಮಿ ಉದ್ಧಾರ ಆದಿವಿರಿ ನಿಮ್ಮಿಂದ

ನಾಕು ಕಾಲಿನ ಮಂಚ ಲ್ಯಾಕಿದಡಿ ಧೋತರ ಯಾಕ ನನ ಶರಣಾರ ಮನಗ್ಯಾರ
ಶಾಂತವೀರಯೋಗಿ ಶಾಸ್ತ್ರವ ಹೇಳಿ ದಣದಾರ

# ನಮಿಪೆ ಅರಿವೆ

ನಮಿಪೆ ಅರಿವೆ, ನಮಿಪೆ ಗುರುವೆ ನಮಿಪೆ ನಿರುಪಮಾ
ನಮಿಪೆ ನುತಿಸಿ ಶಾಂತವೀರ ಶ್ರೀ ಗುರೂತ್ತಮಾ

ಅಲ್ಲಿ ಇಲ್ಲಿ ಹುಡುಕಿ ಕಾಣದಾಗಿ ಕಡೆಯೊಳು
ಮನವು ನಿಲ್ವ ನೆಲೆಯ ಪಡೆದೆ ನಿಮ್ಮ ಪದದೊಳು

ತವ ಪದಾನತಂಗೆ ನಿಮ್ಮ ಕರುಣೆ ಸಿದ್ಧವು
ತನಗೆ ತಾನೆ ಮುಂದೆ ಬರ್ಪುದಭಯ ಹಸ್ತವು

ಭಕ್ತ ಜನರ ಬಾಳು ಹಸನ ಇರಲಿ ಎನ್ನುತ
ಸೂಕ್ತ ನಿಲವು ನಿಮ್ಮದದಕೆ ಚಿಂತೆ ಸಂತತ

ಕೋಪ ತಾಪವಿರಿದ ಮನಕೆ ನಿಮ್ಮ ವಾಣಿಯೇ
ಶಾಂತಿ ಸುಧೆಯು ಶಾಂತವೀರ ಶಾಂತ ಮೂರ್ತಿಯೇ

ಹಸಿದ ತಲೆಗೆ ಎದೆಯ ಸುಧೆಯ ನಿರೆವ ರೀತಿಯು
ಒಸೆದು ಒಲಿದು ನಲಿಯುವಂತೆ ನಿಮ್ಮ ಸಮತೆಯು

ನಿಮ್ಮ ಮಾತೆ ಮಾತು ಬಗೆಯ ಬುಗ್ಗೆ ಏಳಲು
ಸುಖದ ಗಾಳಿ ಸುಳಿದು ಮನದ ಮೊಗ್ಗೆ ಅರಳಲು

ನಿಮ್ಮ ನುಡಿಯು ಹೃದಯ ವೀಣೆಯನ್ನು ಮಿಡಿವುದು
ನಿಮ್ಮ ಹಾಸ್ಯ ಚುಟಕಿಯಿಂದ ಮನವು ಕುಣಿವುದು

ನಿಮ್ಮ ಪಾದ ಸ್ಪರ್ಶ ಪೆಂಪು ಸೊಂಪನೀವುದು
ನಿಮ್ಮ ಪ್ರೇಮ ಹಸ್ತ ಮೈಗೆ ಪುಳುಕನೀವುದು

ಒಮ್ಮೆ ಹೃತ್ಕವಾಟ ತೆರೆದು ಬೆಳಕನಿಟ್ಟಿರಿ
ಬ್ರಹ್ಮಶಕ್ತಿಯುಕ್ತವಾದ ಮಾಟ ಮೆರೆದಿರಿ

ವಿಶ್ವಭಾವದಿಂದ ನೀವೆ ವಿಶ್ವವಾದಿರಿ
ವಿಶ್ವದಣುವು ನಾನು ಏನು ನಿಮಗೆ ಈಯಲಿ ?

ಚರಿಪ ಚರಣವಿಲ್ಲವೆಂದು ನಿಮಗೆ ಕೊರತೆಯೇ ?
ನಿರುತ ಭಕ್ತಹೃದಯಗಳಲಿ ಚರಿಸುತಿಲ್ಲವೇ ?

ಹೊರಗೆ ನೋಳ್ಪುದಿಲ್ಲವಾದಡೇನು? ವಿಶ್ವವ
ಕಾಣಲೊಳಗೆ ತಾಳ್ದಿರುವಿರಿ ದಿವ್ಯ ಚಕ್ಷುವ

ಕ್ರೂರ ಕೀಟ ಕೊರೆದೊಡದಕೆಮಧುವನೀಯುವ
ಕುಸುಮದಂಥ ಮೃದುಲ ಹೃದಯ ಗುರುವೆ ನಿಮ್ಮಯ

ಎನಿತು ಎನಿತು ಪೊಗಳ್ದೊಡಿರದು ಮನಕೆ ತೃಪ್ತಿಯು
ಅರಿದು ಪೊಗಳ್ವೊಡದಕೆ ಸಾಲದೆನ್ನ ಬುದ್ಧಿಯು

ಅಡಿಗೆ ಅಡಿಗೆ ನಿಮ್ಮ ಅಡಿಯ ನೆನಹು ಮೂಡಲಿ
ನಡೆಗೆ ನಿಮ್ಮ ಕರುಣೆ ಎನಗೆ ದಾರಿ ತೋರಲಿ

ನಮಿಪೆ ಗುರುವೆ ನಮಿಪೆ ಅರಿವೆ ನಮಿಪೆ ನಿರುಪಮಾ,
ನಮಿಪೆ ನುತಿಸಿ, ಶಾಂತವೀರ ಶ್ರೀ ಗುರೂತ್ತಮಾ

—ಲಕ್ಕಪ್ಪ ಅ. ಶಿರಹಟ್ಟಿ

# ಮಂಗಳಾರತಿ

೧

ಮಲ್ಲಿಗೆ ಹೂವಿನ ನಲ್ಮೆಯದಾರುತಿ ಎಲ್ಲರು ಬೆಳಗಿರೆ
ಒಲ್ಲದ ಗುರುವಿನ ಒಳ್ಳೆಯ ಕರುಣವನಿಲ್ಲದೆ ಪಡೆಯಿರೆ ॥ ಪ ॥

ಅರುವಿನ ಕುರುಹನು ಗುರುತಿಸಲಾರದೆ ಮರೆತಿಹ ಮನುಜರಿಗೆ
ಕರುಣದಿ ಕರೆಯುತ ಬರೆಯು ಪ್ರಭೆಯನು ಮರಣವ ಗೆಲದವಗೆ ॥ ೧ ॥

ಅವಗುಣವಿಲ್ಲದ ಶಿವಗುಣ ಬಲ್ಲಿದ ಭವಹರ ದೇವನಿಗೆ
ನವನವ ವಿದ್ಯೆಯ ಅವನಿಯ ಜನರಿಗೆ ಕಿವಿಯೊಳು ಪೇಳಿದವಗೆ ॥ ೨ ॥

ವಸುಧಿಯೋಳ್ ಬಬಲೇಶ್ವರ ಅಸಮ ಸದ್ಭಕ್ತರ ವಿಷಮತೆ ಕಳೆದವಗೆ
ಪಶುಪತಿ ಪಾದವ ಹಸನಾಗಿ ಬೆಸಸಿದ ಗುರುಪಾದೇಶನಿಗೆ ॥ ೩ ॥

—ಶಿರಿಮಂತವ್ವ ಕೆಂಚಣ್ಣವರ

೨

ಜಯ ಮಂಗಲವಾಗಲಿ ಲೋಕಕ್ಕೆಲ್ಲ ಶುಭಮಂಗಲವಾಗಲಿ ॥ ಪ ॥

ಜಗವಿದೆಲ್ಲವು ಜಗುಲಿಯಾಗಲಿ ಬಗೆಯ ಗಿಡಗಳು ಕಂಬವಾಗಲಿ
ಮಿಗಿಲಸ್ವರ್ಗವು ಗೋವುರಾಗಲಿ ತೆಗೆದ ಬಾಗಿಲು ವೀಣೆಗಳಾಗಲಿ ॥ ೧ ॥

ಮಂದಮಾರುತ ಚೌಡಿಯಾಗಲಿ ಅಂದ ಬೈಲು ನಗಾರಿ ಯಾಗಲಿ
ಚಂದ್ರ ಸೂರ್ಯರು ದೀಪವಾಗಲಿ ಚಂದಪರ್ವತ ಪಾಲ್ಕಿಯಾಗಲಿ ॥ ೨ ॥

ಕಾನನವು ಹೂಬುಟ್ಟಿಯಾಗಲಿ ಕಾಣ ಲತೆಗಳು ಸರವ ಕಟ್ಟಲಿ
ಭೂ ನದಿ ಜಲ ತೀರ್ಥವಾಗಲಿ ಮೋಣು ಹೂ ಹುಡಿದೂಪವಾಗಲಿ ॥ ೩ ॥

ಅಂಗವಿಸಿ ಸಾಗರದ ಶಬ್ದವು ರಂಗನಾದದ ವಾದ್ಯವಾಗಲಿ
ಮಂಗಹಂಗವೂ ಭೃಂಗ ಬಳಗವು ಮಂಗಳಾರತಿ ಪಾಡಲಿ ॥ ೪ ॥

ಎಸವ ಫಲ ನೈವೇದ್ಯವಾಗಲಿ ಮಿಸುಪ ಮನ ಪೂಜಾರಿಯಾಗಲಿ
ರಸಿಕ ಬ್ರಹ್ಮಜ್ಞಾನಿ ಯಾಗಿಹ ಗುರುಪಾದ ಯೋಗಿಯು ದೇವರಾಗಲಿ ॥ ೫ ॥

ಜಯಮಂಗಲವಾಗಲಿ ಲೋಕಕ್ಕೆಲ್ಲಾ ಶುಭಮಂಗಲವಾಗಲಿ

—ಸೌ. ಲಕ್ಷ್ಮೀದೇವಿ ಕುಮಟಗಿ



“ನಾವು ಈ ಕನ್ನಡ ನಾಡನ್ನೆಲ್ಲ ಸುತ್ತಿ ಸುಳಿದಿದ್ದೇವೆ. ಆದರೆ ಶ್ರೀ ಶಾಂತವೀರ ಶಿವಾಚಾರ್ಯರಷ್ಟು ಸುಸಂಸ್ಕೃತ ಮತ್ತು ಸಾತಿಶಯ ಜನಪ್ರಿಯ ಗುರುದೇವನನ್ನು ಕಾಣಲಿಲ್ಲ. ಈ ಇಪ್ಪತ್ತನೆಯ ಶತಮಾನದಲ್ಲಿ! ಹೆಸರಿಗೆ ತಕ್ಕಂತೆ ಅವರು ದಿಟಕ್ಕೂ ಈ ಶತಮಾನದ ಶಾಂತಿವೀರರೆ! ದಾಂತಿ ವೀರರೆ!! ಜನತೆಯ ಕ್ಷೇಮಕ್ಕಾಗಿ ಅವರಷ್ಟು ಹೃದಯವಂತರನ್ನು ಕಾಣಲು ಸಾಧ್ಯವಿಲ್ಲ. ಪರಹಿತಕ್ಕಾಗಿ ಅದೇನು ಸಹನೆ, ಅದೇನು ಶಾಂತಿ; ಅದೇನು ತ್ಯಾಗ! ನಮ್ಮ ಭಾವಪೂರ್ಣವಾದ ಮಾತಿನ ಸತ್ಯತೆಯನ್ನು ಸಾಕ್ಷಾತ್ಕರಿಸಿಕೊಳ್ಳಬೇಕಾದಲ್ಲಿ ಒಮ್ಮೆ ಬಬಲೇಶ್ವರಕ್ಕೆ ಹೋಗಿ ಅವರ ಪ್ರತ್ಯಕ್ಷ ದರ್ಶನ ಪಡೆಯಬೇಕು. ನಿಜಕ್ಕೂ ಅವರು ಆ ಊರಿನ ಹೃದಯ ಬಲೇಶ್ವರ! ಜನಪ್ರಿಯ ಬಲೇಶ್ವರ!! ಅವರ ಆ ಅತ್ಯಂತ ಕರುಣಾದ್ರ್ರ, ಹೃದಯ ಅದೊಂದು ಅಪೂರ್ವ ಜೀವಂತ ಲೋಹಕಾಂತ ಮಣಿ! ಮಹಂತ ಶಾಂತಿ ಚಿಂತಾಮಣಿ!!

ಅವರ ಬಳಿಗೆ ಬಂದವರು ಅದೆಷ್ಟೆ ಕಬ್ಬಿನದಂತಹ ಕಠಿಣ ಹೃದಯಿರಲಿ. ಅವರನ್ನು ತಮ್ಮ ಸೂಜಿಗಲ್ಲಿನಂತಹ ಹೃದಯದಿಂದ ತಳುವದೆ ಆಕರ್ಷಿಸುತ್ತಾರೆ. ಬಂದವರು ಸೂಕ್ಷ್ಮಗ್ರಾಹಿಗಳಾಗಿದ್ದರೆ ಅವರನ್ನು ಅತ್ಯಂತ ಉತ್ತಮ ವಿಚಾರ ಭೂಮಿಕೆಯಲ್ಲಿ ತಂದು ನಿಲ್ಲಿಸುತ್ತಾರೆ. ಸಾತಿಶಯ ಶ್ರದ್ಧೆಯನ್ನು, ಸಹಾನುಭೂತಿಯನ್ನು ಹುಟ್ಟಿಸುತ್ತಾರೆ. ಈ ದಿಸೆಯಲ್ಲಿ ಅವರು ದಿಟಕ್ಕೂ ಗುರು ಹೃದಯರೆ! ಗುರು ಬುದ್ಧಿ, ಗುರುಭಾವವುಳ್ಳವರೆ!! ಹಣವಿಲ್ಲದೆ ನೆಣವಿಲ್ಲದೆ ಅಪಾರ ಕರುಣೆಯನ್ನು ಪಡೆಯಬೇಕಾದರೆ ಅವರ ಬಳಿಗೆ ಹೋಗಬೇಕು. ಬರೀ ಹೃದಯರು ಭರಿತ ಹೃದಯರಾಗದೆ ಹಿಂದಿರುಗರು......”

—ಡಾ. ಜ. ಚ. ನಿ.

---

## ಶ್ರೀ ಬಬಲೇಶ್ವರ ಶಿವಯೋಗಿಗಳ ಗ್ರಂಥ ಪ್ರಕಟನಾ ಸಮಿತಿ

ಆರ್. ಎಂ. ದೇಸಾಯಿ
ಪಾರ್ಲಿಮೆಂಟ ಸದಸ್ಯರು

ಡಾ|| ಸಿ. ಬಿ. ಪುರಾಣಿಕ
ಪ್ರಾಧ್ಯಾಪಕ, ಆಯುರ್ವೇದ ಕಾಲೇಜ

ಡಾ|| ಮುದ್ದಣ್ಣ
ಮೆಡಿಕಲ್ ಆಫೀಸರ, ಬೆಂಗಳೂರು

ಎಸ್. ಸಿ. ಮಿರ್ಜಿ
ಸಂಪಾದಕ, “ಉದಯ,” [illegible]

ಎಂ. ಸಿ. ಅಂಟಿನ
ನಿವೃತ್ತ ಚೀಫ್ ಎಂಜನಿಯರ, ಬೆಂಗಳೂರು

ಎಸ್. ಎಸ್. ಹಸಬಿ
ಪೋಲಿಸ್ ಅಸಿಸ್ಟೆಂಟ ಕಮಿಷನರ, ಬೆಂಗಳೂರು

ಕಲಕೋಟಿ
ನಿವೃತ್ತ ಸಾಯಿಲ್ ಕನ್‌ಸರ್ವೇಸನ್ ಆಫೀಸರ್.
ಬೆಂಗಳೂರು